# ಫಿರಂಗಿಯ ಪ್ರತಿಹಿಂಸೆ.

[ಪತ್ತೇದಾರಿ ಕಥೆ]




ಲೇಖಕ:

**ಭಿ. ಪ. ಕಾಳೆ,**

ಸಂ. ಶ್ರೀ ಶೇಷಾಚಲ ಗ್ರಂಥಮಾಲೆ,

ಆನಂದವನ



ಪ್ರಕಾಶಕ.

**ಮು. ಗು. ಕುಲಕರ್ಣಿ**

ಸಂಪಾದಕ ಸ. ಚ. ಆನಂದವನ.





೧೯೩೪

# ನಿವೇದನ.

ಕನ್ನಡಿಗರಲ್ಲಿ ಪತ್ತೆದಾರಿ ಕಥೆಗಳನ್ನೋದುವ ಕುತೂಹಲವು ಹೆಚ್ಚಾಗಿರುವದನ್ನರಿತು, ಒಂಗಾಲೀ ಭಾಷೆಯೊಳಗಿನ ಈ ಪುಸ್ತಕವನ್ನು ಕನ್ನಡಿಸಿರುವೆನು. ವಾಚಕರು ಹಂಸ-ಕ್ಷೀರ ನ್ಯಾಯದಂತೆ ಇದರೊಳಗಿನ ಗುಣದೋಷಗಳನ್ನರಿತು ಸ್ವೀಕರಿಸಬೇಕು. ಸದ್ಬೋಧ ಚಂದ್ರಿಕೆಯ ಸಂಪಾದಕರು ಈ ಕತೆಯನ್ನು ತಮ್ಮ ಪತ್ರಿಕೆಯಲ್ಲಿ ಪ್ರಕಟಿಸಿದ್ದಕ್ಕಾಗಿ ನಾನು ಅವರಿಗೆ ಚಿರ ಋಣಿಯಾಗಿರುವೆನು.

ಕನ್ನಡಿಗರ ಚಿರ ಪರಿಚಿತ,

—ಕಾಳೆ.



# ಅನುಕ್ರಮಣಿಕೆ.





# ಫಿರಂಗಿಯ ಪ್ರತಿಹಿಂಸೆ.

[ಪತ್ತೆದಾರೀ ಕಥೆ]



## ಪೂರ್ವವೃತ್ತ.



ಬಹು ದಿನಗಳ ಹಿಂದಿನ ಸಂಗತಿ. ರಾಬರ್ಟ ಬ್ಲೇಕನು ಅದು ವರೆಗೂ ಅಷ್ಟೊಂದು ಪ್ರಖ್ಯಾತ ಪತ್ತೆದಾರನಾಗಿರಲಿಲ್ಲ. ಉಳಿದ ಹತ್ತು ಜನ ಸಾಮಾನ್ಯ ಪತ್ತೆದಾರರಂತೆಯೇ ಆತನೂ ಒಬ್ಬನಾಗಿದ್ದನು. ಅದಕ್ಕೂ ಮೊದಲು ಸ್ವಲ್ಪ ದಿನಗಳ ಮುಂಚೆ ಸ್ಮಿತ್ಥನು ಬ್ಲೇಕನ ಆಶ್ರಯದಲ್ಲಿರಹತ್ತಿದ್ದು, ಪತ್ತೆದಾರಿಯ ಶಿಕ್ಷಣ ಪಡೆಯಲಿಕ್ಕೆ ಪ್ರಾರಂಭಿಸಿದ್ದನು. ಆಗ್ಗೆ ಇಂಗ್ಲಂಡದ ರಾಜನೈತಿಕಾಕಾಶವು ಮೋಡಗಳಿಂದ ಮುಸುಕಿರಲಿಲ್ಲ. ರಾಷ್ಟ್ರದಲ್ಲೆಲ್ಲ ಶಾಂತಿ-ಸುಖ-ಸೌಭಾಗ್ಯಗಳು ಸಂಪೂರ್ಣವಾಗಿ ನೆಲೆಗೊಂಡಿದ್ದವು. ಅದೇ ಕಾಲಕ್ಕೆ ನಮ್ಮ ರಾಬರ್ಟ ಬ್ಲೇಕನು ಒಂದು ಫೌಜದಾರೀ ಖಟ್ಲೆಯ ಪತ್ತೆಗಾಗಿ ಚೀನ ದೇಶಕ್ಕೆ ಹೋಗಿದ್ದನು ಅದೇ ಅವನು ಎಲ್ಲಕ್ಕೂ ಮೊದಲು ಪೌರ್ವಾತ್ಯ ದೇಶಗಳಲ್ಲಿ ಕಾಲಿಟ್ಟದ್ದು. ಪೌರ್ವಾತ್ಯರ ಪ್ರಾಕೃತಿಕ ವೈಚಿತ್ರ್ಯ ಮತ್ತು ವಿಶಿಷ್ಟತ್ವಗಳಿಂದ ಆತನ ಅಂತಃಕರಣವು ಕರಗಿ ಹೋಗಿತ್ತು. ಚೀನದೇಶದೊಳಗಿನ ಕ್ಯಾಂಟನ ಜಿಲ್ಲೆಯ ಯಾವ ಭಾಗದಲ್ಲಿ ಯುರೋಪಿಯನ್ನರ ವಸತಿಯಿದ್ದಿತೋ, ಆ ಭಾಗಕ್ಕೆ ಸಾಮಿಯೊನವೆಂದೆನ್ನುತ್ತಿದ್ದರು. ಬ್ಲೇಕನು ಯಾವ ಕೆಲಸಕ್ಕೆಂದು ಚೀನ ದೇಶಕ್ಕೆ ಪ್ರಯಾಣ ಬೆಳಸಿದ್ದನೋ, ಅದನ್ನು ಮುಗಿಸಿಕೊಂಡನಂತರ ಕಟ್ಟಕಡೆಗೆ ಅವನು ಸಾಮಿಯೊನಕ್ಕೆ ಹೋದನು; ಹಾಗು ಅಲ್ಲಿಯ ಕಲೋನಿಯಲ್ ಹೋಟಲಿನಲ್ಲಿ ವಾಸ ಮಾಡಿದನು. ಅಲ್ಲಿ ಎಷ್ಟೋ ದಿನಗಳಿದ್ದ ಮೇಲೆ ಒಂದು ದಿನ ಸಾಯಂಕಾಲದಲ್ಲಿ ಆತನು ಶುಭ್ರವಾದ ಉಡಿಗೆ-ತೊಡಿಗೆಗಳನ್ನು ಧರಿಸಿ, ತಲೆಗೆ ಹ್ಯಾಟನ್ನು ಹಾಕಿ, ಕೈಯಲ್ಲೊಂದು ಬೆತ್ತವನ್ನು ಹಿಡಕೊಂಡು ಅಡ್ಡಾಡಲಿಕ್ಕೆಂದು ಹೊರಹೊರಟನು.

ಸಾಪೂನವು ಒಂದು ದ್ವೀಪವಾಗಿದೆ. ಅಲ್ಲಿಂದ ಕ್ಯಾಂಟನ ಪಟ್ಟಣಕ್ಕೆ ಹೋಗಬೇಕಾದರೆ ಸೇತುವೆಯನ್ನು ದಾಟಬೇಕಾಗುವದು. ಬ್ಲೇಕನು ಆ ಸೇತುವೆಯನ್ನು ದಾಟಿ ಕ್ಯಾಂಟನ ನಗರವನ್ನು ಪ್ರವೇಶಿಸಿದನು. ಆ ಕ್ಯಾಂಟನ ಪಟ್ಟಣದಲ್ಲಿ ಜನವಸತಿಯು ಹೆಚ್ಚಾಗಿತ್ತು. ಅಲ್ಲಿಯ ಯಾನ ವಾಹನಗಳ ವೈಚಿತ್ರ್ಯ, ನರ ನಾರಿಯರ ಉಡಿಗೆ-ತೊಡಿಗೆಗಳ ತರಹ, ದಾರಿಯ ಎಡಬಲಗಳಲ್ಲಿಯ ನಿರ್ಮಾಣ ನೈಪುಣ್ಯ ಮಂದಿರ ಇವೆಲ್ಲವುಗಳು ಸಿನೇಮಾದೊಳಗಿನ ಚಿತ್ರಗಳಂತೆ ಆತನ ದೃಷ್ಟಿಯನ್ನಾಕರ್ಷಿಸಿದ್ದರಿಂದ ಅವನು ಬಹು ವಿಸ್ಮಯಗೊಂಡನು. ಪೌರ್ವಾತ್ಯರ ಪ್ರಾಚೀನತಮ ಸಭ್ಯತೆಯ ಲೀಲಾಕ್ಷೇತ್ರದಲ್ಲಿ ನಿಂತುಕೊಂಡು, ಹೆಜ್ಜೆ ಹೆಜ್ಜೆಗೂ ಪಾಶ್ಚಿಮಾತ್ಯ ಜಗತ್ತಿನ ಸಭ್ಯತೆಯ ಸಾಹಿತ್ಯಗಳ ಸಂಗಡ ಪೌರ್ವಾತ್ಯ ಸಭ್ಯತೆಯ ವಿಚಿತ್ರ ವಸ್ತು ಒಡವೆಗಳನ್ನು ಹೋಲಿಸಿ ಹೋಲಿಸಿ ನೋಡುತ್ತ ಆತನು ಮುಂದರಿದನು. ಆತನು ಎಷ್ಟೆಷ್ಟು ಮುಂದಕ್ಕೆ ಹೋದನೋ ಅಷ್ಟಷ್ಟು ಹೊಸ ಹೊಸ ವಿಸ್ಮಯಕಾರಕ ದೃಶ್ಯಗಳು ಅವನಿಗೆ ಕಾಣಿಸಿಕೊಂಡು ಅವನನ್ನು ಆಶ್ಚರ್ಯ ಚಕಿತನನ್ನಾಗಿ ಮಾಡಿದವು. ಹೋಗ ಹೋಗುತ್ತ ಅವನು ಅಸ್ಫುಟ ದನಿಯಿಂದ: ಇದೊಳ್ಳೇ ಆಶ್ಚರ್ಯಕಾರಕ ದೇಶವಾಗಿದೆ. ಇಲ್ಲಿಯ ವೈಚಿತ್ರ್ಯ ಮತ್ತು ವಿಪುಲ ಸಂಪತ್ತುಗಳನ್ನು ವರ್ಣಿಸುವದು ನನ್ನಿಂದಸಾಧ್ಯವಾಗಿದೆ, ಎಂದಂದನು. ಕೆಲ ಹೊತ್ತಿನ ಮೇಲೆ ಅವನ ಮನಸ್ಸಿನಲ್ಲಿ 'ಇದಾವದೂ ಸತ್ಯವಾದದ್ದಲ್ಲ. ನಾನು ಕನಸಿನಲ್ಲಿದ್ದು ಇದೊಂದು ಮೋಹಕರವಾದ ಕನಸು ನನಗೆ ಕಾಣಿಸುತ್ತಿರುವದು' ಎಂಬ ಆಭಾಸವುಂಟಾಯಿತು. ಬಾಲ್ಯ ಕಾಲದಲ್ಲಿ ಆತನು ಒಂದು ರಮ್ಯವಾದ ಉಪನ್ಯಾಸದೊಳಗಿನ ಯಾವ ವಿಚಿತ್ರ ಕಥೆಯನ್ನು ಕೇಳಿದ್ದನೋ, ಅದೇ ಕಥೆಯು ಆ ಉಪನ್ಯಾಸ ಲೋಕದಿಂದ ಹಾರಿ ಬಂದು, ಸತ್ಯ ಮತ್ತು ಕಾಲ್ಪನಿಕ ಇವುಗಳಲ್ಲಿಯ ಭೇದವನ್ನು ಅಡಗಿಸಿ ಬಿಟ್ಟಂತಾಗಿತ್ತು. ಪರಕ್ಷಣದಲ್ಲಿಯೇ ಆ ಸ್ವಪ್ನವು ಮಾಯವಾಗಿ ಕಠೋರ ಸತ್ಯದ ಬಿರುಸಾದ ಕಲ್ಲಿನ ಮೇಲೆ ಆತನನ್ನು ಬಲವಾಗಿ ಚೆಲ್ಲಿಕೊಟ್ಟಂತಾಗುತ್ತಿತ್ತು. ಹೀಗೆ ಇದನ್ನೆಲ್ಲ ಯೋಚಿಸುತ್ತ ಬ್ಲೇಕನು ಆ ಪಟ್ಟಣದ ಶ್ರೀಮಂತ ಜನರ ಓಣಿಗಳನ್ನು ದಾಟಿ, ಬಡವರ ವಸತಿಯ ಭಾಗವನ್ನು ಪ್ರವೇಶಿಸಿದನು.

ಆಗ ಸಾಯಂಕಾಲವಾಗಿತ್ತು. ಊರೊಳಗಿನ ರಾಜಮಾರ್ಗವು ಪ್ರಕಾಶಮಾನಗಳಾದ ದೀಪಗಳಿಂದ ಬೆಳಗಹತ್ತಿತ್ತು; ಆದರೆ ಆ ಬಡವರ ವಸತಿಯ ಕಡೆಗೆ ಅಂಥ ದೀಪಗಳ ಸಂಖ್ಯೆಯು ಅತ್ಯಲ್ಪವಾಗಿತ್ತು. ದೀಪದ ಕಂಬಗಳ ನಡುವಿನ ಅಂತರವಾದರೂ ಇರತಕ್ಕಷ್ಟಕ್ಕಿಂತ ಹೆಚ್ಚಾಗಿದ್ದಿತು. ಓಣಿಗಳು ಬಹು ದಟ್ಟವಾಗಿದ್ದು, ದೀಪೇರಿಗಳ ಅಭಾವದಿಂದ ಅಸಡ್ಡಾಳಾಗಿದ್ದವು; ಅಲ್ಲದೆ ಕಸ

ದಿಂದಲೂ ದುರ್ಗಂಧದಿಂದಲೂ ತುಂಬಿದ್ದವು. ಒಣಿಯ ಪಕ್ಕದ ಮನೆಗಳಾದರೂ ಹರಕ ಮುರಕವೂ ಜೀರ್ಣವಾದವುಗಳೂ ನೋಡಲಿಕ್ಕೆ ಅಂದವಲ್ಲದಂಥವೂ ಆಗಿದ್ದವು. ಆ ಪಲ್ಲಿ ವಸತಿಯೊಳಗಿನ ಜನರ ವೇಷ ಭೂಷಣಗಳಾದರೂ ಅದೇ ಬಗೆಯಾಗಿ ಅಂದಗೇಡಾಗಿದ್ದವು. ಬ್ಲೇಕನಿಗೆ ಆ ಬಡ ಜನರ ನಡವಳಿಕೆಯನ್ನೂ ರುಚಿ ಪ್ರವೃತ್ತಿ ಭಾವ ಭಂಗಿ ಮುಂತಾದವುಗಳನ್ನೂ ತಿಳಿಯುವದು ಅಯೋಗ್ಯವೆಂದೆನಿಸಲಿಲ್ಲ. ಅವನು ಆ ಪಟ್ಟಣಕ್ಕೆ ತೀರ ಹೊಸಬನು; ಮೇಲಾಗಿ ಅವನು ಅಲ್ಲಿಗೆ ಪತ್ತೆದಾರಿಯ ಸಲುವಾಗಿ ಹೋಗಿರಲಿಲ್ಲ. ಆದುದರಿಂದ ಆತನ ಮನಸ್ಸಿನಲ್ಲಿ ಯಾವ ಬಗೆಯ ಸಂದೇಹವೂ ಮನೆಮಾಡಲಿಲ್ಲ ಅದುವರೆಗೂ ಅವನು ಚೀನೀಯರ ಚಾರಿತ್ರ್ಯ ವೈಶಿಷ್ಟ್ಯಗಳ ಅತ್ಯಲ್ಪ ಮಾಹಿತಿಯನ್ನಾದರೂ ಮಾಡಿಕೊಳ್ಳಲಿಕ್ಕೆ ಸಮರ್ಥನಾಗಿರಲಿಲ್ಲ. ತಮ್ಮ ಸ್ವಜಾತಿಯು ಮಿಗಿಲಾದ ದಂಭ, ಅಹಂಕಾರ ಮತ್ತು ಸ್ವಾರ್ಥಪರಾಯಣತೆಇವುಗಳಿಂದಲೂ ಅಧಿಕಾರ ಬಲದಿಂದಲೂ ಪೂರ್ವಗೋಲಾರ್ಧದೊಳಗಿನ ಏಶಿಯಾ ಆಫ್ರಿಕಾ ಮುಂತಾದ ಖಂಡಗಳ ಮೂಲ ನಿವಾಸಿಗಳ ಶ್ರದ್ಧೆ ಮತ್ತು ಸಹಾನುಭೂತಿಗಳನ್ನು ಎಲ್ಲ ಬಗೆಯಿಂದ ನಷ್ಟಗೊಳಿಸಿರುವದೆಂದೂ; ಬಾಹು ಬಲವನ್ನೇ ಶ್ರೇಷ್ಠಬಲವೆಂದು ತಿಳಿದು ಅದರ ಸಹಾಯದಿಂದ ಉಳಿದವರನ್ನೆಲ್ಲ ತಮ್ಮ ಕಾಲುಜೋಡಿನ ಕೆಳಗಿರಿಸುವದೇ ಶಾಂತಿ ರಕ್ಷಣೆಯ ಒಂದೇ ಒಂದಾದ ಉಪಾಯವೆಂದು ತಿಳಿದಿರುವದೆಂದೂ; ಅಲ್ಲದೆ ಅದನ್ನೇ ಶಾಸನರೀತಿಯು ಸರ್ವಶ್ರೇಷ್ಠ ಆದರ್ಶಪ್ರಾಯವೂ ಜಾತೀಯ ಮರ್ಯಾದೆಯ ಉಚ್ಚತ್ವದ ನಿದರ್ಶಕವೂ ಎಂದು ನಂಬಿ ಪೌರ್ವಾತ್ಯರ ಅಂತರಂಗದ ಕ್ರೋಧವನ್ನೂ ದ್ವೇಷಾಗ್ನಿಯನ್ನೂ ಒಹುಮಟ್ಟಿಗೆ ಹೆಚ್ಚಿಸುತ್ತಿರುವದೆಂದೂ ಅನೇಕ ಜನ ಸಾಧು ಪ್ರಕೃತಿಯ, ಉದಾರ ಹೃದಯದ, ಕರ್ತವ್ಯನಿಷ್ಠ, ನಿರಪೇಕ್ಷ ಇಂಗ್ಲಿಷರಂತೆ ಬ್ಲೇಕನಿಗಾದರೂ ಅನಿಸದಿರಲಿಲ್ಲ. ಆದುದರಿಂದಲೇ ಇಷ್ಟು ದೂರದ ಚೀನದೇಶದ ಅಶಿಕ್ಷಿತ ಹಾಗು ಆತ್ಮಮರ್ಯಾದಾಹೀನರಾದ ಮೂಲ ನಿವಾಸಿಗಳು ತಮ್ಮನ್ನು ದ್ವೇಷಿಸುತ್ತಿರಬಹುದೆಂದು ಅವನು ಕಲ್ಪಿಸಿರಲಿಲ್ಲ. ಆತನು ಆ ಚೀನೀ ಜನರ ಹಳದೀ ಬಣ್ಣದ ಮುಖಮಂಡಲದಲ್ಲಿಯ ಸುಸ್ಪಷ್ಟವಾದ ಕ್ರೂರತೆಯನ್ನೂ ಕುಟಿಲತೆಯನ್ನೂ ಪ್ರತಿನಿತ್ಯ ಕಾಣುತ್ತಿದ್ದರೂ ಅದಕ್ಕೆ ಅಂಜುತ್ತಿರಲಿಲ್ಲ. ಆ ಜನರು ಅಲ್ಲಲ್ಲಿ ಗುಂಪುಗಟ್ಟಿಕೊಂಡು ನಿಂತು ಕಡೆಗಣ್ಣಿನಿಂದ ತನ್ನ ಕಡೆಗೆ ನೋಡುತ್ತ ಅಸ್ಫುಟ ದನಿಯಿಂದ ಏಳು ದುರಾಲೋಚನೆಯನ್ನು ಮಾಡುತ್ತಿದ್ದರೂ ಅದೆಲ್ಲ ತನಗಾಗಿಯೇ ನಡೆದಿರುವದೆಂಬುದನ್ನು ತಿಳಿಯಲಿಕ್ಕೆ ಅವನು ಸಮರ್ಥನಾಗಲಿಲ್ಲ

ರಾಬರ್ಟ ಬ್ಲೇಕನು ಕೆಲದಾರಿ ನಡೆದು ಮುಂದಕ್ಕೆ ಹೋಗಿ ಹಿಂದಿರುಗಿ

ನೋಡಲು, ಅವನ ಮನಸ್ಸು ಕುಸ ಚಂಚಲವಾಯಿತು. ಎಷ್ಟೋ ಚೀನೀ ಜನರು ತನ್ನನ್ನು ಬೆನ್ನಟ್ಟಿ ಬರುವದು ಆತನಿಗೆ ಕಾಣಿಸಿತು; ಆದರೆ ಅಷ್ಟರಿಂದಲೇ ಅವನು ಗಾಬರಿಗೊಳ್ಳಲಿಲ್ಲ. ಅಷ್ಟರಲ್ಲಿ ಅವರೆಲ್ಲರೂ "ಈ ವಿದೇಶೀಯ ಸೈತಾನನು ಇಲ್ಲಿಗೇಕೆ ಸಾಯಬಂದಿರುವನು? ಕೊಲ್ಲಿರಿ, ಇವನನ್ನು ಕೊಲ್ಲಿರಿ!" ಎಂದು ಗಟ್ಟಿಯಾಗಿ ಒದರಿದರು. ಆಗ ಬ್ಲೀಕನ ಬಳಿಯಲ್ಲಿ ಯಾವ ಶಸ್ತ್ರಾಸ್ತ್ರವೂ ಇರಲಿಲ್ಲ. ಈಗಾಗಲೆ ರಾತ್ರಿಯಾಗಿತ್ತು. ಅಪರಿಚಿತ ಸ್ಥಳವದು. ಒಬ್ಬೊಂಟಿಗನಾಗಿ ತಾನು ಇಷ್ಟು ದೂರದ ವರೆಗೆ ಬಂದದ್ದು ಯೋಗ್ಯವಾಗಲಿಲ್ಲೆಂದು ಅವನಿಗನಿಸಿತು; ಆದರೆ ಆಗ ಪಲಾಯನ ಹೇಳಿಸಿದ ಹೊರತು ಆತ್ಮರಕ್ಷಣೆಯ ಬೇರೆ ಉಪಾಯವೇ ಅವನಿಗೆ ತೋಚಲಿಲ್ಲ. ಕೂಡಲೆ ಅವನು ಭರದಿಂದ ಓಡತೊಡಗಿದನು. ಎದುರಿಗೆ ಯಾವ ದಾರಿಯು ಕಾಣಿಸುತ್ತಿತ್ತೋ ಅದೇ ದಾರಿ ಹಿಡಿದು ಓಡಹತ್ತಿದನು. ಅಷ್ಟರಲ್ಲಿ ಒಬ್ಬ ಚೀನಿಗನು ಒಂದು ಅವನನ್ನು ದಾರಿಯಲ್ಲಿ ಅಡ್ಡಗಟ್ಟಿ ನಿಂತುಕೊಂಡನು. ಆ ಚೀನಿಗನ ಕೈಯಲ್ಲಿ ನಿಡಿದಾದ ಚೂರಿಯು!

ಆ ಮನುಷ್ಯನು ಬ್ಲೀಕನನ್ನು ಆಕ್ರಮಿಸ ಬರಲು, ಇವನು ಒಳ್ಳೇ ಕಸುವಿನಿಂದ ಆತನ ಕೆನ್ನೆಗೊಂದು ಪೆಟ್ಟು ಕೊಟ್ಟನು. ಆ ಹೊಡತದಿಂದ ಆತನ ಉದ್ದೇಶವು ಕೆಲಮಟ್ಟಿಗೆ ಕುಂದಿಹೋಯಿತು. ಬ್ಲೀಕನು ಮತ್ತೆ ಅಲ್ಲಿ ಒಂದು ಕ್ಷಣ ಕೂಡ ನಿಲ್ಲದೆ ಆ ಮನುಷ್ಯನ ಬಳಿಯಿಂದ ಒತ್ತರದಿಂದ ಓಡಲುದ್ಯುಕ್ತನಾದನು ಅಷ್ಟರಲ್ಲಿ ನಾಲ್ಕೂ ಕಡೆಯಿಂದ: "ಹೊಡೆಯಿರಿ-ಬಡೆಯಿರಿ. ಈ ಪರದೇಶಿ ಪಿಶಾಚಿಯನ್ನು ಖೂನಿ ಮಾಡಿರಿ. ಕಂಡಲ್ಲಿ ಕೊಲ್ಲಿರಿ-ಬಿಡಬೇಡಿರಿ" ಎಂಬ ಚೀರಾಟವು ಕೇಳಲಾರಂಭಿಸಿತು!

ಬ್ಲೀಕನು ಭರದಿಂದ ಓಡಿ ಹೋಗಿ ಮತ್ತೊಂದು ಓಣಿಗೆ ತಲುಪಿದನು. ಆ ಓಣಿಯ ಮುಖಕ್ಕೇ ಒಂದು ಮನೆಯ ಬಾಗಿಲವಿದ್ದಿತು. ಅದಕ್ಕೆ ಸಮೀಪದಲ್ಲಿಯೇ ದಾರಿಯ ಪಕ್ಕದಲ್ಲೊಂದು ದೀಪವು ಉರಿಯುತ್ತಿತ್ತು. ಆ ಮನೆಯ ಬಾಗಿಲವು ತೆರೆದಿದ್ದು, ಬಾಗಿಲಲ್ಲಿ ಒಬ್ಬ ಮನುಷ್ಯನು ನಿಂತುಕೊಂಡಿದ್ದನು. ಅವನು ಬ್ಲೀಕನನ್ನು ಕಂಡೊಡನೆಯೇ ಇಂಗ್ಲಿಷ ಭಾಷೆಯಿಂದ: "ಎಲೈ ಸಂಕಟಗ್ರಸ್ತ ದಾರಿಕಾರನೇ, ಜೀವವುಳಿಸಿಕೊಳ್ಳುವ ಇಚ್ಛೆಯಿದ್ದರೆ ಈ ಮನೆಯಲ್ಲಿ ಬಾ' ಎಂದೆನಲು, ಬ್ಲೀಕನು ಆ ಬಾಗಿಲದೆದುರಿಗೆ ಹೋಗಿ ನಿಂತುಕೊಂಡು, ಈತನ ಮಾತು ವಿಶ್ವಾಸಕ್ಕೆ ಪಾತ್ರವೊ-ಅಪಾತ್ರವೋ? ಎಂಬ ಬಗ್ಗೆ ತನ್ನ ಮನಸ್ಸಿನಲ್ಲಿ ಯೋಚಿಸತೊಡಗಿದನು; ಆದರೆ ಆ ಮನೆಯ ಯಜಮಾನನು ಬ್ಲೀಕನಿಗೆ ಅದನ್ನು ನಿಷ್ಕರ್ಷಿಸಲಿಕ್ಕೆ ಅವಕಾಶ ಕೂಡ ಕೊಡದೆ, ಆತನ ಕೈಹಿಡಿದು ಅವನನ್ನು ತನ್ನ

ಮನೆಯೊಳಗೆ ಜಗ್ಗಿಕೊಂಡು ನಡೆದನು; ಹಾಗು ಪರಕ್ಷಣವಲ್ಲಿಯೇ ಆ ಮನೆಯ ಆ ಬಾಗಿಲವು ಭದ್ರವಾಗಿ ಇಕ್ಕಲ್ಪಟ್ಟಿತು.

ತಾನು ಇವನೊಡನೆ ಹೋಗಬೇಕೋ-ಬಾರದೋ ಎಂಬುದನ್ನು ಸ್ಥಿರಗೊಳಿಸಲಾರದ ಬ್ಲೇಕನು ತೀಕ್ಷ್ಣ ದೃಷ್ಟಿಯಿಂದ ಆ ಆಶ್ರಯದಾತೃವಿನ ಮುಖದ ಕಡೆಗೆ ನೋಡಹತ್ತಿದನು. ಆ ಗೃಹಸ್ಥನು ಚೀನೀಜನರ ಉಡುಗೆ-ತೊಡಿಗೆಗಳನ್ನು ಧರಿಸಿದವನಾಗಿದ್ದರೂ ಆತನ ಮುಖಭಾವದಿಂದ ಅವನು ಚೀನಿಗನಲ್ಲೆಂದು ಬ್ಲೇಕನಿಗನಿಸಿತು. ಅಷ್ಟರಲ್ಲಿ ಆ ಮುಖಮಂಡಲವು ತನಗೆ ಅಪರಿಚಿತವಲ್ಲೆಂಬದೂ ಅವನಿಗೆ ಗೊತ್ತಾಯಿತು ಕೂಡಲೆ ಬ್ಲೇಕನು ಬಳ್ಳೇ ಉತ್ಸುಕತೆಯಿಂದ:—ಮಿಸ್ಟರ ಡೆಭೆನಟ! ಇದೇನು, ನೀವು ಇಲ್ಲಿರುವಿರಲ್ಲ? ಎಂದು ಕೇಳಿದನು,

ಬ್ಲೇಕನ ಆಶ್ರಯದಾತೃವಾದ ಆ ಇಂಗ್ಲಿಷ ಯುವಕನು ೨೪ ೨೫ ವರ್ಷ ವಯಸ್ಸಿನವನು. ಆತನ ಹೆಸರು ಮಾರ್ಟಿನ್ ಡೆಭೆನಟ. ಎರಡು ವರ್ಷಗಳ ಹಿಂದೆ ಲಂಡನ್ನಿನ ಕ್ಲಬ್ಬಿನಲ್ಲಿ ಈತನಿಗೂ ಬ್ಲೇಕನಿಗೂ ಸ್ನೇಹವುಂಟಾಗಿತ್ತು. ಇತ್ತೀಚೆಗೆ ಬಹು ದಿನಗಳಿಂದ ಅವರು ಪರಸ್ಪರರಿಗೆ ಭೆಟ್ಟಿಯಾಗಿರಲಿಲ್ಲ. ಬ್ಲೇಕನ ಗುರ್ತ ಹತ್ತಲು, ಆ ತರುಣನು ವಿಸ್ಮಯ ಭರದಿಂದ: ರಾಬರ್ಟ ಬ್ಲೇಕರೇ, ಇದೆಂಥ ವಿಚಿತ್ರವು? ನೀವು ಇಲ್ಲಿ-ಈ ಕ್ಯಾಂಟನ್ನ ಪಟ್ಟಣದಲ್ಲಿಯೇ! ಬ್ಲೇಕರೇ, ಈ ವಿಶಾಲವಾದ ಭೂಮಂಡಲದಲ್ಲಿ ಸಾಯಲಿಕ್ಕುಪಯುಕ್ತವಾದ ಸ್ಥಳವು ಬೇರೆ ಕಡೆಗಳಲ್ಲಿಯೂ ನಿಮಗೆ ಸಿಗಲಿಲ್ಲವೆ? ಎಂದು ಕೇಳಿದನು.

ಅದಕ್ಕೆ ಬ್ಲೇಕನು:—ಅಹುದು; ನಾನು ಸತ್ತಂತೆಯೇ ಆಗಿದೆ; ಉಳಿದಿರುವದೇನಿದೆ? ಒಂದು ಫೌಜದಾರಿಯ ಕೆಲಸಕ್ಕೆಂದು ಈ ಚೀನದೇಶಕ್ಕೆ ಬಂದಿದ್ದೆನು. ಕೃತಕಾರ್ಯನಾದ ಬಳಿಕ ನಾವು ಈ ಭಾಗದಲ್ಲಿ ಅಡ್ಡಾಡಲಿಕ್ಕೆಂದು ಸಹಜವಾಗಿ ಬಂದೆನು. ಈ ದಸ್ಯುಗಳು ಇಷ್ಟು ದುಷ್ಟರೂ ಕ್ರೂರರೂ ಕಗ್ಗರೂ ಇರುತ್ತಿರುವರೆಂಬದನ್ನು ಅರಿತಿದ್ದಿಲ್ಲ. ಭಾಗ್ಯವಶಾತ್ ನಿಮ್ಮ ಭೇಟಿಯು ಹೀಗೆ ಅಕಲ್ಪಿತವಾಗಿ ಆದದ್ದರಿಂದ ಇಂದು ಜೀವದಿಂದುಳಿದಿರುವೆನು. ಅದಿರಲಿ. ಡೆಭೆನಟ, ನೀವು ಯಾವ ಉದ್ದೇಶದಿಂದ ಇಲ್ಲಿಗೆ ಬಂದಿರುತ್ತೀರಿ? ಹಾಗು ಹೀಗೆ ಚೀನೀಯರ ವೇಷಭೂಷಣಗಳನ್ನೇಕೆ ಧರಿಸಿರುವಿರಿ?

ಡೆಭೆನಟ: —ನೌಕರಿಗಾಗಿ ಬಂದಿರುವೆನೇ ಹೊರತು, ಇನ್ನಾವ ಉದ್ದೇಶದಿಂದಿಲ್ಲಿಗೆ ಬರುವದು? ನನಗೆ ಚೀನೀ ಭಾಷೆಯು ಚನ್ನಾಗಿ ಅವಗತವಾಗಿರುವದರಿಂದ ನಾನು ಇಲ್ಲಿಯ ಬ್ರಿಟಿಶ ವಕೀಲನ ಕೈಕೆಳಗೆ ನೌಕರಿಗಾಗಿ ಬಂದಿರುತ್ತೇನೆ. ನಾನು ಚೀನಿಗರ ವೇಷಧರಿಸುವದರಲ್ಲಿ ಒಂದು ಗೌಪ್ಯ ಉದ್ದೇಶವಿರುವದು.

ಈ ಚೀನದೇಶದ ಪ್ರಜೆಗಳು ಮಹಾ ಪಿಶಾಚಿಗಳಾಗಿರುತ್ತಾರೆ. ಇವರು ನನ್ನನ್ನು ವಿದೇಶೀಭೂತವೆಂದು ಸಂಬೋಧಿಸಿ, ಪ್ರಸಂಗ ಸಾಧಿಸಿ ನನ್ನ ಕೊಲೆಗೆಯ್ಯಲಿಕ್ಕೆ ಕೂಡ ಪ್ರವೃತ್ತರಾಗುತ್ತಿದ್ದರು. ನಾವು ಬ್ರಿಟಿಶರು ಇಲ್ಲಿಗೆ ಬಂದು ಈ ಚೀನಿಗಳ ಧರ್ಮವನ್ನು ನಷ್ಟಗೊಳಿಸಿ, ಇವರ ಸಾಮ್ರಾಜ್ಯವನ್ನು ಸೆಳೆಕೊಳ್ಳುವೆವೆಂದು ಇವರ ದೃಢನಂಬಿಗೆಯಾಗಿದೆ. ಇವರನ್ನು ಧರ್ಮಭ್ರಷ್ಟಗೊಳಿಸುವದಕ್ಕೆಂದು ನಾವು ನಮ್ಮಲ್ಲಿಯ ಪಾದ್ರಿಗಳನ್ನು ಮೊದಲು ಇಲ್ಲಿಗೆ ಕಳಿಸಿರುವೆವೆಂದೂ, ಬಳಿಕ ಇವರ ದೇಹದಾರ್ಢ್ಯವನ್ನು ಕಡಿಮೆ ಮಾಡಲಿಕ್ಕೆಂದು ಅಫೀಮನ್ನು ಕಳಿಸಿರುವೆವೆಂದೂ, ಕಟ್ಟಕಡೆಗೆ ಇವರ ರಾಜ್ಯವನ್ನು ಹಸ್ತಗತಮಾಡಿಕೊಳ್ಳಲಿಕ್ಕೆಂದು ಮದ್ದು-ಗುಂಡು ಒಂದೂಕು-ತೋಫುಗಳನ್ನು ಕಳಿಸುತ್ತಿರುವೆವೆಂದೂ ಇಲ್ಲಿಯವರ ಕಲ್ಪನೆಯಾಗಿದೆ ಇದಕ್ಕಾಗಿಯೇ ನಮ್ಮ ಮೇಲೆ ಇವರದಿಷ್ಟು ಸಿಟ್ಟು! ಇಂದು ಅವರು ನಿಮ್ಮನ್ನು ಖಂಡಿತವಾಗಿಯೂ ಕೊಂದುಬಿಡುತ್ತಿದ್ದರು; ಆದರೆ ಇನ್ನು ನೀವು ಭಯಪಡುವ ಕಾರಣವಿಲ್ಲ. ನಿಮ್ಮ ಶೋಧಕ್ಕಾಗಿ ಅವರು ತಂಡತಂಡವಾಗಿ ಕಲೆತು, ಬೇರೆ ಕಡೆಗೆ ಹೊರಟು ಹೋದರು. ಈ ರಾತ್ರಿಯ ಸಮಯದಲ್ಲಿ ಒಬ್ಬೊಂಟಿಗರಾಗಿ ನೀವು ಈ ಕೆಟ್ಟ ಹಳ್ಳಿಯ ಕಡೆಗೆ ತಿರುಗಾಡಲಿಕ್ಕೆ ಒಂದದ್ದು ವಿಹಿತವಾಗಲಿಲ್ಲ

ಬ್ಲೇ:—ವಿಹಿತವಾಗಲಿಲ್ಲೆಂಬದು ತಿಳಿದೇ ಹೋಗಿದೆ; ಆದರೆ ನಿಮ್ಮ ಸಂಬಂಧದ ಸಂಗತಿಯು ಮಾತ್ರ ಸಾಗ್ರವಾಗಿ ತಿಳಿಯಲಿಲ್ಲ ನೀವು ಇಲ್ಲಿ ಇನ್ನೂ ನೌಕರಿಮಾಡುತ್ತಿರುವಿರೇನು? ನೀವು ಈ ಕಗ್ಗ ಚೀನಿಗಳ ಹಳ್ಳಿಯಲ್ಲೇಕೆ ವಾಸಿಸುತ್ತಿರುವದು? ನೀವು ಚೀನಿಗರ ವೇಷಭೂಷಣಗಳನ್ನು ಧರಿಸುತ್ತಿರುವದಕ್ಕೆ ಇದೊಂದೇ ಕಾರಣವೆಂದು ತೋರುವದಿಲ್ಲ ನಿಮ್ಮ ಸಂಬಂಧದ ಸಮಸ್ತ ಸಂಗತಿಯನ್ನು ಬಿಚ್ಚಿ ಹೇಳಬಾರದೇ? ಎಂದೆನಲು,

ಡಭೆನಟಸು ಹೇಳುತ್ತಾನೆ:—ಮಿತ್ರರೇ, ನಿಮಗೆ ತಿಳಿಸಲಿಕ್ಕೆ ಅಸಮಾನವೇತರದು? ನಾನು ಯಾವ ನೌಕರಿ ಮಾಡುತ್ತಿದ್ದೆನೋ ಅದನ್ನು ಕೆಲದಿನಗಳ ಮುಂಚೆ ಬಿಟ್ಟುಬಿಟ್ಟಿರುತ್ತೇನೆ. ನೌಕರಿಯಿಂದ ಎಷ್ಟೋ ಲಾಭವಾದರೂ ದಾಸ್ಯತ್ವ ಬೇರೆ ತಪ್ಪಲಾರದಷ್ಟೆ? ಸ್ವತಂತ್ರವಾಗಿ ಅಲ್ಪ ಸಂಪಾದನೆಯಾದರೂ ಆಗುವಂತಿದ್ದರೆ, ಗುಲಾಮರಾಗಲಿಕ್ಕೆ ಅದಾರು ಒಪ್ಪಿಯಾರು? ನೌಕರಿ ಮಾಡಮಾಡುತ್ತಲೆ ನಾನು ಅಫೀಮಿನ ವ್ಯವಸಾಯವನ್ನು ಗೌಪ್ಯವಾಗಿ ಆರಂಭಿಸಿದೆನು. ಈ ಚೀನ ದೇಶದಲ್ಲಿ ಅಫೀಮಿನ ವ್ಯಾಪಾರದಂತಹ ಲಾಭದಾಯಕ ವ್ಯವಹಾರವು ಬೇರೊಂದಿಲ್ಲ. ಆ ವ್ಯವಹಾರದಿಂದ ತುಸ ಧನ ಸಂಗ್ರಹವಾಗಲು, ನಾನು ನನ್ನ ಆ ನೌಕರಿಯನ್ನು ಬಿಟ್ಟುಬಿಟ್ಟೆನು. 'ಉದೋ-ಉದೋ ಗೋ-

ಯಿಂದ ' ಎಂಬಂತೆ ಎರತೂ ವ್ಯವಸಾಯ ಸಾಗಿಸುವದು ಕಠಿಣವಷ್ಟೆ? ಇತ್ತೀಚೆಗೆ ಈ ಅಫೀಮಿನ ವ್ಯವಸಾಯವೊಂದನ್ನೇ ಡಾಣಾಡಂಗುರವಾಗಿ ಮಾಡಿ ಹೆಚ್ಚಾಗಿ ಧನಗಳಿಸಿರುತ್ತೇನೆ; ಹಾಗು ಕಡೆಗೆ ಒಬ್ಬ ಚೀನಿಗರ ಸುಂದರಿಯ ಪ್ರೇಮಪಾಶದಲ್ಲಿ ಸಿಲುಕಿ, ಸುಖದ ಆಶೆಯಿಂದ ಆಕೆಯೊಡನೆ ವಿವಾಹಬದ್ಧನಾಗಿರುತ್ತೇನೆ. ನನ್ನ ಪ್ರಣಯಿನಿಯು ನಮ್ಮಗಳ ಕೋಟು-ಹ್ಯಾಟುಗಳ ವಿಷಯದಲ್ಲಿ ಬಹು ವಿಕುಷ್ಟಳು. ಪ್ರೇಮದ ಮಹತಿಯು ವಿಚಿತ್ರವಾದದ್ದಲ್ಲವೆ? ನಮ್ಮ ಚೀನೀಯ ಶ್ರೀಮತಿಗಳ ಮನರಂಜನೆಗಾಗಿ ನಾವೂ ಚೀನಿಗರ ವೇಷ ಧರಿಸಬೇಕಾಯಿತು! ಅಲ್ಲದೆ ನಾವು ನಮ್ಮ ಕಡೆಯ ಊಟವನ್ನು ಕೂಗ, ಬಿಟ್ಟು ಇತ್ತಣ ಕಡೆಯ ಊಟವನ್ನೇ ಉಣಬೇಕಾಯಿತು!!

ಅದನ್ನು ಕೇಳಿ ಬ್ಲೇಕನು ನಕ್ಕು:-ವಾಹವ್ವಾ! ವಾಹವ್ವಾ!! ಪ್ರೇಮಪಾಶದ ನಿಜವಾದ ಪ್ರಭಾವವಿದು! ಹಾಗಾದರೆ ನಿಮಗೆ ಇಲಿಮರಿಗಳ ಮಜ್ಜಿಗೆ ಹುಳಿ, ಜೊಂಡಿಗದ ಝುಣಕ ಮುಂತಾದವುಗಳ ಅಭ್ಯಾಸವೂ ಆಗಿರಬಹುದಲ್ಲವೆ?

ಡೆಭೆ:-ಇಲ್ಲ, ಇಲ್ಲ ಇನ್ನೂ ಅಷ್ಟರವರೆಗೆ ಹೋಗಿಲ್ಲ.

ಬ್ಲೇಕ:-ಬೇಗನೆ ಅವುಗಳ ಅಭ್ಯಾಸವನ್ನೂ ಮಾಡಿಕೊಳ್ಳಿರಿ. ಯಾವನು ಚೀನಿಗಳೊಡನೆ ಲಗ್ನವಾಗಲು ಮನಸ್ಸು ಮಾಡಿರುವನೋ ಅವನಿಗಸಾಧ್ಯವಾವುದೂ ಇರುವದಿಲ್ಲ. ಕಡೆಗೆ ಇಲ್ಲಿಯ ಹೆಂಗಸಿನ ಪ್ರೇಮದಲ್ಲಿ ಸಿಲುಕಿ ಒಮ್ಮೆಲೆ ವಿವಾಹಬದ್ಧರಾಗಿ ಬಿಟ್ಟಿರಲ್ಲವೆ? ಈ ಬಗೆಯ ವಿವಾಹದಿಂದುಂಟಾಗುವ ಸಂತತಿಯ ವಿಚಾರವೇನ್ರಯ್ಯಾ ಡೆಭೆನಟ?

ಬ್ಲೇಕರೇ, ಇದೆಲ್ಲ ನಿಮ್ಮಗಳ ಸಂಸಂಕೋಚವು. ಪ್ರೇಮರಾಜ್ಯದಲ್ಲಿ ಲ್ಯಾದರೂ ಜಾತಿಭೇದಕ್ಕಾಸ್ಪದವುಂಟೆ? ಅಲ್ಲದೆ ನಾನೊಬ್ಬ ಇಂಗ್ಲಿಷನೇ ಹೀಗೆ ಚೀನೀ ಮಹಿಳೆಯೊಡನೆ ವಿವಾಹವಾಗಿರುವೆನೆಂತಲ್ಲ. ನನಗಿಂತಲೂ ಮಿಗಿಲಾದವರ ಎಷ್ಟೋ ಉದಾಹರಣೆಗಳಿರುತ್ತವೆ.

ಬ್ಲೇಕ:—ಇರಲೊಲ್ಲವೇಕೆ? ಭೂಮಂಡಲದೊಳಗೆ ಪ್ರಖ್ಯಾತರ ಆತ್ಮಹತ್ಯೆಗಳೇನೂ ಕಡಿಮೆ ಆಗುವದಿಲ್ಲವು; ಹಾಗೆಂದ ಮಾತ್ರಕ್ಕೆ ಆತ್ಮಹತ್ಯೆಯ ಸಮರ್ಥನ ಮಾಡುವದು ಯೋಗ್ಯವೆನಿಸಬಹುದೇ? ಅದಿರಲಿ ಬಿಡಿರಿ. ಡೆಭೆನಟ, ನಿಮ್ಮ ಸಂಗತಿಯನ್ನು ಮುಂದಿರಿಸಿರಿ.

"ಬ್ಲೇಕರೇ, ಇದು ಆತ್ಮಹತ್ಯೆಯಲ್ಲ; ಆತ್ಮೋತ್ಸರ್ಗವಾಗಿದೆ. ಆದರೂ ನಾನೊಳ್ಳೇ ಅಸಾಧಾರಣ ಕೆಲಸ ಮಾಡಿದೆನೆಂದಿದ ರರ್ಥವಲ್ಲ. ಸಂಸಾರದಲ್ಲಿ ನನಗಾರೂ ಇರಲಿಲ್ಲೆಂಬದು ನಿಮಗರಿಯದ ವಿಷಯವಾಗಿಲ್ಲ. ಆದುದರಿಂದಲೇ ಈ ಕೆಲಸದಲ್ಲಿ ನನಗಾರ ಆತಂಕವೂ ಉಂಟಾಗಲಿಲ್ಲ. ನನ್ನ ಈ

ಚೀನೀ ಹಂಡತಿಯ ಹೆಸರು ಫ ಎಲಾಈಓ ಎಂದು. ಅವಳ ಇಚ್ಛೆಯ ಮೇರೆಗೆ ನಾನು ಇಲ್ಲಿ ವಾಸಮಾಡಹತ್ತಿರುತ್ತೇನೆ. ನನ್ನ ಇಲ್ಲಿಯ ಹೆಸರು ಜನ ಮೆರಿಡಿಥ. ಈ ನಾಮಧೇಯದಿಂದಲೇ ಈ ಹಳ್ಳಿಯಲ್ಲಿ ಸಪತ್ನೀಕನಾಗಿ ವಾಸಿಸುತ್ತೇನೆ; ಆದರೆ ಬ್ಲೇಕರೇ, ಪರಮೇಶ್ವರನು ನನ್ನಲ್ಲಿ ಕೋಪ ತಾಳಿರುವಂತೆ ತೋರುತ್ತದೆ. ಯಾಕಂದರೆ ನನ್ನ ಹೆಂಡತಿಗೆ ಬಹಳ ಕಾಹಿಲೆಯಾಗಿದೆ. ಬದುಕುವಳೋ-ಇಲ್ಲವೋ ತಿಳಿಯದು। ಎರಡು ತಿಂಗಳ ಹಿಂದೆ ಪ್ರಸವಿಸಿದ ಬಳಿಕ ಅವಳು ಬಾಣಂತಿ ರೋಗದಿಂದ ಪೀಡಿತಳಾಗಿರುವಳು. ಡಾಕ್ಟರರು ಆಕೆಯ ಬಗ್ಗೆ ಅಷ್ಟೊಂದು ಭರವಸೆ ಹೇಳದಾಗಿದ್ದಾರೆ. ಅದು ಹೇಗೆಯೋ ಆಗಲಿ, ನೀವು ಸ್ವದೇಶಕ್ಕೆ ಹೋಗಿ ನನ್ನೀ ಗೌಪ್ಯವನ್ನು ಮಾತ್ರ ಪ್ರಕಟಿಸಬಾರದು. ಇದೇ ನಾನು ನಿಮ್ಮಲ್ಲಿ ಬೇಡಿಕೊಳ್ಳುವ ವರವು'' ಎಂದು ಅನ್ನಲು,

''ಡೆಭೆನಟ, ನೀವು ಈ ಬಗ್ಗೆ ಕೊಂಚವೂ ಸಂದೇಹಗೊಳ್ಳಬಾರದು. ನಾನು ನಿಮ್ಮ ಈ ನೈತಿಕ ಸಾಹಸದ ಗೌಪ್ಯವನ್ನು ನಮ್ಮ ದೇಶಿಗರಾರ ಮುಂದೂ ತಿಳಿಸುವದಿಲ್ಲ. ಇದೇ ನನ್ನ ವಚನವು' ಎಂದು ಬ್ಲೇಕನು ಅವನಿಗೆ ವಚನವನ್ನಿತ್ತನು

''ಬ್ಲೇಕರೇ, ನಾನಿನ್ನು ನನ್ನ ಹೆಂಡತಿಯ ಬಳಿಗೆ ಹೋಗುವೆನು. ಹೊರಗಿನ ಗದ್ದಲವನ್ನು ಕೇಳಿ ಅಟ್ಟವನ್ನಿಳಿದು ಇಲ್ಲಿಗೆ ಬಂದಿದ್ದೆನು. ಈಗ ಹೊರಗಿನ ಗದ್ದಲವು ಅಡಗಿ ಹೋಗಿದೆ. ನೀವು ಇನ್ನು ಅಂಜುವ ಕಾರಣವುಳಿಯಲಿಲ್ಲ. ನಾನು ನಿಮಗೆ ಯಾವ ದಾರಿಯನ್ನು ತೋರಿಸುವೆನೋ ನೆಟ್ಟಗೆ ಆ ದಾರಿ ಹಿಡಿದು ಹೋದರೆ, ಕೊಂಚವೂ ತೊಂದರೆಗೀಡಾಗದೆ ನೀವು ನಿಮ್ಮ ಆ ಕಲೋನಿಯಲ್ ಹೋಟಲಿಗೆ ಹೋಗಿ ತಲುಪುವಿರಿ'' ಹೀಗೆಂದು ಹೇಳಿ, ಡೆಭೆನಟನು ಬ್ಲೇಕನಿಗೊಂದು ದಾರಿ ತೋರಿಸಿದನು. ಬ್ಲೇಕನು ಲಗುಬಗನೆ ನಡೆದು, ತನ್ನ ನಿವಾಸಸ್ಥಳಕ್ಕೆ ನಿರಾಪದವಾಗಿ ಹೋಗಿ ತಲುಪಿದನು.

ಊಟ ಮಾಡಿ ಧೂಮ್ರಪಾನ ಮಾಡುವಾಗ ಡೆಭೆನಟನ ಸಂಗತಿಯು ಬ್ಲೇಕನ ಮನಸ್ಸಿನಲ್ಲಿ ಚಾಲನೆಗೊಳ್ಳಹತ್ತಿತು. ಆಗ ಆತನು ಎಷ್ಟೋ ಹೊತ್ತಿನ ವರೆಗೆ ಆಲೋಚಿಸಿದ ಬಳಿಕ ಆತನ ಬಾಯಿಂದ ಅಸ್ಫುಟವಾಗಿ:— ಇದು ತಪ್ಪು! ಶುದ್ಧ ತಪ್ಪು!! ಚೀನೀಯುವತಿಯನ್ನು ವಿವಾಹವಾಗಿ ಡೆಭೆನಟನು ಬಹು ದೊಡ್ಡ ತಪ್ಪಿಸ್ಥನಾಗಿರುತ್ತಾನೆ. ಇದು ಬಹು ಮೂರ್ಖತನದ ಮಾತಾಗಿರುತ್ತದೆ. ಪಾಶ್ಚಾತ್ಯ-ಪೌರ್ವಾತ್ಯಗಳಲ್ಲಿ ಆಕಾಶ ಪಾತಾಳಗಷ್ಟು ಅಂತರವಿದೆ. ದೇವರು ಯಾವ ಉದ್ದೇಶದಿಂದ ಈ ಸೃಷ್ಟಿಯನ್ನು ಸೃಷ್ಟಿಸಿರುವನೋ, ಮಾನವನು ಅದನ್ನು ಲೋಪಮಾಡಬಲ್ಲನೇ? ಎಣ್ಣೆಯು ನೀರೊಡನೆ ಹೇಗೆ ಮಿಶ್ರವಾಗಲಾರದೋ,

ಹಾಗೆಯೇ ಪಾಶ್ಚಾತ್ಯ ಪೌರ್ವಾತ್ಯಗಳು ಎಂದಿಗೂ ಕೂಡಲಾರವು. ಪಾಶ್ಚಿಮಾತ್ಯರ ಧರ್ಮವು ಪೌರ್ವಾತ್ಯರ ಧರ್ಮಕ್ಕಿಂತ ತೀರ ಭಿನ್ನವಾಗಿದೆ. ಕ್ರೈಸ್ತನ ದಾಸ್ಯಭಾವದ ಪರಿಣತಿಯು ಯುರೋಪದವರ ಆಧುನಿಕ ಪ್ರಭುತ್ವಧಾರಣತೆಯಲ್ಲಾಗಿ ಬಿಟ್ಟಿದೆ! ಚೀನೀಯರ ಹುಡಿಗಿಯು ತನ್ನ ಜನ್ಮಗತ ಧರ್ಮಗತ-ಸಮಾಜಗತ ಸಂಸ್ಕಾರಗಳೊಂದಿಗೆ ಇಂಗ್ಲಿಷ ಗೃಹಸ್ಥನ ಹೆಂಡತಿಯಾಗಲಿಕ್ಕೆ ಶಕ್ಯವಿಲ್ಲ."

ಆದರೆ ಆ ಪಾಶ್ಚಿಮಾತ್ಯ-ಪೌರ್ವಾತ್ಯರ ಮಿಲನದಿಂದ ಮುಂದೆ ಯಾವ ವಡವಾನಲವೆದ್ದೀತೆಂಬದರ ಕಲ್ಪನೆಯು ಕೂಡ ಅಂದು ಬ್ಲೇಕನಿಗಾಗಲಿಲ್ಲ. ಅಲ್ಲದೆ ಆವನು ಅಂದಿನ ತನ್ನ ಕನಸಿನಲ್ಲಿಯೂ ಡೆಭೆನಟನು ಆ ಅಪರಿಣಾಮ ಕಾರ್ಯದಿಂದ ಮುಂದೆ ಯಾವ ಸಂಕಟಕ್ಕೊಳಗಾಗುವನೆಂಬದನ್ನೂ ಆತನ ಭಾವೀ ಜೀವನವು ಹೇಗೆ ವಿಷಮಯವಾದೀತೆಂಬದನ್ನೂ ಕಾಣಲಿಲ್ಲ.

---

## [ ೨ ]

ಮುರ್ಟನ ಡೆಭೆನಟನು ಬ್ಲೇಕನನ್ನು ದಾರಿಗೆ ಹಚ್ಚಿದವನೇ, ಮೆಲ್ಲಮೆಲ್ಲನೆ ಮೇಲಟ್ಟದ ಪಾವಟಿಗೆಗಳನ್ನೇರ ಹತ್ತಿದನು; ಹಾಗು ಅಟ್ಟವನ್ನೇರಿ ಒತ್ತಟ್ಟಿಗಿನ ಒಂದು ಕೋಣೆಯಲ್ಲಿ ಪ್ರವೇಶಿಸಿದನು. ಆ ಕೋಣೆಯು ಒಳ್ಳೇ ಚೆನ್ನಾಗಿ ಶೃಂಗರಿಸಲ್ಪಟ್ಟಿತ್ತು. ಅಲ್ಲಿಯ ಪ್ರತಿಯೊಂದು ವಸ್ತುವೂ ಬೆಲೆಯುಳ್ಳದ್ದಾಗಿತ್ತು. ಆ ಬಗೆಯ ಬಹುಮೂಲ್ಯ ಖುರ್ಚಿ-ಮೇಜು-ಕಪಾಟು-ಮಂಚ-ಕನ್ನಡಿಗಳು ಒಳ್ಳೇ ಐಶ್ವರ್ಯಶಾಲಿಗಳಾದ ವಿಲಾಸಿಗಳ ವಿಲಾಸ ಮಂದಿರದಲ್ಲಲ್ಲದೆ ಬೇರೆ ಕಡೆಗಳಲ್ಲೆಲ್ಲೂ ಕಾಣಲಾರವು.

ಆ ಕೋಣೆಯ ನಡುವೆ ಹಸ್ತಿದಂತದಿಂದ ಮಾಡಿದ ಒಂದು ಸುಂದರವಾದ ಮಂಚದ ಮೇಲೆ ಒಬ್ಬ ಸೊರಗಿ ಸಾಯಲಾದ ರೋಗಿಷ್ಟ ರಮಣಿಯು ಮಲಗಿಕೊಂಡಿದ್ದಳು; ಅವಳ ಪಕ್ಕದ ಬೇರೊಂದು ಹಾಸಿಗೆಯ ಮೇಲೆ ಕೆಲ ತಿಂಗಳುಗಳ ವಯಸ್ಸಿನ ಕೂಸೊಂದು ಸುಮ್ಮನೆ ಮಲಗಿಕೊಂಡು ನಿದ್ದೆ ಮಾಡುತ್ತಿತ್ತು. ಪಲ್ಲಂಗದ ಸಮೀಪದಲ್ಲಿಯೇ ಒಬ್ಬ ಹೆಂಗಸೂ ಒಬ್ಬ ಗಂಡಸೂ ಎದುರುಬದುರಾಗಿ ನಿಂತುಕೊಂಡು, ಮೆಲ್ಲ ಮೆಲ್ಲನೆ ಏನೇನೋ ಮಾತನಾಡುತ್ತಿದ್ದರು. ಆ ಹೆಂಗಸು ಡೆಭೆನಟನ ಆ ರೋಗಿಷ್ಟ ಹೆಂಡತಿಯ ದಾದಿಯು; ಪುರುಷನು ಚಿಕಿತ್ಸಕನು. ಆ ಡಾಕ್ಟರನು ಬಹು ಪ್ರವೀಣನಾಗಿದ್ದನು.

ಡೆಭೆನಟನು ಅವರ ಮುಖದ ಕಡೆಗೆ ಟಕಮಕವೆಂದು ನೋಡುತ್ತ ಆ ಮಂಚದ ಸಮೀಪಕ್ಕೆ ಹೋಗಿ ನಿಂತುಕೊಂಡನು, ಹಾಗು ರೋಗದಿಂದ ಬಳಲುತ್ತಿರುವ ಹೆಂಡತಿಯ ಆ ಮುಖವನ್ನು ನೋಡುತ್ತಲೆ ಅವನ ಕೈ ಕಾಲುಗಳು

ನಡುಗಹತ್ತಿದವು! ಸ್ತ್ರೀಯು ಜೀವಂತಳು! ಆ ಲಲನೆಯ ಕಣ್ಣುಗಳು ಮುಚ್ಚಿದ್ದವು. ಮುಖಮಂಡಲವು ಕಾಡಿಗೆಯಂತೆ ಕಪ್ಪಿಟ್ಟಿತ್ತು. ಮಂದ ಮಂದವಾಗಿ ಶ್ವಾಸ ಮಾಡುತ್ತಿತ್ತು ಅವಳ ಆಗಿನ ಮುಖಶ್ರೀಯಿಂದ ಅವಳಲ್ಲಿ ಆ ರೋಗದ ವೇಗ ವನ್ನು ಸಹಿಸುವಷ್ಟು ಶಕ್ತಿಯುಳಿದಿಲ್ಲೆಂಬಂತೆ ಭಾಸವಾಗುತ್ತಿತ್ತು.

ಆಗ ಮರ್ಟನ್ ಡೆಭೆನಟನು ಡಾಕ್ಟರನನ್ನು ಕುರಿತು ಉದ್ವೇಗದಿಂದ:— ಡಾಕ್ಟರರೇ, ಈಗ ಹೇಗಿದೆ? ಮೊದಲಿಗಿಂತಲೂ ತುಸ ಗುಣಮುಖವಿದೆಯೇ?

ಡಾಕ್ಟರನು ಒಮ್ಮೆಲೆ ಮಾತನಾಡದೆ, ಉಗುಳು ನುಂಗಿಕೊಳ್ಳುತ್ತ:—ಇಲ್ಲ ಮಹಾಶಯರೇ, ತಾವು ಕೆಳಗಿಳಿದು ಹೋದ ನಂತರ ಇವರ ಪ್ರಕೃತಿಯು ಹೀಗೆ ಒಮ್ಮೆಲೆ ವಿಕೋಪಕ್ಕಿಟ್ಟಿದೆ.

ಡೆಭೆನಟನು ನೀರಸ ದನಿಯಿಂದ:-ಡಾಕ್ಟರರೇ, ಸುಮ್ಮನೆ ನಿಂತುಕೊಂಡು ನೀವು ಈ ಅವಲಕ್ಷಣಗಳನ್ನೆಲ್ಲ ನೋಡುತ್ತಿರುವಿರೋ ಹೊರತು, ಪ್ರತೀಕಾ ರಕ್ಕೆ ಒಂದಿಷ್ಟೂ ಉಪಾಯ ಮಾಡಲೊಲ್ಲಿರಲ್ಲ! ಡಾಕ್ಟರರೇ, ಇದೇ ನಿಮ್ಮ ಪ್ರಸಿದ್ಧಿ ಯೇನು? ಒಳ್ಳೆಯ ಡಾಕ್ಟರರು ನೀವು!

ಡಾಕ್ಟರನು ಡೆಭೆನಟನ ಮೋರೆಯ ಕಡೆಗೆ ಕಕ್ಕಾವಿಕ್ಕಿಯಾಗಿ ನೋಡುತ್ತ: "ಮಹಾನುಭಾವರೇ! ಇನ್ನೇನುಪಾಯ ಮಾಡುವದಿದೆ ಇಲ್ಲಿ? ಡಾಕ್ಟರನಾದ ಮಾತ್ರಕ್ಕೆ ನಾನು ರೋಗಿಯ ಆಯುಷ್ಯವನ್ನು ಹೆಚ್ಚಿಸ ಬಲ್ಲೆನೆ? ರೋಗ ನಿವಾ ರಣದ ಔಷಧಿಗಳಿರುವಂತೆ ಮೃತ್ಯು ನಿವಾರಣದ ಔಷಧಿಯನ್ನು ಇದು ವರೆಗೆ ಯಾರೂ ಪ್ರಚುರ ಪಡಿಸಿಲ್ಲ. ಈಗ ತಮಗೆ ಹೇಳುವದೂ ಕಷ್ಟ; ಬಿಡುವದೂ ಕಷ್ಟ. ತಮ್ಮ ಹೆಂಡತಿಯ ಪ್ರಾಣಜ್ಯೋತಿಯು ನಂದಲಿಕ್ಕೆ ಇನ್ನು ಹೆಚ್ಚು ಅವ ಕಾಶವಿಲ್ಲ. ಈಶ್ವರೇಚ್ಛೆಯನ್ನು ತಪ್ಪಿಸುವರಾರು?"

"ಈಕೆಯು ಇನ್ನು ಬದುಕಲಾರಳೇ! ಇವಳ ಸಾವನ್ನು ತಪ್ಪಿಸುವದು ನಿಮಗಸಾಧ್ಯವಾಯಿತೇ? '

"ನನಗೇ ಏಕೆ, ಚಿಕಿತ್ಸಾಪ್ರವೀಣರಿಗೂ ಅಸಾಧ್ಯವೇ ಆಗಿದೆ. ಮರಣಕ್ಕೆ ಮಾರಕವಿಲ್ಲೆಂಬದನ್ನು ಆಗಲೆ ತಿಳಿಸಿರುವೆನಲ್ಲವೆ?"

ಡೆಭೆನಟನು ಮೋರೆ ತಗ್ಗಿಸಿಕೊಂಡು ಕೆಲ ವೇಳೆಯ ವರೆಗೆ ಆಲೋಚಿಸಿ, ಬಳಿಕ ಅಸ್ಫುಟ ಸ್ವರದಿಂದ:—ದೇವರು ನನ್ನ ದೈವದಲ್ಲಿ ಇದನ್ನೇ ಬರೆದಿರು ವನೋ? ಮೊಗ್ಗೆಯು ಅರಳರಳುವಷ್ಟರಲ್ಲಿ ಕಾಲನ ಕಾದ ನಿಶ್ವಾಸದಿಂದ ಅಕಾಲ ದಲ್ಲೇ ಕಮರಿ ಹೋಯಿತು! ಅಯ್ಯೋ, ಇದೆಂಥ ಕಷ್ಟವಪ್ಪಾ? ಡಾಕ್ಟರರೇ, ಈಕೆಯ ಅಂತ್ಯಾವಸ್ಥೆಗೆ ಅವಕಾಶವೆಷ್ಟಿದೆಯೆಂಬದನ್ನಾದರೂ ಹೇಳಬಲ್ಲಿರಾ?

ಕೆಳಮೋರೆಯಿಂದಲೇ ಡಾಕ್ಟರನು:—ಬಹಳವಾದರೆ ಇನ್ನು ಒಂದು

ತಾಸು ತಡೆದೀತು; ಅಥವಾ ನಾಳೆ ಬೆಳಗಾಗುವ ವರೆಗೆ ಉಳಿದರೂ ಉಳಿದೀತು. ಮಹಾನುಭಾವರೇ, ನಾನಿನ್ನು ಹೊರಡುವೆನು; ಅಪ್ಪಣೆ ಕೊಡಿರಿ.

ಹೀಗೆಂದವನೇ ಆ ಡಾಕ್ಟರನು ಡೆಭೆನಟನ ಸಮ್ಮತಿಯ ದಾರಿ ನೋಡದೆ, ತನ್ನ ಬ್ಯಾಗನ್ನು ತಕ್ಕೊಂಡು ಆ ಕೋಣೆಯಿಂದ ಹೊರಬಿದ್ದನು. ಆ ದಾದಿಯು ನಿಶ್ಶಬ್ದದಿಂದಲೂ ನತ ಮುಖದಿಂದಲೂ ಡಾಕ್ಟರನನ್ನು ಹಿಂಬಾಲಿಸಿ ಹೋದಳು. ಡೆಭೆನಟನೊಬ್ಬನೇ ತನ್ನ ಹೆಂಡತಿಯ ಮರಣೋನ್ಮುಖ ದೇಹದ ಪಕ್ಕದಲ್ಲಿ ಕುಳಿತು ಅವಳ ಮುಖದ ಕಡೆಗೆ ಮಿಕಿ-ಮಿಕಿಯಾಗಿ ನೋಡುತ್ತಿದ್ದನು. ಅವಳ ಹಣೆಯ ಮೇಲೂ ತಲೆಯ ಮೇಲೂ ಕೈಯಾಡುತ್ತಾಡುತ್ತ ಅವನು ಆ ಇಡಿ ಕಾಲ ರಾತ್ರಿಯನ್ನು ಕಳೆದನು. ಆ ಇಡಿ ರಾತ್ರಿಯಲ್ಲಿ ಅವನಿಗೆ ಆಕೆಯ ಬಾಯ ಯಾವ ಬಗೆಯ ಶಬ್ದವೂ ಕೇಳಿಸಲಿಲ್ಲ. ಬೆಳಗಾಗುತ್ತಲೆ ಅವಳು ಕಣ್ದೆರೆದು ಡೆಭೆನಟನ ಕಡೆಗೆ ನೋಡಹತ್ತಿದಳು. ಮರಣೋನ್ಮುಖಳಾಗಿದ್ದ ಆ ಯುವತಿಯ ಕಣ್ಣು ಗಳು ಅಶ್ರುಗಳಿಂದ ತುಂಬಿದ್ದವು. ಆಗ ಅವಳು ಕ್ಷೀಣ ಸ್ವರದಿಂದ:—"ಜನ, ಇಡಿ ರಾತ್ರಿಯಲ್ಲಿ ಎಚ್ಚತ್ತೇ ಕುಳಿತಿರುವಿರೇನು? ನೀವು ಸುಮ್ಮನೆ ಇಷ್ಟು ಕಷ್ಟ ವಹಿಸಿದಿರಿ ನನ್ನ ಅವಸಾನ ಕಾಲವು ಒದಗಿ ಒಂದಿರುತ್ತದೆ. ಪ್ರಿಯಕರಾ! ನನಗಪ್ಪಣೆಯನ್ನು ಕೊಡು! ನನ್ನ ಪ್ರಾಚೀನ ಪುಣ್ಯಾವಶೇಷದಿಂದಲೇ ನಾನು ನಿಮ್ಮನ್ನು ಪಡೆದಿದ್ದೆನು. ಈ ಅಮಿತ ಸೌಖ್ಯವು ನನಗಪೇಕ್ಷನವಾಯಿತು; ಆದರೂ ನಾನು ನಿಮ್ಮ ತೊಡೆಯ ಮೇಲೆ ಬಿದ್ದು ಸಾಯುವದೊಂದು ಬಹು ಸಮಾಧಾ ನದ ಸಂಗತಿಯೇ ಆಗಿದೆ. ನನ್ನೀ ಮರಣಕ್ಕೆ ಸುಖದ ಸಾವೆಂದು ನಾನಂದು ಕೊಳ್ಳುತ್ತೇನೆ. ಇಕೋ, ಇಲ್ಲಿ ನಿಮ್ಮ ಮಗುವಿದೆ; ನೋಡಿಕೊಳ್ಳಿರಿ. ತಾಯಿಯನ್ನು ಕಳಕೊಳ್ಳುವ ಈ ಕೂಸಿಗೆ ಕಷ್ಟವಾಗದಂತೆ ನೋಡಿಕೊಳ್ಳಿರಿ. ಇದಕ್ಕೆ ತಾಯಿಯ ಅಭಾವವನ್ನು ತೋರಗೊಡಬೇಡಿರಿ. ನೀವು ಈತನನ್ನು ಇಂಗ್ಲಂಡಕ್ಕೆ ಕರೆದೊಯ್ದು ಬುದ್ಧಿವಂತನನ್ನಾಗ ಮಾಡಿರಿ. ಇನ್ನು ನಾನು ಹೇಳುವದೇನಿದೆ? ......."

ಥೂಲಾಈಟಳ ಕಂಠರೋಧವಾಯಿತು. ಶ್ವಾಸವು ಘೊರ್ ಘೊರ್ರೆಂದು ಧ್ವನಿಗೆಯ್ಯಹತ್ತಿತು! ನೆಟ್ಟಗಣ್ಣಿಗಿಟ್ಟವು!! ಈಕೆಯ ಅವಸ್ಥೆಯು ಮುಗಿದೇ ಹೋಯಿತೆಂದು ಡೆಭೆನಟನು ತಿಳಿದನು. ಆಗಲವನು ರುದ್ಧಕಂಠದಿಂದ ಹೆಂಡತಿ ಯನ್ನು ಕುರಿತು:—"ಥೂಲಾಈಟ! ಪ್ರಿಯೇ! ನನ್ನನ್ನು ತ್ಯಜಿಸಿ ಹೋಗಬೇಡ; ನನ್ನೆಡೆಗೆ ಹಿಂದಿರುಗಿ ಬಾ. ನಿನ್ನ ಸಲುವಾಗಿ ನಾನು ಸ್ವದೇಶ, ಸಮಾಜ, ಬಂಧು-ಬಾಂಧವರು, ಆಪ್ತೇಷ್ಟರು ಮುಂತಾದವರನ್ನೆಲ್ಲ ತ್ಯಜಿಸಿರಲು, ನೀನು ನನ್ನನ್ನು ತ್ಯಜಿಸಿ ಹೋಗುವಿಯಾ? ಈ ಭೂಮಂಡಲದಲ್ಲಿ ನನ್ನಂತಹ ದುರ್ಭಾಗ್ಯನು ಬೇರೆ

ಯಾವನಿರುವನು?'' ಹೀಗೆಂದು ಆಕ್ರೋಶವಾಡಹತ್ತಿದನು. ಅಷ್ಟರಲ್ಲಿ ಪಕ್ಕದಲ್ಲಿಯೇ ಮಲಗಿದ್ದ ಶಿಶುವು ಅಳಹತ್ತಲು, ಡೆಭೆನಟನ ಚಿಂತೆಯು ಮತ್ತಿಷ್ಟು ಹೆಚ್ಚಿತು. ಅವನು ಆ ಶಿಶುವನ್ನು ಎತ್ತಿಕೊಳ್ಳಲು, ಆತನ ಕಣ್ಣುಗಳಿಂದ ಇದುವರೆಗೆ ಯಾವಾಗಾದರೊಮ್ಮೆ ಉದುರುತ್ತಿದ್ದ ಕಂಬನಿಗಳು, ಈಗ ಧಾರೆಗಟ್ಟಿ ಸುರಿಯಹತ್ತಿದವು!

ಡೆಭೆನಟನು ಶಿಶುಸಂಗೋಪನವನ್ನು ಒಲ್ಲವನಾಗಿರಲಿಲ್ಲ; ಆದುದರಿಂದ ಅದರ ಅಳುವನ್ನು ನಿಲ್ಲಿಸಲಿಕ್ಕೆ ಅವನು ಹೇಗೆ ಸಮರ್ಥನಾದಾನು? ಆ ಕೂಸಿನ ಅಳುವನ್ನೇ ನಿಲ್ಲಿಸದಾದ ಅವನು, ತನ್ನ ಹೆಂಡತಿಯ ಕಟ್ಟಕಡೆಯ ಆದೇಶದಂತೆ ಆ ಕೂಸನ್ನು ಬುದ್ಧಿವಂತನನ್ನೆಂತು ಮಾಡುವನು? ಆ ಕೂಸನ್ನು ಇಂಗ್ಲಂಡಿಗೆ ಕರೆದೊಯ್ದು ಇದು ತನ್ನ ಲಗ್ನದ ಹೆಂಡತಿಯ ಗರ್ಭದಿಂದ ಜನಿಸಿದ ಸಂತಾನವೆಂದು ತಾನು ಆ ಇಂಗ್ಲಿಷ ಸಮಾಜದಲ್ಲಿ ಅದರ ಪರಿಚಯ ಮಾಡಿಕೊಡುವದು ಯೋಗ್ಯವಾದೀತೇ? ಇದೆಲ್ಲ ತೀರ ಅಸಂಭವವೆಂದು ಆವನಿಗನಿಸಿತು. ಅದರಂತೆ ಕ್ಯಾಂಟನ್ನ ಪಟ್ಟಣದೊಳಗಿನ ಯಾರೊಬ್ಬರ ವಶಕ್ಕೆ ಆ ಶಿಶುವನ್ನು ಕೊಟ್ಟು ಅದರ ಪರಿಪಾಲನದ ಭಾರವನ್ನು ಅವರ ಮೇಲೆ ಹೊರಿಸಿ, ತನ್ನ ಪ್ರಿಯತಮೆಯ ಕಟ್ಟಕಡೆಯ ಇಚ್ಛೆಯ ವಿರುದ್ಧ ನಡೆದು, ಆಕೆಯ ಆ ಒಂದೇ ಒಂದಾದ ಸ್ಮೃತಿಯನ್ನು ವಿಸರ್ಜನಗೊಳಿಸಿ, ಸ್ವದೇಶಕ್ಕೆ ಹೊರಟು ಹೋಗುವದನ್ನೂ ಅವನು ಬಹು ಗರ್ಹಣೀಯವೆಂದು ತಿಳಿದನು. ಸ್ವದೇಶಕ್ಕೆ ಹೋಗಿ ಅಲ್ಲಿಯ ಇಂಗ್ಲಿಷ ಸಮಾಜದ ಮುಂದೆ ಆ ಗುಪ್ತ ವಿವಾಹದ ಸಂಗತಿಯನ್ನು ಪ್ರಕಟಿಸುವದು ಬಹು ನಾಚಿಕೆಗೇಡಿತನದ ಹಾಗು ಕಲಂಕದ ವಿಷಯವೆಂದು ಆತನಿಗನಿಸಿತು. ಆ ಶಿಶುವೇ ಆತನ ಆ ಕಲಂಕದ ಅಖಂಡವಾದ ಪ್ರಮಾಣವಾಗಿದ್ದಿತು. ಆದುದರಿಂದ ಆತನು ಆ ಕಲಂಕರೂಪೀ ಶಿಶುವನ್ನು ಸಂಗಡ ತಕ್ಕೊಂಡು ಸ್ವದೇಶಕ್ಕೆ ತೆರಳುವದೆಂತು? ಕಟ್ಟಕಡೆಗೆ ಆತನು ನಿಶ್ಚಯಿಸಿದ್ದೇನಂದರೆ:— ಈ ಶಿಶುವನ್ನು ಇದರ ಚಿಕ್ಕಮ್ಮನ ಅಂದರೆ ತನ್ನ ಹೆಂಡತಿಯ ಭಗಿನಿಯಾದ ಸಿತಾಬಳ ಕೈಯಲ್ಲಿ ಕೊಡಬೇಕೆಂದು. ಸಿತಾಬಳು ಆ ಕೂಸನ್ನು ಹೆಚ್ಚಾಗಿ ಪ್ರೀತಿಸುತ್ತಿದ್ದಳು ಆಕೆಯ ಬಳಿಯಲ್ಲಿದ್ದರೆ ಈ ಮಗುವಿಗೆ ಯಾವ ೯ಗೆಯ ತೊಂದರೆಯೂ ಆಗಲಿಕ್ಕಿಲ್ಲೆಂದು ಡೆಭೆನಟನ ವಿಶ್ವಾಸವಿತ್ತು.

ಕೆಲ ಹೊತ್ತಿನ ಮೇಲೆ ದೆಭೆನಟನು ಆ ಕೂಸಿಗೆ ಚುಕ್ಕು ಬಡೆದು, ಅದನ್ನು ಅದರ ಹಾಸಿಗೆಯ ಮೇಲೆ ಮಲಗಿಸಿದನು. ತದನಂತರ ಅವನು ಆ ಕೋಣೆಯಿಂದ ಹೊರಹೊರಟನು. ಆಗ ಪ್ರಾತಃಕಾಲದ ಹೂ ಬಿಸಿಲಿನಿಂದ ಸಮಗ್ರ ಭೂಮಂಡಲವು ಕುಲು ಕುಲು ನಗುತ್ತಿರುವಂತೆ ತೋರುತ್ತಿತ್ತು; ಆದರೂ ಆತ್ರನ ಅಂತರಂಗದೊಳಗಿನ ಗಾಢವಾದ ಅಂಧಃಕಾರವು ಕಡಿಮೆಯಾಗಲಿಲ್ಲ.

ಆತನು ನಿಟ್ಟುಸಿರುಗರೆಯುತ್ತ ತನ್ನ ಪತ್ನಿಯ ಅಂತ್ಯವಿಧಿಯ ಕಾರ್ಯಕ್ಕೆಂದು ಶವವಾಹಕರ ಶೋಧಕ್ಕೆ ನಡೆದನು.

\+ \+ \+ \+ \+

ಮಾರ್ಟಿನ ಡೆಭೆನಟನ ಸ್ತ್ರೀಯ ಅಂತ್ಯವಿಧಿಯು ಯಥಾಸಾಂಗವಾಗಿ ನೆರವೇರಿತು. ಅದಾದ ಕೂಡಲೆ ಅವನು ಸ್ವದೇಶಕ್ಕೆ ಹೊರಡಲು ಆತುರಪಡಹತ್ತಿದನು. ತನ್ನ ಆ ಎಳೆಗೂಸಿನ ಬಗ್ಗೆ ಆತನಲ್ಲಿ ಹೆಚ್ಚಾಗಿ ಪ್ರೇಮವಿದ್ದರೂ ಅದನ್ನು ಸ್ವದೇಶಕ್ಕೆ ತಕ್ಕೊಂಡು ಹೋಗುವದನ್ನು ಅವನು ಯೋಗ್ಯವೆಂದು ತಿಳಿಯಲಿಲ್ಲ. ಆತನು ಈ ಚೀನದೇಶಕ್ಕೆ ಬಂದು ಇಲ್ಲಿಯ ಚೀನೀಯ ಸುಂದರಿಯೊಡನೆ ಲಗ್ನವಾದದ್ದೇನೋ ನಿಜ; ಆದರೆ ಸ್ವದೇಶಕ್ಕೆ ಹೋಗಿ, ಸ್ವಜನರ ಒಳಿಯಲ್ಲಿ ಈ ಸಂಗತಿಯನ್ನು ಪ್ರಕಟಿಸುವದು ತೀರ ನಾಚಿಕೆಗೇಡೆಂದು ಅವನು ತಿಳಿದನು. ಅದಕ್ಕಾಗಿಯೇ ಅವನು ಇದುವರೆಗೆ ತನ್ನ ಹೆಸರು ಕೂಡ ಬದಲಿಸಿಕೊಂಡು ಆ ಕ್ಯಾಂಟನ್ನ ಪಟ್ಟಣದ ಒಳಿಯ ಆ ಕೆಟ್ಟ ಹಳ್ಳಿಯಲ್ಲಿ ವಾಸವಾಗಿದ್ದನು. ಚೀನದೇಶಕ್ಕೆ ಬಂದಿದ್ದ ಯಾವ ಇಂಗ್ಲಿಷನೂ ಅದನ್ನರಿಯನು.

ತನ್ನ ಹೆಂಡತಿಯು ಗತಿಸಿದ ದಿನವೇ ಡೆಭೆನಟನು ಆಕೆಯ ತಂಗಿಯಾದ ಸಿತಾಬಳನ್ನು ಕರೆಯಿಸಿ, ಆಕೆಯ ಕೈಯಲ್ಲಿ ಆ ಮಾತೃವಿಹೀನ ಕೂಸನ್ನು ಕೊಟ್ಟು, ಅದರ ಪಾಲನಪೋಷಣದ ಸಮಸ್ತ ಭಾರವನ್ನೂ ಆಕೆಗೊಪ್ಪಿಸಿದನು. ಅಂದಿನಿಂದ ಸಿತಾಬಳು ಆತನ ಆ ಮನೆಯಲ್ಲೇ ವಾಸಿಸಹತ್ತಿದಳು. ಸ್ವದೇಶಕ್ಕೆ ಹೊರಡುವದನ್ನು ನಿರ್ಧರಿಸಿಕೊಂಡ ನಂತರ ಒಂದು ದಿನ ಸಾಯಂಕಾಲದಲ್ಲಿ ಡೆಭೆನಟನು ಮನೆಗೆ ಬಂದಾಗ ಸಿತಾಬಳು ತನ್ನ ಶಯನಗೃಹದಲ್ಲಿ ಆ ಶಿಶುವಿನೊಡನೆ ನಗೆಯುತ್ತ-ಕೆಲೆಯುತ್ತ ಕುಳಿತಿದ್ದಳು. ಅವನು ಇದುವರೆಗೆ ಅವರಾರ ಮುಂದೂ ತನ್ನ ನಿಜವಾದ ಇಂಗ್ಲಿಷ ಹೆಸರನ್ನು ಪ್ರಕಟಿಸಿರಲಿಲ್ಲ. ಆತನ ಹೆಂಡತಿಗೆ ಕೂಡ ಅದು ಗೊತ್ತಿರಲಿಲ್ಲ! ಎಲ್ಲರೂ ಅವನನ್ನು ಜನ ಮೆರಿಡಿಥನೆಂದೇ ತಿಳಿದಿದ್ದರು.

ಪೌರ್ವಾತ್ಯರು ಬಹಿರಂಗದಲ್ಲಿಯಂತೂ ಯುರೋಪಿಯನ್ನರನ್ನು ಸನ್ಮಾನಿಸುವ ವಿಷಯದಲ್ಲಿ ಹಿಂದೆಗೆಯುವವರಲ್ಲ. ಡೆಭೆನಟನು ಸಿತಾಬಳಿಗೆ ಭಗಿನೀಪತಿಯಾಗಿದ್ದರೂ ಅವಳು ಅವನನ್ನು ಸಾಕಷ್ಟು ಸನ್ಮಾನಿಸುತ್ತಿದ್ದಳೆಂಬದನ್ನು ಸ್ವತಃ ಡೆಭೆನಟನೂ ಅಲ್ಲಗಳೆಯುವಂತಿರಲಿಲ್ಲ. ಆತನು ಆಗ ಹಾಗೆ ಆಕಸ್ಮಿಕವಾಗಿ ತನ್ನ ಕೋಣೆಯನ್ನು ಪ್ರವೇಶಿಸಲು, ಅವಳು ಕುಳಿತ ಸ್ಥಳದಿಂದ ಚಟಕ್ಕನೆ ಎದ್ದು ನಿಂತಳು; ಹಾಗು ಅವನೆದುರಿಗೆ ಒಂದು ಕುರ್ಚಿಯನ್ನು ತಂದಿಟ್ಟಳು. ಕೂಡಲೆ ಡೆಭೆನಟನು ಅದರ ಮೇಲೆ ಕುಳಿತು, ಅವಳಿಗೂ ಬೇರೊಂದರ ಮೇಲೆ ಕೂಡ್ರಲಿಕ್ಕೆ ಸಂಜ್ಞೆ ಮಾಡಿದನು. ಡೆಭೆನಟನು ಆ ಶಿಶುವಿನ ಕಡೆಗೆ ನೋಡಿ ಒಮ್ಮೆಲೆ

ಹುಬ್ಬು ಗಂಟಿಕ್ಕಿದನು; ಯಾಕಂದರೆ ಆ ಕೂಸಿನ ಮುಖವು ಕೇವಲ ಅದರ ತಾಯಿಯ ಮುಖದಂತೆಯೇ ಇದ್ದಿತು ಭವಿಷ್ಯತ್ಕಾಲದಲ್ಲಿ ಈ ಹುಡುಗನನ್ನು ನೋಡಿ ಇದು ಚೀನದೇಶದ ಪ್ರಜೆಯೇ ಎಂದು ಪ್ರತಿಯೊಬ್ಬರ ಖಾತ್ರಿಯಾಗುವಂತಿತ್ತೆಂಬದು ಮನಸ್ಸಿನಲ್ಲಿ ಬರಲು, ಡೆಭೆನಟನ ಹೃದಯವಿದಾರಣವಾಯಿತು. ಆಗ ಆತನು ಸಿತಾಬಳನ್ನುದ್ದೇಶಿಸಿ: ಸಿತಾಬ, ನಾನು ನಾಳಿಯ ದಿನವೇ ಸ್ವದೇಶಕ್ಕೆ ಹೊರಡುತ್ತೇನೆ. ನಿನ್ನ ಬಳಿಯಲ್ಲಿ ನಾನು ಕೆಲ ಸಂಗತಿ ಹೇಳಬೇಕೆಂದಿದ್ದೇನೆ. ಇಂದೇ ಅದನ್ನು ಹೇಳಿ ಬಿಡಬೇಕಾಗಿದೆ. ನಾನು ಈ ಮೊದಲು ನಿನಗೆ ಏನೇನನ್ನು ಹೇಳಿದ್ದೆನೋ ಅದೆಲ್ಲವೂ ನಿನ್ನ ನೆನಪಿನಲ್ಲಿದೆಯೋ!

ಸಿತಾಬ:— ಸಾಹೇಬರೇ, ಅದೆಲ್ಲವೂ ಚೆನ್ನಾಗಿ ನೆನಪಿದೆ.

"ನೀನು ಈ ಹುಡುಗನ ಪಾಲನ-ಪೋಷಣೆಯ ಭಾರಹೊರಲಿಕ್ಕೆ ಸಮ್ಮತಿಸಿರುವೆ. ಅದರಂತೆ ಈತನನ್ನು ಯತ್ನಪೂರ್ವಕವಾಗಿ ಪರಿಪಾಲಿಸುವೆಯಷ್ಟೇ?"

"ಯಥಾಮತಿಯಿಂದ ಪ್ರಯತ್ನಪೂರ್ವಕವಾಗಿ ಮಾಡುವೆನು. ಈ ಕೂಸಿಗೆ ತನ್ನ ತಾಯಿಯ ನೆನಪು ಕೂಡ ಆಗದ ಹಾಗೆ ನೋಡಿಕೊಳ್ಳುತ್ತೇನೆ."

"ಈ ಹುಡುಗನಿಗೆ ಹೆಸರನ್ನೇನಿಡುವೆ? ನೀನು ಈತನಿಗೆ ನಿಮ್ಮ ಚೀನ ದೇಶದ ಅಂಕಿತನಾಮದಿಂದಲೇ ಸಂಬೋಧಿಸಬೇಕೆಂದು ನನ್ನಿಚ್ಛೆಯಿದೆ ಈತನಿಗೆ ನಮ್ಮ ಯುರೋಪಿಯ ಹೆಸರನ್ನಿಡಲಿಕ್ಕೆ ನನ್ನ ಒಪ್ಪಿಗೆಯಿಲ್ಲ. ಈತನ ತಾಯಿಯು ಯಾವ ದೇಶದವಳೋ ಅದೇ ದೇಶದ ಹೆಸರೇ ಈತನಿಗೆ ಸಲ್ಲತಕ್ಕದ್ದಾಗಿದೆ."

"ಇದಂತೂ ಯೋಗ್ಯ ಸಲಹೆಯೇ ಆಗಿದೆ. ಇದಕ್ಕೆ ನನ್ನ ಪ್ರತಿವಾದಿತ್ವವಿಲ್ಲ. ನಾನು ಈ ಕೂಸಿಗೆ "ಫ್ಯಾನ ಟುಂಡ" ಎಂಬ ನಮ್ಮ ಪಿತೃವಂಶದ ಹೆಸರನ್ನಿಡುತ್ತೇನೆ; ಆದರೆ ಈ ಹುಡುಗನು ದೊಡ್ಡವನಾದ ಒಳಿಕ ಈತನಿಗೆ ಈತನ ತಂದೆಯ ಪರಿಚಯ ಮಾಡಿಕೊಡಬೇಕೇನು?"

"ಛೇ-ಛೇ. ನನ್ನಿಚ್ಛೆ ಹಾಗಿಲ್ಲ. ನಾನೇ ಈತನ ತಂದೆಯೆಂಬದನ್ನು ಇವನಿಗೆ ಎಂದೂ ತಿಳಿಯಗೊಡಲಾಗದು. ತಾನು ಚೀನೀ ದಂಪತಿಗಳ ಮಗನು ಎಂಬಂತೆಯೇ ಈತನಿಗೆ ಸದಾ ತಿಳಿದಿರಬೇಕು."

"ಹಾಗೆಯೇ ಆಗಲಿ. ತಾವು ಆಗಾಗ್ಗೆ ಈ ದೇಶಕ್ಕೆ ಬರುತ್ತಿರುವಿರಷ್ಟೇ?"

"ಆ ಬಗ್ಗೆ ನಿಷ್ಕರ್ಷವಾಗಿ ತಿಳಿಸಲಾರೆನು. ಬಂದರೆ ಬರುವೆನು; ಬರದಿದ್ದರೆ ಇಲ್ಲ. ನಮ್ಮ ದೇಶವು ಇಲ್ಲಿಂದ ಬಹಳ ದೂರದಲ್ಲಿದೆ. ನಾನು ಇಲ್ಲಿಗೆ ಮುಂದೆ ಎಂದೂ ಬರದಿದ್ದರೂ ಅದರಿಂದ ಈ ಹುಡುಗನಿಗೆ ಯಾವ ಬಗೆಯ ತೊಂದರೆಯೂ ಉಂಟಾಗದೆಂಬದನ್ನು ಖಂಡಿತವಾಗಿ ತಿಳಿ. ನಾನು ನಿನಗೆ ಎಷ್ಟು ಹಣವನ್ನು ಕೊಟ್ಟು ಹೋಗುವೆನೋ, ಅಷ್ಟರಲ್ಲಿ ನಿಮ್ಮೀರ್ವರ ಊಟ-ಉಡಿಗೆ

ಗಳ ವೆಚ್ಚವು ಬಹು ದಿನಗಳ ವರೆಗೆ ನಿರಾತಂಕವಾಗಿ ಸಾಗುವದು. ಮುಂದಾದರೂ ನಿಮಗೆ ದುಡ್ಡಿನ ಕೊರತೆಯುಂಟಾಗಬಾರದೆಂದು ನಾನು ಇಲ್ಲಿಯ ಇಂಗ್ಲಿಷ ಕಂಪನಿಯ ಬ್ಯಾಂಕಿನಲ್ಲಿ ನಾಕಷ್ಟು ಹಣವನ್ನು ಠೇವಾಗಿಟ್ಟು ಹೋಗುತ್ತೇನೆ. ಅದರ ಬಡ್ಡಿ-ಬಾಚಿಯಿಂದಲೇ ನಿಮ್ಮಗಳ ಎಲ್ಲ ಖರ್ಚು ಸರಿಯಾಗಿ ಸಾಗುವದು. ಆರಾರು ತಿಂಗಳಿಗೆ ನಿಮ್ಮ ಮನೆಬಾಗಿಲಿಗೆ ಆರೇಳು ನೂರು ತಾಯೇನ (ಚೀನದೇಶದ ಭಾರೀ ನಾಣ್ಯ)ಗಳು ತಪ್ಪದೆ ಬರುವ ವ್ಯವಸ್ಥೆ ಮಾಡುವೆನು.

ಅದನ್ನು ಕೇಳಿ ಸಿತಾಬಿಳು ಪರಮ ಸಂತಸಬಟ್ಟು:—"ಅಹುದು; ಸಾಹೇಬರೇ, ಅಷ್ಟು ಹಣದಿಂದ ನಮ್ಮ ತಾಯಿ-ಮಕ್ಕಳ ನಿರ್ವಾಹವು ದೊಡ್ಡ ರಾಜರಂತೆ ಸಹಜವಾಗಿ ಸಾಗುವದು; ಆದರೆ ಆ ಹಣವು ನಮಗೆ ಎಷ್ಟು ದಿನಗಳ ವರೆಗೆ ಸಲ್ಲುವದೆಂಬದನ್ನು ತಿಳಿಯಲಪೇಕ್ಷಿಸುತ್ತೇನೆ."

"ಎಲ್ಲಿಯ ವರೆಗೆ ನೀವೀರ್ವರೂ ಜೀವಂದಿರುವಿರೋ ಅಲ್ಲಿಯ ವರೆಗೆ ಆ ಹಣವು ತಪ್ಪದೆ ಬರುತ್ತಿರುವದು. ಒಂದುವೇಳೆ ನಿಮ್ಮೀರ್ವರಲ್ಲಿ ಯಾರೊಬ್ಬರು ಸತ್ತರೂ ಹಿಂದುಳಿದವರ ಜೀವಮಾನಪರ್ಯಂತ ಆ ಸಂಪೂರ್ಣ ಹಣವು ಅವರಿಗೆ ಸಲ್ಲುತ್ತಲೇ ಹೋಗುವದು; ಆದರೆ ಕೊಂಚವೂ ಕಷ್ಟವಿಲ್ಲದೆ ದುಡ್ಡು ಬರುತ್ತಿರುವದೆಂದಮಾತ್ರಕ್ಕೆ ಈ ಹುಡುಗನು ವಯಸ್ಸಿಗೆ ಬಂದ ಬಳಿಕ ಉಪಾರ್ಜನರಹಿತನಾಗಿ ಆಲಸ್ಯದಲ್ಲಿ ಕಾಲ ಕಳೆಯಹತ್ತುವದು ಸರಿಯಲ್ಲ. ಈತನಿಗೆ ಚೆನ್ನಾಗಿ ಓದು-ಬರಹ ಕಲಿಸಿ, ವಯಸ್ಸಿಗೆ ಬಂದ ಮೇಲೆ ಈತನನ್ನು ಯಾವುದೊಂದು ಯಂತ್ರ ಕಾರಖಾನೆಯಲ್ಲಿ ಉದ್ಯೋಗಕ್ಕೆ ಹಚ್ಚಬೇಕು. ಹೊಟ್ಟೆತುಂಬ ಕೆಲಸವಿರದ ಶ್ರೀಮಂತರ ಹುಡುಗರ ಅಧಃಪತನವಾಗಲಿಕ್ಕೆ ತಡ ಹಿಡಿಯುವದಿಲ್ಲ. ಈತನನ್ನು ಮೂರ್ಖನನ್ನಾಗ ಮಾಡಕೂಡದು. ಈತನ ಒಲವಿಗನುಗುಣವಾಗಿ ತಕ್ಕ ಶಿಕ್ಷಣವನ್ನು ಕೊಡಿಸಬೇಕು."

"ಅದು ನಿಜವು. ಈತನು ಸಹಜವಾಗಿ ಪಾಠಶಾಲೆಗೆ ಹೋಗದಿದ್ದರೆ ಬೆತ್ತದಿಂದ ಚೆನ್ನಾಗಿ ಥಳಿಸಿಯಾದರೂ ನಾನು ಇವನನ್ನು ಶಾಲೆಗಟ್ಟದೆ ಬಿಡಲಿಕ್ಕಿಲ್ಲ; ಅಚ್ಚುಚ್ಚು ಮಾಡಿ ಈತನ ಸರ್ವನಾಶಕ್ಕೆ ಎಂದೂ ಕಾರಣಳಾಗಲಿಕ್ಕಿಲ್ಲ."

"ಸಿತಾಬಿ, ಮುಗಿಯಿತು. ನಾನು ನಿನಗೆ ತಿಳಿಸತಕ್ಕ ವಿಷಯವು ಮುಗಿಯಿತು ನಾನು ಈತನನ್ನು ಸ್ವದೇಶಕ್ಕೆ ಕರೆದೊಯ್ದು ಪರಿಪಾಲನೆ ಮಾಡಲಾರೆನು. ನಿನ್ನ ಬಳಿಯಲ್ಲೇ ಈ ಶಿಶುವು ಸುಖದಿಂದ ಕಾಲಯಾಪನೆ ಮಾಡಬಹುದೆಂದು ನಂಬಿ, ನಾನು ಇದನ್ನು ನಿನಗೊಪ್ಪಿಸಿ ಹೊರಟಿರುವೆನು. ನನ್ನ ಕರ್ತವ್ಯವನ್ನು ನಾನು ಮಾಡಿರುತ್ತೇನೆ; ನೀನು ಧರ್ಮ-ಕರ್ಮಗಳನ್ನು ಸ್ಮರಿಸಿ, ನಿನ್ನ ಕರ್ತವ್ಯಕ್ಕುದ್ಯುಕ್ತಳಾಗು."

ಹೀಗೆಂದು ಹೇಳಿ ಡಭೆನಟನು ಬಂಗಾರದ ನಾಣ್ಯಗಳಿಂದ ತುಂಬಿದ ಒಂದು ಭಾಂಡವನ್ನು ಸಿತಾಬಿಳ ಮುಂದಿರಿಸಿದನು, ಹಾಗು ಅವಳ ಬಳಿಯ ಆ ಮುದ್ದು ಬಾಲಕನನ್ನು ಎತ್ತಿಕೊಂಡು ಮೂರು ಮೂರು ಸಾರೆ ಮುದ್ದಿಟ್ಟನು. ತದನಂತರ ಅವನು ಅದನ್ನು ಸಿತಾಬಿಳ ಕೈಯಲಿ ಕೊಟ್ಟು ಮನಸಿನಲ್ಲಿಯೇ:— “ಈ ಬಾಲಕನ ಬಗ್ಗೆ ನನ್ನ ಕರ್ತವ್ಯವೇನೋ ಆ ವಿಷಯದಲ್ಲಿ ನಾನು ತಿಲಮಾತ್ರವೂ ತಪ್ಪಲಿಲ್ಲ. ಇವರುಗಳ ಊಟ-ಉಡಿಗೆಗಳಿಗಾಗಿ ವರ್ಷಕ್ಕೆ ಎರಡುನೂರು ಪೌಂಡಿನ ನೇಮಣೂಕು ಮಾಡಿಕೊಟ್ಟಿರುವೆನು ಇವರಿಬ್ಬರಿಗೆ ಇದು ಸ್ವಲ್ಪಾಗಲಿಲ್ಲ. ಇದಕ್ಕೂ ಹೆಚ್ಚು ನಾನೇನು ಮಾಡಬಲ್ಲೆನು? ಈ ಹುಡುಗನನ್ನು ನಮ್ಮ ದೇಶಕ್ಕೊಯ್ಯುದು, ಇವನು ನನ್ನ ಮಗನೆಂದು ಹೇಳಿಕೊಳ್ಳುವದು ನನ್ನಿಂದಾಗದು. ಇದು ಬಹು ನಾಚಿಕೆ ಪಡುವ ಸಂಗತಿಯಾಗಿದೆ. ಅಂತೆಯೇ ನಾನು ಇವನನ್ನು ಹೀಗೆ ಇಲ್ಲಿ ಬಿಟ್ಟು ಹೋಗುವೆನು” ಈ ಪ್ರಕಾರ ಯೋಚಿಸಿ, ನಂತರ ಅವನು ತನ್ನ ಮನೆ-ಮಾರು, ಸ್ಥಾವರ-ಜಂಗಮ ಆಸ್ತಿ-ಪಾಸ್ತಿ ಮುಂತಾದುದೆಲ್ಲವನ್ನೂ ಸಿತಾಬಿಳ ಹೆಸರಿಗೆ ಕಾಗದ ಪತ್ರ ಬರೆದು ಕೊಟ್ಟನು; ಹಾಗೂ ಅದರ ಮರು ದಿವಸವೇ ಅವನು ಆ ಚೀನ ದೇಶಕ್ಕೆ ಕಡೆಯ ಸಾರೆ ಸಲಾಮು ಹೊಡೆದು, ಹಡಗವನ್ನೇರಿ ಸ್ವದೇಶಾಭಿಮುಖವಾಗಿ ಪ್ರಯಾಣ ಬೆಳಸಿದನು.

---

## [೨]

ಮುರ್ಖನ ಡೆಭೆನಟನು ಚೀನದೇಶವನ್ನು ಬಿಟ್ಟು ಬಂದು ಇಂದಿಗೆ ಹದಿನೆಂಟು ವರ್ಷಗಳಾದವು. ಆ ೧೮ ವರ್ಷದ ದೀರ್ಘ ಕಾಲದಲ್ಲಿ ಡೆಭೆನಟನ ಜೀವನವು ಹಲವು ಬಗೆಯಿಂದ ಪರಿವರ್ತನಗೊಂಡರೂ ಈ ಭೂಮಂಡಲವು ಮಾತ್ರ ಆ ಮೊದಲು ಹೇಗಿದ್ದಿತೋ ಈಗಲೂ ಹಾಗೆಯೇ ಇತ್ತು. ಈ ೧೮ ವರ್ಷಗಳ ಅವಧಿಯಲ್ಲಿ ತೋರಿಕೆಯಲ್ಲಂತೂ ಈ ಭೂಮಂಡಲದಲ್ಲೇನೂ ಸ್ಥಿತ್ಯಂತರವಾಗಿರಲಿಲ್ಲ. ಆ ಅವಧಿಯಲ್ಲಿ ಸಿತಾಬಿಳು ಡೆಭನಟನಿಗೆ ಹೇಗೆ ವಚನಬದ್ಧಳಾಗಿದ್ದಳೋ ಹಾಗೆ ನಡೆಯಲಿಕ್ಕೆ ಕೊಂಚವೂ ಮನಸರಿ ಮಾಡಿರಲಿಲ್ಲ. ಅವಳು ಹತ್ತು ವರ್ಷದ ವರೆಗೆ ಫ್ಯಾನ ಟುಂಡನನ್ನು ತನ್ನ ಹೊಟ್ಟೆಯ ಮಗನಂತೆಯೇ ಸಂರಕ್ಷಿಸಿದಳು. ಅದುವರೆಗೆ ಅವಳಿಗೆ ಆರಾರು ತಿಂಗಳಿಗೆ ತಲುಪುವ ಬಡ್ಡಿಯ ಹಣವು ತಪ್ಪದೆ ಬರುತ್ತಿತ್ತು. ಹತ್ತು ವರ್ಷಗಳ ನಂತರ ಡೆಭೆನಟನು ಕ್ಯಾಂಟನ ಪಟ್ಟಣದೊಳಗಿನ ಯಾವ ಇಂಗ್ಲಿಷ ಕಂಪನಿಯ ಬ್ಯಾಂಕಿನಲ್ಲಿ ತನ್ನ ಠೇವನ್ನಿಟ್ಟಿದ್ದನೋ ಆ ಕಂಪನಿಯು ಅಕಸ್ಮಾತ್ತಾಗಿ ದಿವಾಳಿ ತೆಗೆಯಿತು. ಅದರಿಂದ ಅವರು ಸಿತಾಬಿಳಿಗೆ ಏನನ್ನೂ ಕೊಡದಾದರು. ಈಚೆಗೆ ಅವಳು ದುಡ್ಡಿನ ತಾಪಕ್ಕೆ ಗುರಿಯಾಗಿದ್ದಳು!

ಆಗ ಲಂಡನ್ನಿಗೆ ಹೋಗಿದ್ದ ಜನ ಮೆಂಡಿಥನಿಗೆ ಈ ಸಂಗತಿಯನ್ನು ತಿಳಿಸುವದಕ್ಕಾಗಿ ಅವಳು ಬಹು ಆತುರಪಟ್ಟಳು; ಆದರೆ ಆಕೆಗೆ ಆತನ ಆಲಂಡನ್ನಿನೊಳಗಿನ ಪತ್ತೆ ಗೊತ್ತಿರಲಿಲ್ಲ. ಅವಳಿಗೆ ಇತ್ತೀಚೆಗೆ ಗೊತ್ತಾದ ಸಂಗತಿಗಳ ಮೇಲಿಂದ ತನ್ನ ಭಗಿನೀಪತಿಯ ನಿಜವಾದ ಹೆಸರು ಜನ ಮೆರಿಡಿಥವಹುದೋ-ಅಲ್ಲವೋ ಎಂಬ ಬಗ್ಗೆ ಅವಳಲ್ಲಿ ಸಂದೇಹವುಂಟಾಗಿತ್ತು; ಅದರಿಂದ ಅವಳು ಆ ಹೆಸರಿಗೆ ಪತ್ರ ಬರೆಯಲಿಕ್ಕೆ ಕೂಡ ಅನುಮಾನಿಸಿ, ಆ ಮಾರ್ಗವನ್ನೇ ಬಿಟ್ಟುಕೊಡಬೇಕಾಯಿತು.

ಕಡೆಗೆ ಅರ್ಥೋಪಾರ್ಜನೆಯ ಉಪಾಯಗಾಣದ ಅವಳು, ಆತನ ಆ ಮನೆಯನ್ನು ಮಾರಿಬಿಟ್ಟಳು; ಹಾಗು ಬಂದ ಹಣದಿಂದ ಹೆಚ್ಚು ಹಣ ಸಂಪಾದಿಸುವ ಹೇತುವಿಗಾಗಿ ಜೂಡ್ಯವನ್ನಾಡಹತ್ತಿದಳು; ಆದರೆ ಅದರ ಫಲವು ವಿಪರೀತವಾಗಿ, ಅವಳು ತನ್ನ ಕೈಯಲ್ಲಿದ್ದ ಬಿದ್ದದ್ದನ್ನೆಲ್ಲ ಆ ಜೂಜಿನಾಟದಲ್ಲಿ ಸೋತುಬಿಟ್ಟಳು. ಅದರಿಂದ ಅವರ ಕಾಲಯಾಪನೆಯು ಬಹು ಕಷ್ಟಕರವಾಯಿತು. ಕಡೆಗೆ ಅದೇ ಹಳ್ಳಿಯ ಕಟ್ಟಕಡೆಯ ಒಂದು ಕ್ಷುದ್ರ ಮುರುಕ ಗುಡಿಸಲನ್ನು ಅವರು ಆಶ್ರಯಿಸಬೇಕಾಯಿತು! ಡೆಭೆನಟನ ಆ ಶ್ರೀಮಂತ ಮಗನು ಇತ್ತೀಚೆಗೆ ಉಪವಾಸ-ತಪವಾಸ ಮಾಡುತ್ತ, ಹರಕುಬರಕಾದ ಉಡಿಗೆ-ತೊಡಿಗೆಗಳನ್ನು ಧರಿಸುತ್ತ ಕಂಡ ಕಂಡಲ್ಲಿ ಅಂಡಲೆಯಲಾರಂಭಿಸಿದನು. ಹೀಗಿರಲು, ಒಂದು ದಿನ ಒಬ್ಬ ಪರೋಪಕಾರ ನಿರತಳಾದ ಇಂಗ್ಲಿಷ ಹೆಣ್ಣುಮಗಳು ಆ ಬಾಲಕನ ಅವಸ್ಥೆಯನ್ನು ಕಂಡು, ಆತನ ವಿಷಯವಾಗಿ ಮನಸ್ಸಿನಲ್ಲಿ ಮರುಗಿ, ಅವನಿಗೆ ಆಶ್ರಯವಿತ್ತಳು; ಮತ್ತು ಆಕೆಯ ಪ್ರಯತ್ನದಿಂದಲೇ ಕಡೆಗೆ ಅವನಿಗೆ ಅಲ್ಲಿಯ ಅಮೇರಿಕನ್ ಮಿಶನ್ನಿನಲ್ಲಿ ಆಶ್ರಯ ದೊರಕಿತು. ಸಾಮ್ಯುಅಲ್ ರಾಬರ್ಟಸನ್ನೆಂಬ ಸದ್ಗೃಹಸ್ಥನು ಆಗ ಆ ಅಮೇರಿಕನ್ ಮಿಶನ್ನಿನ ಅಧ್ಯಕ್ಷನಾಗಿದ್ದನು.

ಮರ್ಟನ್ ಡೆಭೆನಟನ ಆ ಬಾಲಕನನ್ನು "ಫ್ಯಾನ ಟುಂಡ್" ಎಂಬ ಚೀನೀಯ ಹೆಸರಿನಿಂದಲೇ ಅಲ್ಲಿಯವರೆಲ್ಲರೂ ಗುರ್ತಿಸಹತ್ತಿದ್ದರು. ಆ ಮಿಶನ್ನಿನಲ್ಲಿ ಸೇರ್ಪಡೆ ಹೊಂದಿದ ನಂತರ ಆತನು ಸರ್ವಸಾಧಾರಣವಾಗಿ ಇಂಗ್ಲಿಷವನ್ನೇ ಕಲಿಯಹತ್ತಿದನು. ಹದಿನಾರು ವರ್ಷದ ವಯಸ್ಸಿಗೆ ಅವನು ಚಿಖೂನಾ ಎಂಬ ಹೆಸರಿನ ಒಬ್ಬ ಧನವಂತ ಚೀನಿಗನ ಕಾರಖಾನೆಯಲ್ಲಿ ಕೂಲಿಯಾಳಿನ ಕೆಲಸ ಮಾಡಲಾರಂಭಿಸಿದನು. ಫ್ಯಾನ ಟುಂಡನು ಹಾಗೆ ಕೆಲಸ ಮಾಡಹತ್ತಿದ ಕೂಡಲೆ, ಒಬ್ಬ ಬಾಗವಾನನ ಮನೆಯೊಳಗಿನದೊಂದು ಚಿಕ್ಕ ಕೋಣೆಯನ್ನು ಅಲ್ಪ ಬಾಡಿಗೆಗೆ ಗೊತ್ತುಮಾಡಿಕೊಂಡು ಅಲ್ಲಿರಹತ್ತಿದನು. ಇತ್ತೀಚೆಗೆ ಆ ಬಾಲಕನು ತನ್ನ ಚಿಕ್ಕಮ್ಮನಿಗೂ ಅಲ್ಪ-ಸ್ವಲ್ಪ ಧನ ಸಹಾಯ ಮಾಡತೊಡಗಿದನು, ಆತನು

ಮುಂದೆ ಕ್ರಿಸ್ತೀ ಧರ್ಮವನ್ನು ಸ್ವೀಕರಿಸಿ, ತನ್ನ ಮಾತೃಕುಲದ ಚೀನೀ ಜನರನ್ನು ಕಡೆಗಣ್ಣಿನಿಂದ ನೋಡಿ ತಿರಸ್ಕರಿಸಹತ್ತಿದನು. ಅವನು ಚೀನೀಯರ ಧರ್ಮ, ನಡವಳಿ, ಸಂಸ್ಕಾರ ಇವುಗಳನ್ನೆಲ್ಲ ಅಲ್ಲಗಳೆಯುತ್ತ, ಅವರನ್ನು ಕಂಡು ನಗಲಾರಂಭಿಸಿದನು. ಆತನ ಚಿಕ್ಕಮ್ಮನು ಇದುವರೆಗೂ ಅವನಿಗೆ ಆತನ ತಂದೆಯ ವಿಷಯದ ಪರಿಚಯ ಮಾಡಿ ಕೊಟ್ಟಿರಲಿಲ್ಲ. ಏಕೆಂದರೆ, ಆ ಸಿತಾಬಳು ಡೆಭಿನಟನ ಅಪ್ಪಣೆಯನ್ನುಲ್ಲಂಘಿಸಲಿಕ್ಕೆ ಮನಸ್ಸು ಮಾಡಲಿಲ್ಲ.

ಚಿಖೂಸಾ ಎಂಬ ಹೆಸರಿನ ಆ ಧನವಂತನಿಗೆ ಒಬ್ಬ ಲಾವಣ್ಯವತಿಯಾದ ಕನ್ನಿಕೆಯಿದ್ದಳು. ಅವಳ ಹೆಸರು ಲಾಯುಲಿ ಎಂದು. ಫ್ಯಾನ ಟುಂಡನು ತನ್ನ ತಂದೆಯ ಕಾರಖಾನೆಯಲ್ಲಿ ಅಲ್ಪ ದಿನಗಳಲ್ಲೇ ವಿಶೇಷ ಬಡತಿಯನ್ನು ಹೊಂದಿದ್ದನ್ನು ಕಂಡು, ಲಾಯುಲಿಯು ಆತನ ವಿಷಯವಾಗಿ ಆದರವುಳ್ಳವಳಾದಳು. ಅಲ್ಪಾವಕಾಶದಲ್ಲಿಯೇ ಫ್ಯಾನ ಟುಂಡನು ಅವಳನ್ನು ಲಗ್ನವಾಗಬೇಕೆಂಬ ಹುಚ್ಚು ವಿಚಾರಕ್ಕೊಳಗಾದನು. ಎಷ್ಟೋ ದಿನಗಳ ವರೆಗೆ ಆತನು ತನ್ನ ಆ ಸಂಕಲ್ಪವನ್ನು ಯಾರ ಮುಂದೂ ಹೇಳಿರಲಿಲ್ಲ. ಕಟ್ಟಕಡೆಗೆ ಆತನು ಮತ್ತೆ ಹಾಗೆ ಸುಮ್ಮನಿರಲಾರದೆ, ಒಂದು ದಿನ ಮಧ್ಯಾಹ್ನ ಕಾಲಕ್ಕೆ ತನ್ನ ಮಾಲಕನಿಗೆ ಗೌಪ್ಯವಾಗಿ ಹೋಗಿ ಭೆಟ್ಟಿಯಾದನು. ಚಿಖೂಸನು ಆಗ ತನ್ನ ಖಾಸ ಆಫೀಸ ಕೋಣೆಯಲ್ಲಿ ಒಬ್ಬನೇ ಕುಳಿತು, ಏನನ್ನೋ ಬರೆಯುತ್ತಿದ್ದನು. ಆ ತರುಣ ಕೆಲಸಗಾರನು ಮುಂಚಿತವಾಗಿ ತಿಳಿಸದೆ ತನ್ನ ಖಾಸಗಿ ಕೋಣೆಯಲ್ಲಿ ಹೀಗೆ ಆಕಸ್ಮಿಕವಾಗಿ ಪ್ರವೇಶಿಸಿದ್ದನ್ನು ಕಂಡು ಆತನು ಬೆರಗಾದನು. ಆಗ ಚಿಖೂಸನು ಕೇಳುತ್ತಾನೆ:—

"ಏನಾದರೂ ಕೆಲಸವಿದೆಯೇನು? ಇಲ್ಲಿಗೇಕೆ ಬಂದೆ?"

ಫ್ಯಾನ ಟುಂಡನು ಆತನನ್ನು ನಮಸ್ಕರಿಸಿ:—ಮಹನೀಯರ ಬಳಿಯಲ್ಲೊಂದು ಮಹತ್ವದ ಸಂಗತಿಯನ್ನು ನಿವೇದಿಸುವದಕ್ಕೆಂದು ಬಂದಿರುತ್ತೇನೆ.

"ಅದೇನೆಂಬದನ್ನು ಬೇಗನೆ ಹೇಳು. ನಿನಗೆ ಹಣದ ಅವಶ್ಯಕತೆಯುಂಟಾಗಿದೆಯೇನು?"

"ಒಡೆಯರೇ, ಅದೇನಿಲ್ಲ; ಆದರೆ ನಾನೊಂದು ದುರಾಶೆಯನ್ನು ತಾಳಿ ತಮ್ಮ ಬಳಿಗೆ ಬಂದಿರುತ್ತೇನೆ. ನಾನು ತಮ್ಮ ಮಗಳಾದ ಲಾಯುಲಿಯನ್ನು ಹೆಚ್ಚಾಗಿ ಪ್ರೀತಿಸುತ್ತಿರುವೆನು. ತಾವು ದಯವಿಟ್ಟು ಅವಳನ್ನು ನನಗೆ ಕೊಟ್ಟು ಲಗ್ನ ಮಾಡಿದರೆ, ಅದರಿಂದ ಈ ತಮ್ಮ ಬಡ ನೌಕರನ ಪ್ರಾಣವುಳಿಸಿದಂತಾಗುತ್ತದೆ."

ಆ ತನ್ನ ಆಳಿನ ಇಂಗಿತವನ್ನು ತಿಳಿದ ಚಿಖೂಸನು ಸಿಟ್ಟಿನಿಂದ ಕೆಂಪಡರಿದ ಕಣ್ಣುಗಳಿಂದ ಫ್ಯಾನ ಟುಂಡನನ್ನು ನೋಡುತ್ತ, ಕರ್ಕಶ ಧನಿಯಿಂದ:-ಏನಂದಿ?

ಮೂರ್ಖಾ! ಬಾಯ್ಬಡಕಾ! ನೀಚ ಹಂದಿಯೇ! ನೀನು ನನ್ನ ಮಗಳನ್ನು ಪ್ರೀತಿಸುತ್ತಿರುವೆಯಾ? ಸ್ವರ್ಗದೊಳಗಿನ ಅಮೃತವನ್ನು ನರಕದೊಳಗಿನ ಕುರುಡ ನಾಯಿಯು ಬಯಸಿದಂತೆಯೇ ಸರಿ! ನನ್ನ ಎದುರಿಗೆ ಬಂದು ಈ ಮಹತ್ವದ ಸಂಗತಿಯನ್ನು ತಿಳಿಸುವಷ್ಟು ಧೈರ್ಯವು ನಿನಗೆ ಬಂದಿತಲ್ಲವೆ? ನಿನಗೆ ಹುಚ್ಚು-ಗಿಚ್ಚು ಹಿಡಿದಿಲ್ಲವಷ್ಟೇ? ಎಂದು ಕೇಳಿದನು.

ಫ್ಯಾನ ಟುಂಡನು ಆತನ ಈ ತಿರಸ್ಕಾರಕ್ಕೆ ಬೆದರದೆ:-ನನಗೆ ಹೀಗೆ ಆಕಸ್ಮಿಕವಾಗಿ ಹುಚ್ಚು ಹಿಡಿಯಲಿಕ್ಕೆ ಕಾರಣವೇನು? ಅಂಥ ಹುಚ್ಚುಚ್ಚಾರದ ಮಾತುಗಳಾದರೂ ನನ್ನ ಬಾಯಿಂದೇನು ಹೊರಟಿವೆ? ತಾವು ದಯವಿಟ್ಟು ಸಮ್ಮತಿಸಿದರೆ ಮಾತ್ರ ನಾನು ತಮ್ಮ ಮಗಳಾದ ಲಾಯುಲಿಯೊಡನೆ ವಿವಾಹವಾಗಿ ಸುಖಿಯಾಗಬೇಕೆಂದೆನ್ನುತ್ತೇನೆ. ನಾನು ಅವಳನ್ನು ಮಿಗಿಲಾಗಿ ಪ್ರೀತಿಸುತ್ತಿದ್ದೇನೆ."

ಕೂಡಲೆ ಚಿಖೂನನು ಗಟ್ಟಿಯಾಗಿ ಒದರಿ:—"ನನ್ನ ಮಗಳೊಡನೆ ವಿವಾಹವಾಗಬೇಕೆಂದಿಚ್ಛಿಸುತ್ತಿರುವೆಯೆಂದ ಮೇಲೆ ನಿನಗೆ ಹುಚ್ಚು ಹಿಡಿದಿಲ್ಲೆಂದು ಹೇಗೆ ಅನ್ನಬೇಕು? ಎಲೈ ಗರ್ದಭರಾಜನೇ, ನಿನಗಿಷ್ಟು ಸಾಹಸವುಂಟಾಯಿತಲ್ಲವೇ? ನಿರ್ಲಜ್ಜನಾದ ರಾಕ್ಷಸನು ನೀನು! ಹಿಂದುಮುಂದಿನ ವಿಚಾರವಿಲ್ಲದ ದೆವ್ವನು ನೀನು! ನೀನೊಬ್ಬ ದರಿದ್ರ ಕೂಲಿಯಾಳು. ಮೆಹೆರಬಾನಿಗಿಯಿಂದ ನಾನು ನಿನ್ನನ್ನು ಉನ್ನತ ಪದವಿಗೇರಿಸಿರುವೆನು. ನೀನು ನಮ್ಮಗಳ ಕಾಲಜೋಡುಗಳನ್ನೆತ್ತಲಿಕ್ಕೂ ಅಯೋಗ್ಯನಾದ ಸಣ್ಣ ಜನಾಂಗದವನು! ನೀಚ ಕುಲೋತ್ಪನ್ನನು! ಮಹಾ ನೀಚನು! ಊಡ ಮನೆಯ ಗಳ ಎಣಿಸುವವನು! ಇಂಥ ನೀನು ನನ್ನ ಮಗಳೊಡನೆ ವಿವಾಹವಾಗಲಿಕ್ಕೆ ಬಯಸುತ್ತಿರುವೆಯಾ?"

"ಮಹಾನುಭಾವರೇ! ನಾನು ಇದರಲ್ಲೇನು ಅನ್ಯಾಯ ಮಾಡಿರುವೆನು? ನಾನು ಕರ್ತವ್ಯನಿಷ್ಠನು; ಸಚ್ಚರಿತ್ರನು. ಪ್ರಸ್ತುತ ಕಾಲದಲ್ಲಿ ಬಡವನಿದ್ದ ಮಾತ್ರಕ್ಕೆ ಅಲ್ಪಾವಧಿಯಲ್ಲೇ ಸ್ವಕರ್ತವ್ಯದಿಂದ ನಿಮ್ಮಂತೆ ದೊಡ್ಡ ಧನಿಕನಾಗಬಲ್ಲೆನು"

"ಕತ್ತೇ, ಮುಚ್ಚು ಬಾಯಿ! ನಾನು ಇನ್ನೂ ನಿನ್ನನ್ನು ಬಡಿದು ಹೊರಗಟ್ಟಿಸಿಲ್ಲವೆಂಬದೇ ನಿನ್ನ ಭಾಗ್ಯವು! ಒಂದಾನೊಂದು ಕಾಲದಲ್ಲಿ ನೀನು ದುಡ್ಡಿಸ್ತನಾದರೂ ಆಗಬಹುದು; ಆದರೆ ನಿನ್ನ ಕುಲಕ್ಕೆ ಹತ್ತಿದ ಕಲಂಕವು ಹೇಗೆ ತೊಳೆದು ಹೋದೀತು? ನೀನು ಫಿರಂಗಿಯು! ಮಿಶ್ರರಕ್ತದಿಂದ ಹುಟ್ಟಿದ ಚಟೀಗಾರನಿಗೆ ನಾನು ನನ್ನ ಮಗಳನ್ನು ಧಾರೆಯೆರೆದು ಕೊಡುವೆನೇ?"

"ನಾನು ಮಿಶ್ರರಕ್ತದಿಂದ ಜನಿಸಿದ ಫಿರಂಗಿಯೇ? ತಾವು ಅನ್ನುವದಾದರೂ ಏನು? ನಾನು ತಮ್ಮ ನೌಕರನಾದ ಮಾತ್ರಕ್ಕೆ ತಾವು ನನಗೆ ಮನಬಂದಂತೆ

ಮಾತಾಡುವಿರೇನು?"

"ಮೂರ್ಖಾ, ನೀನು ಯಾರ ಮಗನೆಂಬದು ಕೂಡ ನಿನಗೆ ಗೊತ್ತಿಲ್ಲ. ನಿನಗೆ ನಿನ್ನ ತಂದೆಯ ಸಂಗತಿಯು ತಿಳಿದಿದ್ದರೆ, ನೀನು ನನ್ನೊಡನೆ ಹೀಗೆ ಮನಸ ಬಂದಂತೆ ಮಾತನಾಡುವ ಸಾಹಸಪಡುತ್ತಿರಲಿಲ್ಲ."

"ಧಣಿಯರೇ, ನನ್ನೀ ವರ್ತನದಲ್ಲಿ ನನ್ನ ವಂಶದೋಷವು ಎಷ್ಟೂ ಇಲ್ಲ. ನನ್ನ ತಾಯಿಯು ದೊಡ್ಡ ಮನೆತನದಲ್ಲಿಯೇ ಹುಟ್ಟಿದ್ದಳು. ನನ್ನ ತಂದೆಯಾದರೂ ಧನವಂತ ವ್ಯಾಪಾರಸ್ಥನಾಗಿದ್ದನು. ಜೂಜಿನಾಟದಲ್ಲಿ ಎಲ್ಲವನ್ನೂ ಸೋತು, ಕಡೆಗೆ ಭಗ್ನಹೃದಯನಾಗಿ ಸತ್ತನು. ಅದಕ್ಕಾಗಿಯೇ ನಮಗೆ ಬಡತನವು ಪ್ರಾಪ್ತವಾಯಿತು."

"ಈ ಮಾತು ನಿಜವಾದದ್ದಲ್ಲ. ನಿನಗೆ ನಿನ್ನ ವಂಶದ ಪರಿಚಯವು ಚೆನ್ನಾಗಿಲ್ಲ. ನಿನ್ನ ತಂದೆಯು ಒಬ್ಬ ವಿದೇಶೀಯ ಪಿಶಾಚಿಯು! ನಮ್ಮ ಚೀನಿಗರ ಅತ್ಯಂತ ತಿರಸ್ಕಾರಕ್ಕೆ ಪಾತ್ರನಾದ ಇಂಗ್ಲಿಷ ಮನುಷ್ಯನು."

ಫ್ಯಾನ ಟುಂಡನು ಒಳ್ಳೇ ಧೈರ್ಯದಿಂದ: — "ಒಡೆಯರೇ, ತಾವು ಬಹು ಸುಳ್ಳುಗಾರರೆಂತೆ ತೋರುತ್ತದೆ. ತಮ್ಮ ಈ ನುಡಿಯು ಒಂದು ವೇಳೆ ಸತ್ಯವಾದರೂ ಅದರಲ್ಲಿ ದೋಷವೇನು? ಚೀನಿಗರಿಗಿಂತ ಇಂಗ್ಲಿಷರು ಯಾವ ಬಾಬಿನಲ್ಲಿ ಹೀನರಾಗಿರುತ್ತಾರೆ?"

ಚಿಖೂನನು ಫ್ಯಾನ ಟುಂಡನ ಆ ಸರಳ ಪ್ರಶ್ನೆಯನ್ನು ಕೇಳಿ ಸಿಟ್ಟಿನಿಂದ ಉರಿಯಹತ್ತಿದನು; ಹಾಗು ವ್ಯಂಗ್ಯ ದನಿಯಿಂದ: — ಎಲೈ ಹಾದರಕ್ಕೆ ಹುಟ್ಟಿದವನೇ! ನಾನು ಸುಳ್ಳಾಡುವೆನೇನು? ಸಣ್ಣ ಬಾಯಿಗೆ ದೊಡ್ಡ ತುತ್ತೇಕೆ? ನನ್ನೆದುರಿನಿಂದ ಈಗಿಂದೀಗಲೆ ಸುಮ್ಮನೆ ಹೊರಟು ಹೋಗು. ಹೆಚ್ಚು ಬೊಗಳಬೇಡ. ಬದ್‌ಮಾಷ್, ಸುಮ್ಮನೆ ಹೋಗದಿದ್ದರೆ, ನಿನ್ನ ಮುಸುಡೆಗೆ ಕಾಲಜೋಡಿನಿಂದ ಹೊಡಿಸಿ ಹೊರಗೆ ದೂಡಿಸಬೇಕಾದೀತು. ಇಂದಿನಿಂದ ನಾನು ನಿನ್ನನ್ನು ಬರತರ್ಫ ಮಾಡಿರುತ್ತೇನೆ. ಇನ್ನು ನಮ್ಮ ಕಾರಖಾನೆಗೆ ನಿನ್ನ ಅವಶ್ಯಕತೆಯಿಲ್ಲ. ಮತ್ತೆ ಇತ್ತ ಎಂದಾದರೂ ಬಂದೆಯಾದರೆ, ನಿನ್ನ ಅವಸ್ಥೆಯು ನಿನಗೆ............

"ನಿನ್ನ ನೌಕರಿಗೆ ಬೆಂಕೀ ಹಚ್ಚಲಿ. ಅದನ್ನು ನಾನು ಇಗೋ, ಈ ಎಡಗಾಲಿನಿಂದ ಒದೆದು ಹೋಗುವೆನು" ಎಂದು ಒಳ್ಳೇ ಆವೇಶಯುಕ್ತವಾಗಿ ನುಡಿದವನೇ, ಫ್ಯಾನ ಟುಂಡನು ಚಿಖೂನನ ಬಳಿಯಿಂದ ಭರದಿಂದ ಹೊರಟು ಹೋದನು. ಅವನು ನೆಟ್ಟಗೆ ಮನೆಗೆ ಹೋದವನೇ ತನ್ನ ಚಿಕ್ಕಮ್ಮನ ಎದುರಿಗೆ ಹೋಗಿ ನಿಂತು, ಕ್ರುದ್ಧ ಸ್ವರದಿಂದ: — ಚಿಕ್ಕಮ್ಮಾ, ನಾನು ನಮ್ಮ ಕಾರಖಾನೆಯ ಯಜಮಾನನ ಮಗಳನ್ನು ಲಗ್ನವಾಗಲಿಚ್ಛಿಸಿ, ಇಂದು ನಾನು ಆತನ

ಸಮ್ಮತಿ ಪಡೆಯುವದಕ್ಕೆಂದು ಅವನೆಡೆಗೆ ಹೋಗಿರಲು, ಅವನು ನನ್ನನ್ನು ಫಿರಂಗಿಗೆ ಹುಟ್ಟಿದ ಹಾದರಗಿತ್ತಿಯ ಮಗನೇ! ಎಂದು ಹಿಯ್ಯಾಳಿಸಿದನು. ಸಿಟ್ಟುತಡೆಯು ಲಾರದೆ, ನಾನು ಅವನಿಗೆ ಸುಳ್ಳಾಡುವೆಯೆಂದೆನಲು, ಅವನು ನನ್ನನ್ನು ಕಾರಖಾನೆ ಯಿಂದ ಬರತರ್ಫ ಮಾಡಿಬಿಟ್ಟನು. ಚಿಕ್ಕಮ್ಮಾ, ನನ್ನ ತಂದೆಯು ಇಂಗ್ಲಿ ಷನೇ ಏನು? ಇದು ನಿಜವೋ? ಎಂದು ಕೇಳಿದನು.

ಅದಕ್ಕೆ ಸಿತಾಬಳು ಹೇಳುತ್ತಾಳೆ:—"ತಮ್ಮಾ, ಆ ಮಾತು ನಿಜವು. ನಿಮ್ಮ ಆ ಕಾರಖಾನದಾರನಾದ ಚಿಖೂನನು ಬಹು ದೊಡ್ಡ ಮನುಷ್ಯನು; ಉಚ್ಚಮನೆ ತನಸ್ತನು. ನೀನು ಆತನ ಮಗಳನ್ನು ವಿವಾಹವಾಗ ಬಯಸಿದುದು ಬಹು ಅನ್ಯಾಯವು! ನಿನ್ನ ಆ ಸಲಿಗೆಯ ಮಾತಿನಿಂದ ಆತನು ಸಿಟ್ಟಿಗೇಳುವದು ಸ್ವಾಭಾ ವಿಕವೇ ಸರಿ. ನೀನು ಸುದೈವಿಯಾದ್ದರಿಂದಲೇ ಆತನ ಪೆಟ್ಟುಗಳಿಗೆ ಗುರಿಯಾಗದೆ ಹಾಗೆಯೇ ಬಂದಿರುತ್ತೀಯೆ. ಆತನಂದದ್ದು ಸುಳ್ಳಲ್ಲ; ನಿನ್ನ ತಂದೆಯು ನಿಜ ವಾಗಿಯೂ ಇಂಗ್ಲಿಷನೇ ಅಹುದು"

"ಹಾಗಾದರೆ ಚಿಕ್ಕಮ್ಮಾ, ಈ ಸಂಗತಿಯನ್ನು ನೀನು ಇದುವರೆಗೂ ನನಗೇಕೆ ತಿಳಿಸಲಿಲ್ಲ? ಇಂಗ್ಲಿಷನು ನನ್ನ ತಂದೆಯಾದ ಬಗೆ ಹೇಗೆ?"

ಫ್ರಾನ ಟುಂಡನ ಆ ಪ್ರಶ್ನೆಯನ್ನು ಕೇಳಿ ಸಿತಾಬಳು ಅನ್ನುತ್ತಾಳೆ:— "ನಿನ್ನ ತಂದೆಯ ಕಟ್ಟಪ್ಪಣೆಯ ಸಲುವಾಗಿಯೇ ನಾನು ನಿನ್ನ ಜನ್ಮ ವೃತ್ತಾಂತ ವನ್ನು ಇದುವರೆಗೆ ನಿನಗೆ ತಿಳಿಸಿರಲಿಲ್ಲವು. ನಿಮ್ಮ ತಂದೆಯು ವ್ಯಾಪಾರ ಮಾಡುವದಕ್ಕೆಂದು ಈ ಕ್ಯಾಂಟನ್ನ ಪಟ್ಟಣಕ್ಕೆ ಬಂದಿದ್ದನು. ನಿನ್ನ ತಾಯಿಯು ನಾಟಕಗಳಲ್ಲಿ ಪಾತ್ರ ವಹಿಸುವವಳಾಗಿದ್ದಳು. ನಿನ್ನ ತಾಯಿಯ ರೂಪ ಲಾ- ವಣ್ಯಗಳಿಗೆ ಮನಸೋತ ನಿನ್ನ ಇಂಗ್ಲಿಷ ತಂದೆಯು ಅವಳನ್ನು ವಿವಾಹವಾಗ ಬಯಸಿದನು. ನಿನ್ನ ತಾಯಿಯು ಅವನ ಮಾತಿಗೆ ಒಪ್ಪಲು, ಅವರೀರ್ವರೂ ವಿವಾಹರಜ್ಜುವಿನಿಂದ ಬಂಧಿಸಲ್ಪಟ್ಟರು. ನೀನು ಎರಡೇ ತಿಂಗಳು ವಯಸ್ಸಿ ನವನಿದ್ದಾಗ ನಿನ್ನ ತಾಯಿಯು ತೀರಿಕೊಂಡಳು. ನಿನ್ನ ಲಾಲನ ಪಾಲನಗಳ ಭಾರವನ್ನು ನನ್ನ ಮೇಲೆ ಹೊರಿಸಿ, ನಿನ್ನ ತಂದೆಯು ಸ್ವದೇಶಕ್ಕೆ ಹೊರಟು ಹೋದನು. ಆತನು ದೇಶಕ್ಕೆ ಹೊರಡುವಾಗ! ನಿನ್ನ ಹಾಗು ನನ್ನ ಪ್ರತಿಪಾ ಲನಕ್ಕಾಗಿ ಸಾಕಷ್ಟು ಹಣವನ್ನು ಬ್ಯಾಂಕಿನಲ್ಲಿ ಠೇವಾಗಿಟ್ಟು ಹೋದನು ಆ ಠೇವಿನ ಬಡ್ಡಿಯಿಂದ ನಮ್ಮಗಳ ಊಟ-ಉಡಿಗೆಗಳ ವೆಚ್ಚವು ನಿರಾತಂಕವಾಗಿ ಸಾಗಿದ್ದಿತು; ಆದರೆ ಆ ಬ್ಯಾಂಕು ಆಕಸ್ಮಿಕವಾಗಿ ದಿವಾಳಿ ಹೊಡೆಯಲು, ನಮ್ಮ ಗಳ ಹಣವು ಕಟ್ಟಾಯಿತು. ದುಡ್ಡಿನ ಅಭಾವದಿಂದ ನಾನು ಯಾವ ಯಾವ ಕಷ್ಟಗಳನ್ನು ಸಹಿಸಿ ನಿನ್ನನ್ನು ಇಷ್ಟು ದೊಡ್ಡವನನ್ನಾಗ ಮಾಡಿದೆನೆಂಬದು

ನನ್ನ ಆತ್ಮಕ್ಕೊಂದು ಗೊತ್ತು; ಆ ಸರ್ವಾಂತರ್ಯಾಮಿಯಾದ ಜಗದೀಶನಿಗೊಂದು ಗೊತ್ತು!''

"ಬ್ಯಾಂಕು ದಿವಾಳಿಗೆಟ್ಟ ಮೇಲೆ ನೀನು ನನ್ನ ತಂದೆಗೆ ತಿಳಿಸಿ ಆತನ ಸಹಾಯವನ್ನೇಕೆ ಪಡೆಯಲಿಲ್ಲ?''

"ಅವನು ನನಗೆ ತನ್ನ ವಿಳಾಸವನ್ನು ತಿಳಿಸಿ ಹೋಗಿರಲಿಲ್ಲ. ಅದರಿಂದ ನಾನು ಎಲ್ಲಿಗೆಂದು ಪತ್ರ ಬರೆಯುವದು? ಅವನು ಬದುಕಿರುವನೋ-ಸತ್ತಿರುವನೋ ಎಂಬದಾದರೂ ತಿಳಿಯುವ ಬಗೆ ಹೇಗೆ? ಇಲ್ಲಿಂದ ಹೊರಟು ಹೋದ ಬಳಿಕ ಅವನು ಯಾವ ಬಗೆಯಿಂದಾದರೂ ನಿನ್ನ ಪರಾಮರ್ಶವನ್ನು ತಕ್ಕೊಂಡಿರುವನೇನು? ಇಲ್ಲ, ಎಂದೂ ಇಲ್ಲ. ಇಷ್ಟೇ ಅಲ್ಲ, ಅವನು ಇಲ್ಲಿಂದ ಹೊರಡುವಾಗ ನಿನ್ನನ್ನು ತನ್ನ ಮಗನೆಂದು ಹೇಳಿಕೊಳ್ಳುವದಕ್ಕೆ ಕೂಡ ಅವನಿಗೆ ಬಹು ನಾಚಿಕೆಯೆಂಬಂತೆ ತೋರುತ್ತಿತ್ತು. ಆತನು ನಿನ್ನ ತಾಯಿಯನ್ನೇನೋ ಹೆಚ್ಚಾಗಿ ಪ್ರೀತಿಸುತ್ತಿದ್ದುದು ನಿಜವು; ಆದರೆ ಆಕೆಯ ನಿಧನದ ನಂತರ ನಿನ್ನನ್ನು ತ್ಯಜಿಸುವದೇ ತನ್ನ ಕರ್ತವ್ಯವೆಂದು ಅವನು ನಿರ್ಧರಿಸಿದನು; ಆದರೂ ಆತನು ನಿನ್ನನ್ನು ಕೂಳು-ಕೂಳು ನೀರು-ನೀರು ಎನ್ನುವಂತಿರಿಸದೆ, ನಿನ್ನ ಪಾಲನ-ಪೋಷಣೆಗಾಗಿ ಸಾಕಷ್ಟು ನಿಧಿಯನ್ನು ಸಂಗ್ರಹಿಸಿಟ್ಟು ಹೋಗಿದ್ದನು.''

ಅದನ್ನು ಕೇಳಿ ಫ್ರ್ಯಾನ ಟುಂಡನು ತಲೆಬಗ್ಗಿಸಿಕೊಂಡು ಕ್ಷಣಕಾಲದವರೆಗೆ ಯೋಚಿಸಿದನು. ನಂತರ ಅವನು:— ನನ್ನ ತಂದೆಯ ಹೆಸರೇನೆಂಬದನ್ನಾದರೂ ಹೇಳಬಾರದೇ?

ಸಿತಾಬ:— ಅವನು ತನ್ನ ಹೆಸರು ಜನ ಮೆರಿಡಿಥನೆಂದು ನಮ್ಮೊದುರಿಗೆ ತಿಳಿಸಿದ್ದನು; ಆದರೆ ಅದು ಆತನ ನಿಜವಾದ ಹೆಸರು ಅಹುದೋ ಅಲ್ಲವೋ ತಿಳಿಯದು! ನನಗಂತೂ ಅದು ಆತನ ನಿಜವಾದ ಹೆಸರಲ್ಲೆಂದೇ ಅನಿಸುತ್ತಿದೆ.

ಫ್ರ್ಯಾನ: ನನ್ನ ತಂದೆಯು ಇಂಗ್ಲಿಷನು ಎಂಬದನ್ನು ನಾನು ಸ್ವತಃ ತಿಳಿಯುವ ಮೊದಲೇ ಆ ಚಿಖೂನನು ಅದನ್ನು ತಿಳಿದಿರುವದು ಬಹು ಆಶ್ಚರ್ಯದ ಮಾತಾಗಿರುತ್ತದೆ. ಚಿಕ್ಕಮ್ಮಾ, ಅದು ಅವನಿಗೆ ಹೇಗೆ ಗೊತ್ತಾಗಿದ್ದೀತು?

ಸಿತಾಬ:—ಯಾರ ಬಾಯಿಂದಲಾದರೂ ಕೇಳಿಕೊಂಡಿರಬಹುದು. ನಿನ್ನ ತಂದೆಯಾದ ಆ ಇಂಗ್ಲಿಷ ಗೃಹಸ್ಥನು ನಮ್ಮಕ್ಕನನ್ನು ವಿವಾಹವಾದ ಸಂಗತಿಯನ್ನು ಅನೇಕ ಜನರು ಬಲ್ಲರು; ಆದರೂ ನಾನಾಗಿ ಅದನ್ನು ಇದುವರೆಗೆ ಯಾರ ಮುಂದೆಯೂ ಪ್ರಕಟಗೊಳಿಸಿರಲಿಲ್ಲ.

ಫ್ರ್ಯಾನ: - ನಾನು ಇಂಗ್ಲಿಷನ ಮಗನಾದದ್ದು ನನ್ನ ಅಪರಾಧವಂತೂ ಅಲ್ಲ; ಹೀಗಿದ್ದು ಆ ಚಿಖೂನನು ನನ್ನನ್ನು ಇಷ್ಟು ತಿರಸ್ಕರಿಸಿದುದೇಕೆ? ನನ್ನ

ವಿಷಯವಾಗಿ ಆತನು ಇಷ್ಟು ಕೋಪಗೊಂಡ ಕಾರಣವೇನು?

ಸಿತಾಬಿ:—ತಮ್ಮಾ, ಅಕಾರಣವೆಂದು ಹೇಗೆ ಹೇಳಲಾದೀತು? ಅವನು ಏಕೆ ಸಿಟ್ಟಾಗಬಾರದು? ಅವನು ನಿನ್ನನ್ನು ತಿರಸ್ಕರಿಸಬಾರದೇಕೆ? ನೀನು ಇತ್ತ ಚೀನಿಗರ ಜಾತಿಯವನೂ ಅಲ್ಲ; ಅತ್ತ ಇಂಗ್ಲಿಷ ಕುಲದವನೂ ಅಲ್ಲ. ನಮ್ಮಲ್ಲಿ ಯವರೆಲ್ಲರೂ ಇಂಗ್ಲಿಷರನ್ನೆಲ್ಲ ವಿದೇಶೀಯ ಪಿಶಾಚಿಗಳೆಂದು ಅಂತರಂಗದಿಂದ ತಿರ ಸ್ಕರಿಸುತ್ತಿರಲು, ಅಂಥ ವಿದೇಶೀಯ ಇಂಗ್ಲಿಷನೇ ನಿನ್ನ ತಂದೆಯೆಂದ ಬಳಿಕ ಪ್ರತಿ ಯೊಬ್ಬ ಚೀನಿಗನೂ ನಿನ್ನನ್ನು ತಿರಸ್ಕರಿಸತಕ್ಕವನೇ. ಅಲ್ಲದೆ ಚೀನೀಯ ಮಹಿಳೆಯ ಗರ್ಭದಲ್ಲಿ ನಿನ್ನ ಜನ್ಮವಾದ್ದರಿಂದ ನೀನು ಇಂಗ್ಲಿಷರ ತಿರಸ್ಕಾರಕ್ಕೂ ಪಾತ್ರನೇ ಆಗಿರುತ್ತೀ. ನಿನ್ನ ತಂದೆಯು ನಮ್ಮಕ್ಕನನ್ನು ಲಗ್ನವಾಗಿ ಬಹು ದೊಡ್ಡ ತಪ್ಪು ಮಾಡಿರುತ್ತಾನೆ. ಆತನ ಆ ಭಯಂಕರ ತಪ್ಪಿನ ಫಲವನ್ನು ನೀನು ಸಾಯುವ ವರೆಗೂ ಭೋಗಿಸಬೇಕಾಗಿದೆ.

ಫ್ಯಾನ:—"ಎಳ್ಳಷ್ಟೂ ಅಪರಾಧ ಮಾಡದ ನಾನು ಹೀಗೆ ಅಖಂಡವಾಗಿ ಶಿಕ್ಷೆಗೆ ಗುರಿಯಾಗಬೇಕೇಕೆ? ಇದು ದೇವರಿಗೆ ಸಮ್ಮತವಾದ ಶಾಸನವಲ್ಲ. ನಾನು ಅಮೇರಿಕನ್ ಮಿಶನ್ನಿನ ಅಧ್ಯಕ್ಷನಾದ ಸಾಮ್ಯುಅಲ್ ರಾಬರ್ಟಸನ್ನನಿಗೆ ಇದ ನ್ನೆಲ್ಲ ಬಿಚ್ಚಿ ಹೇಳುತ್ತೇನೆ. ನನಗಿನ್ನು ಚೀನಿಗರ ಕನ್ಯೆಯನ್ನು ವರಿಸುವದು ಅಶಕ್ಯವಾದದ್ದಾದರೆ, ನಾನು ಇಂಗ್ಲಿಷ ಕನ್ಯೆಯ ಪಾಣಿಗ್ರಹಣ ಮಾಡುವೆನು. ನನ್ನ ತಂದೆಯು ಏನು ಮಾಡಿರುವನೋ ನಾನು ಅದಕ್ಕೆ ತೀರ ವಿರುದ್ಧವಾಗಿ ವರ್ತಿಸುವೆನು."

ಫ್ಯಾನ ಟುಂಡನ ಆ ಮಾತಿಗೆ ಸಿತಾಬಿಳು ಗಹಗಹಿಸಿ ನಕ್ಕು: ನೀನು ನನ್ನ ಅಳಿಯನಾಗಿದ್ದು, ನೀನು ಇಂಗ್ಲಿಷ ಕನ್ಯೆಯನ್ನು ವರಿಸಬೇಕೇ! ಇಂಗ್ಲಿಷ ಜನರ ಕನ್ಯೆಯರು ಅಷ್ಟು ಅಗ್ಗವಾಗಿರುವರೇನು? ನೀನು ಆ ಪಾದರಿಯ ಎದುರಿಗೆ ನಿನ್ನೀ ಮನೋಬಯಕೆಯನ್ನು ತಿಳಿಸಿದರೆ, ಅವನು ನಿನಗೆ ಹುಚ್ಚು ಹಿಡಿದಿದೆಯೆಂದೇ ಅನ್ನಬಹುದು. ಆ ಇಂಗ್ಲಿಷ ಜನರ ಔದಾರ್ಯ, ಸಮಾನ ಭಾವ ಮುಂತಾದ ವ್ರುಗಳೆಲ್ಲ ಕೇವಲ ಬಾಯಿಮಾತು! ನೀನು ಸತ್ತರೆ, ನಿನ್ನ ಶವವನ್ನು ಅವರು ತಮ್ಮ ಕಬರಸ್ಥಳದಲ್ಲಿ ಕೂಡ ಹೂಳಗೊಡಲಾರರು! ಹೀಗಿರಲು, ಅವರು ತಮ್ಮಗಳ ಕನ್ಯೆಯನ್ನು ನಿನಗೆ ಕೊಟ್ಟು ಲಗ್ನ ಮಾಡುವರೇ? ಇದು ತೀರ ಅಸಂಭವದ ಸಂಗತಿಯಾಗಿರುತ್ತದೆ.

ಅದನ್ನು ಕೇಳಿ ಫ್ಯಾನ ಟುಂಡನು ಸಿಟ್ಟು ಬೆಂಕಿಯಾಗಿ:—ಅಸಂಭವವೋ-ಸಂಭವವೋ ಎಂಬದನ್ನು ತಿಳಿಯಲೇ ಬೇಕಾಗಿದೆ. ಇಂಗ್ಲಿಷ ಜಾತಿಯು ಈ ಹೇಯ ಚೀನೀಯ ಜನಾಂಗಕ್ಕಿಂತ ಸಾವಿರಪಟ್ಟು ಶ್ರೇಷ್ಠವಾಗಿದೆ. ಇನ್ನು

ನಾನು ಅವರ ಸಮೂಹದಲ್ಲಿಯೇ ಸೇರಿಕೊಳ್ಳುತ್ತೇನೆ. ನನ್ನ ತಂದೆಯು ಇಂಗ್ಲಿಷ ನೆಂಬದು ನನಗಂತೂ ಅಗೌರವಹ ಅಥವಾ ನಾಚಿಕೆಗೇಡಿನ ವಿಷಯವಾಗಿಲ್ಲ. ಇದು ನನ್ನ ಸುದೈವವೆಂದೇ ನನಗನಿಸುತ್ತಿದೆ. ಯಾವ ಇಂಗ್ಲಿಷ ತರುಣಿಯೂ ನನ್ನನ್ನು ವರಿಸುವದು ಅಪಮಾನಕರವೆಂದು ಮನಸ್ಸಿನಲ್ಲಿ ಕೂಡ ತಿಳಿಯಲಾರಳು.

ಹೀಗೆಂದು ನುಡಿದು, ಆತನು ತನ್ನ ತಾಯ್ನಾಡಿನ ಜನರನ್ನು ಹೆಚ್ಚಾಗಿ ಹಳಿದು, ಪಿತೃಕುಲದ ಸಮಾಜದಲ್ಲಿ ಕೂಡಿರಬೇಕೆಂದು ಧರ್ಮಾತ್ಮನಾದ ಆ ಸಾಮ್ಯುಅಲ್ ರಾಬರ್ಟಸನ್ನನನ್ನು ಕಾಣಲಿಕ್ಕೆಂದು ಅಮೇರಿಕನ್ ಮಿಶನ್ನಿಗೆ ಹೋದನು. ಚೀನೀಯರು ವರ್ಣಸಂಕರನೆಂದು ಯಾವನಿಗೆ ಹೆಸರಿಟ್ಟು ಆಡಿಕೊಳ್ಳುವರೋ, ಕೇವಲ ಡಂಭಾಚಾರಿಗಳಾದ ಇಂಗ್ಲಿಷರು ಅಂಥವನನ್ನು ತಮ್ಮ ಸ್ವಸಮಾಜದಲ್ಲಿ ಸಹಜವಾಗಿ ಸೇರಿಸಿಕೊಂಡಾರೆಂದು ಅವನು ಹೇಗೆ ನಂಬಿದನೋ ದೇವರಿಗೇ ಗೊತ್ತು! ಆದರೆ ಆ ಫ್ಯಾನ ಟುಂಡನಂತಹ ಮಹಾ ಮೂರ್ಖರ ಸಂಖ್ಯೆಯು ಈ ಭೂಮಂಡಲದಲ್ಲೇನೂ ಅಲ್ಪವಿಲ್ಲ. ಇರಲಿ.

---

[ ೪ ]

ಸ್ಯಾಮ್ಯುಅಲ್ ರಾಬರ್ಟಸನ್ನನು ಕ್ರಿಸ್ತಧರ್ಮಪ್ರಸಾರಕನಾದ ಒಬ್ಬ ಪಾದರಿಯಾಗಿದ್ದನು. ಅವನು ತೀರ ವೃದ್ಧನಾಗಿದ್ದನು. ಏಸು ಪ್ರಭುವಿನ ಸೇವೆಯಲ್ಲಿ ನಿರಂತರವಾಗಿ ದೇಹವನ್ನು ಸವಿಸಿದ್ದರಿಂದ, ಆತನ ಗಡ್ಡ-ಮೀಸೆಗಳು ಹಣ್ಣಾಗಿ ಬೆಳ್ಳಗೆ ನಾರಪಾಚಿಯಂತಾಗಿದ್ದವು. ಆತನು ಆ ಮಿಶನ್ನಿನ ಕಟ್ಟಡದೊಳಗಿನ ಒಂದು ನಿರ್ಜನವಾದ ಕೊಠಡಿಯಲ್ಲಿ ಕುಳಿತು ಯಾವದೊಂದು ಪತ್ರ ಬರೆಯ ತೊಡಗಿದ್ದನು. ತನ್ನ ಹಿಮ್ಮಗ್ಗಲಿನಲ್ಲಿ ಯಾರದೋ ಕಾಲಸಪ್ಪಳವಾದುದನ್ನು ಕೇಳಿ ಆತನು ಹಿಂದಿರುಗಿ ನೋಡಿದನು. ಚಿಂತಾಕಾತರನಾಗಿದ್ದ ಫ್ಯಾನ ಟುಂಡನು ಅಲ್ಲಿಗೆ ಬಂದು, ಅವನನ್ನು ಅಭಿವಂದಿಸಿ ನಿಂತುಕೊಂಡನು.

ಆಗಿನ ಆತನ ಮಲಿನ ಮುಖವನ್ನೂ ಚಿಂತಾಗ್ರಸ್ತತೆಯನ್ನೂ ಕಂಡು, ರಾಬರ್ಟಸನ್ನನು ಸಹಾನುಭೂತಿ ಪೂರ್ವಕವಾಗಿ ಅನ್ನುತ್ತಾನೆ:—ಟುಂಡಾ, ಏನಾಯಿತೆಂಬದನ್ನು ಹೇಳಬಾರದೇ? ನಿನಗೆ ಅದಾವ ಕೇಡುಂಟಾಗಿದೆ?

"ಮಹಾಶಯರೇ, ತಮ್ಮ ತರ್ಕವು ನಿಜವು ನನಗೆ ಪರಮ ದುಃಖ ವಾಗಿರುತ್ತದೆ; ಆದರೆ ಆ ದುಃಖವು ಶಾರೀರಿಕವಲ್ಲ; ಮಾನಸಿಕವು,-ಹೃದಯ ವಿದಾರಕವು. ನನ್ನ ಹೃದಯಕ್ಕೆ ಬಲವಾದ ಆಘಾತವಾಗಿದೆ" ಎಂದೆನ್ನುತ್ತ, ಟುಂಡನು ತನ್ನ ಎದೆ ಎದೆ ಬಡಕೊಳ್ಳಹತ್ತಿದನು.

"ಹೇಳಬಾರದೇ, ಅವಾವ ಪುಂಡನು ಏನು ಮಾಡಿದನೆಂಬದನ್ನು?"

ಟುಂಡ:—ನನ್ನ ಹೃದಯದಲ್ಲಿ ಚೂರಿ ಚುಚ್ಚಿದ್ದರೆ ಇದಕ್ಕೂ ಎಷ್ಟೋ ಪಾಲು ಸುಖವೆನಿಸುತ್ತಿತ್ತು. ವಿಷಾಕ್ತ ವಾಕ್ಯ ಬಾಣಗಳಿಂದ ಈ ನನ್ನ ಹೃದಯವು ಬಿಚ್ಚಿಹೋಗಿದೆ! ಮಹನೀಯರೇ, ಚಿಖೂನನೆಂಬ ಈ ದೇಶದ ಕಾರಖಾನದಾರನು ತಮಗಪರಿಚಿತನಲ್ಲ. ಆ ದುಷ್ಟನು ನನಗೆ ಒಹು ಬಿರಿ ನುಡಿಗಳನ್ನಾಡಿರುತ್ತಾನೆ. ನಾನು ಆತನಲ್ಲಿ ನೌಕರಿಗಿದ್ದೆನು. ಅವನು ಇಂದು ನನ್ನನ್ನು ಬರತರ್ಫ ಕೂಡ ಮಾಡಿರುತ್ತಾನೆ. ಅದಕ್ಕೆ ಕಾರಣವೇನಂದರೆ-ಕಾರಣ............ಎಂದಂದು ತಲೆ ತಗ್ಗಿಸಿಕೊಂಡು ನಿಂತುಬಿಟ್ಟನು.

ರಾಬರ್ಟಸನ್ನನು ವಿಸ್ಮಯ ಭರದಿಂದ:-ಕಾರಣವನ್ನು ತಿಳಿಸಲಿಕ್ಕೆ ಕುಂಠಿತನಾಗುವದೇಕೆ? ನೀನು ಆತನಲ್ಲಿ ಯಾವದೊಂದು ಅಧರ್ಮಕಾರ್ಯವೆಸಗಿದೆಯೇನು?

ಬಳಿಕ ಫ್ಯಾನ ಟುಂಡನು ಚಿಖೂನಾನಲ್ಲಿ ನಡೆದ ಸಂಗತಿಯನ್ನೆಲ್ಲ ಸಂಕ್ಷೇಪವಾಗಿ ಹೇಳಿದನು; ಅಲ್ಲದೆ ಅವನು ತನ್ನ ಚಿಕ್ಕಮ್ಮನೊಡನೆ ನಡೆದ ಸಂಭಾಷಣವನ್ನೂ ಆ ಧರ್ಮಾಧ್ಯಕ್ಷನಿಗೆ ನಿವೇದಿಸಿದನು; ಹಾಗು ತನ್ನ ತಂದೆಯು ನಿಜವಾಗಿಯೂ ಇಂಗ್ಲಿಷನಹುದೋ-ಅಲ್ಲವೋ ಎಂಬದನ್ನು ತಿಳಿಯಲಪೇಕ್ಷಿಸಿದನು.

ಅದನ್ನು ಕೇಳಿ ಸಾಮ್ಯುಅಲ್ ರಾಬರ್ಟಸನ್ನನು ಕೆಲಕ್ಷಣಗಳ ವರೆಗೆ ಸುಮ್ಮನಿದ್ದು, ತದನಂತರ:-ತಮ್ಮಾ, ಅಗು ಸತ್ಯವಾದದ್ದು; ಆದ್ದರಿಂದಲೇ ಚಿಖೂನನು ನಿನ್ನ ಮಾತು ನಡಿಸಲಿಲ್ಲ. ಅದಕ್ಕಾಗಿ ನೀನು ಅವನನ್ನು ದೋಷಿಯೆಂದೆಣಿಸಕೂಡದು; ಯಾಕಂದರೆ ಆತನು ಜಾತೀಯ ಚೀನಿಗನು. ಅವನ ರಕ್ತವು ಮಿಶ್ರವಾದದ್ದಲ್ಲ; ನೀನು ಮಾತ್ರ ಸರಿಬೆರಿಕೆಯ ಚೀನೀ ಮನುಷ್ಯನು; ಆದರೆ ಅವನು ಯಾವ ಬಗೆಯಾಗಿ ನಿನ್ನನ್ನು ಹಳಿದನೋ, ಹಾಗೆ ಅವನಂತಹ ಸದ್ಗೃಹಸ್ಥನ ಬಾಯಿಂದ ಹೊರಡತಕ್ಕದ್ದಿದ್ದಿಲ್ಲ. ಇನ್ನು ಆ ಬಗ್ಗೆ ಆಕ್ಷೇಪಿಸಿ ಪ್ರಯೋಜನವೇನು?

ಫ್ಯಾನ:—ಹಾಗಾದರೆ ಇಂಗ್ಲಿಷನೇ ನನ್ನ ತಂದೆಯಹುದಲ್ಲವೇ? ಇಂಗ್ಲಿಷ ಗೃಹಸ್ಥನು ಚೀನೀಯರಿಗಿಂತ ಶ್ರೇಷ್ಠನೆಂಬದು ಒಪ್ಪತಕ್ಕ ಮಾತಲ್ಲವೇ? ಹೀಗಿದ್ದು, ಆತನು ನನ್ನ ಆ ಪ್ರಶ್ನೆಗೆ ಅಸಮ್ಮತಿಸಿದ ಕಾರಣವೇನು? ಅವನು ತನ್ನ ಕನ್ಯೆಯನ್ನು ನನಗೆ ಧಾರೆಯೆರೆದು ಕೊಡುವದು ಅವಮಾನಕರವೆಂದೇಕೆ ಭಾವಿಸಿದನು?

"ಈ ಬಗೆಯಾಗಿ ಪ್ರಶ್ನೆ ಮಾಡಿ ನೀನು ನಿನ್ನಲ್ಲಿಯ ಧೈರ್ಯವನ್ನು ವ್ಯಕ್ತಪಡಿಸಿದೆಯೆಂಬದನ್ನು ನಾನು ಒಪ್ಪದಿರಲಾರೆನು; ಆದರೆ ನಿನ್ನ ಆ ಧೈರ್ಯದಿಂದಲೇ ಆತನಿಗೆ ಹಾಗೆ ಸಿಟ್ಟು ಬಂದಿರುವದು ಸ್ವಾಭಾವಿಕವಾಗಿದೆ."

ಫ್ಯಾನ:-"ಚಿಖೂನನೇ ನನಗೆ ತನ್ನ ಮಗಳನ್ನು ಕೊಡುವದು ಅವಮಾನಕರವೆಂದು ತಿಳಿದ ಬಳಿಕ, ಬೇರೆ ಚೀನಿಗರು ತಮ್ಮ ಕನ್ಯೆಯನ್ನು ಕೊಡುವರೇ?"

"ನಿಶ್ಚಯವಾಗಿಯೂ ಕೊಡಲಾರರು. ತಮ್ಮ ಸಾಮಾಜಿಕ ಬಂಧನಗಳನ್ನುಲ್ಲಂಘಿಸಲಿಕ್ಕೆ ಅದಾರು ಮುಂದರಿಯುವರು?"

"ಈ ಚೀನೀ ಜನರು ಕುಸಂಸ್ಕಾರಾಂಧರು; ಆದರೆ ನನ್ನ ತಂದೆಯ ಸಮಾಜವಂತೂ ಹಾಗಿಲ್ಲಲ್ಲವೆ? ನನಗೆ ಚೀನೀಯರ ಕನ್ಯೆಯು ದೊರೆಯದಿದ್ದರೆ ಇಲ್ಲ; ಯಾವಳೊಬ್ಬ ಇಂಗ್ಲಿಷ ತರುಣಿಯನ್ನಂತೂ ನಾನು ಲಗ್ನವಾಗಬಹುದಲ್ಲವೇ?"

ಫ್ಯಾನ ಟುಂಡನ ಆ ನುಡಿಯನ್ನು ಕೇಳಿ, ರಾಬರ್ಟಸನ್ನನು ತುಸ ವಿಷಣ್ಣಗೊಂಡನು. ವಿಶ್ವಪ್ರೇಮ, ಭ್ರಾತೃಭಾವ ಮುಂತಾದ ತಮ್ಮ ಉಚ್ಚ ಜನಾಂಗದ ಗುಣಗಳನ್ನು ಬಣ್ಣಿಸಿ ಇದು ವರೆಗೆ ಅವನು ಕ್ರಿಸ್ತೀ ಧರ್ಮದ ಮಹಿಮೆಯನ್ನು ಹೊಗಳುತ್ತ ಬಂದಿದ್ದನು; ಆದರೆ ಆ ನುಡಿಗೂ ಪ್ರತ್ಯಕ್ಷ ನಡೆಗೂ ಸರಿಪಡಿಸುವದು ಸಹಜವಲ್ಲೆಂಬದು ಇಂದು ಆತನ ನಿದರ್ಶನಕ್ಕೆ ಬಂದು ಬಿಟ್ಟಿತು. ಎಷ್ಟೋ ಹೊತ್ತು ಆಲೋಚಿಸಿದ ಬಳಿಕ ಆ ಪಾದರಿಯು:ತಮ್ಮಾ, ನಿನ್ನ ಈ ಅಭಿಲಾಷೆಯೆಂದರೆ, ಗಿಡ್ಡ ಪುರಾಣಿಯು ಮುಗಿಲೊಳಗಿನ ಚಂದಪ್ಪನನ್ನು ಹಿಡಿಯಹೋದಂತೆಯೇ ಸರಿ. ಟುಂಡಾ, ಇಂಗ್ಲಿಷರ ಕನ್ಯೆಯೊಡನೆ ನೀನು ವಿವಾಹವಾಗುವದು ಶಕ್ಯವಾಗಲಿಕ್ಕಿಲ್ಲ.

ಪಾದರಿಯ ಆ ನುಡಿಯನ್ನು ಕೇಳಿ ಆ ಹುಂಬ ಫ್ಯಾನಟುಂಡನ ಮರ್ಮಾಹತವಾದಂತಾಯಿತು. ಆಗ ಅವನು.–ಪಾದರಿ ಸಾಹೇಬರೇ, ಹಾಗಾದರೆ ನಾನು ವರ್ಣಸಂಕರನೆಂದು ಎಲ್ಲರ ತಿರಸ್ಕಾರಕ್ಕೂ ಗುರಿಯಾದೆನಲ್ಲವೇ? ಮಾತೃ ಇಲ್ಲವೆ ಪಿತೃ ಈ ಯಾವ ಕುಲದಲ್ಲಿಯೂ ನನಗೆ ಬಂದಿಷ್ಟು ಇಂಬು ಇಲ್ಲಲ್ಲವೆ? ನಾನೊಬ್ಬ ಸಮಾಜಪತಿತ ಅಭಿಶಪಿತ ಪ್ರಾಣಿಯೆಂದೇ ತಮ್ಮ ಅಭಿಪ್ರಾಯವೇನು? ಎನ್ನಲು,

"ಜಗತ್ತೇ ಸಾಮಾಜಿಕ ಬಂಧನಕ್ಕೆ ಒಳಪಟ್ಟದ್ದು. ಆ ಸಾಮಾಜಿಕ ನಿಯಮಗಳನ್ನುಲ್ಲಂಘಿಸಿ, ಯಾವ ಇಂಗ್ಲಿಷನೂ ಯಾವ ಚೀನೀಯನೂ ನಿನ್ನ ಮನೋಭಿಲಾಷೆಯನ್ನು ಈಡೇರಿಸಲಿಕ್ಕೆ ಸಮರ್ಥರಾಗಲಾರರು."

ಫ್ಯಾನ ಟುಂಡನಿಂದ ಅದನ್ನೆಲ್ಲ ಸಮಾಧಾನದಿಂದ ಕೇಳಿಕೊಳ್ಳಲಿಕ್ಕಾಗಲಿಲ್ಲ. ಅವನು ಕ್ರೋಧ-ಕ್ಷೋಭಗಳಿಂದ ಕೂಗಿ: –"ಧರ್ಮಾತ್ಮರೇ, ಇದೇ ನಿಮ್ಮ ಧರ್ಮವೇನು? ಇದೇ ನಿಮ್ಮ ಸಮಾಜ ನೀತಿಯೇನು? ನಿಮ್ಮಗಳ ಧರ್ಮವು ಭೇದ ನೀತಿಯ ತವರುಮನೆಯಾಗಿದೆ. ನಿಮ್ಮ ಸಮಾಜದ ಮೇಲೆ ನಿಮ್ಮ ಧರ್ಮದ ಹಾಗೂ ನಿಮ್ಮ ಧರ್ಮ ಸಂಸ್ಥಾಪಕರ ವರ್ಚಸ್ಸು ನಡೆಯುವದಿಲ್ಲ. ನಿಮ್ಮ ಸಮಾಜದ ಅನ್ಯಾಯ-ಅನೀತಿಗಳೊಳಗಿಂದ ಯಾವನೊಬ್ಬ ನಿರಪರಾಧ-ನಿರಾಶ್ರಯ-ಹತಭಾಗ್ಯನನ್ನು ಸಂರಕ್ಷಿಸುವದಶಕ್ಯವಾಗಿದ್ದರೆ, ಅದೇತಕ್ಕೆ ನೀವು ನನಗೆ ನಿಮ್ಮ ದೇಶದ ಆ ಶಿಕ್ಷಣವನ್ನು ಕೊಡಿಸಿದಿರಿ? ಮನುಷ್ಯನು ಸಕಲ ಮಾನವ ಕೋಟಿಯ ಭಾಂಧವನೆಂದೂ, ಸಕಲರೂ ಸಮಾನರೆಂದೂ ಅದೇತಕ್ಕೆ ಬೋಧಿಸಿದಿರಿ? ನನ್ನ

ಹೃದಯದಲ್ಲಿ ಇಂಥ ಉಚ್ಚ ಆಕಾಂಕ್ಷೆಗಳುದ್ಭವಿಸಲಿಕ್ಕೆ ಕಾರಣವೇನು? ಯಾವ ಉದ್ದೇಶದಿಂದ ನೀವು ನಿಮ್ಮ ಆ ಏಸುವಿನನ್ನು ಭಜಿಸಲಿಕ್ಕೆ ಹಚ್ಚಿದಿರಿ? "ನಿನಗೆ ಜಾತಿ ಇಲ್ಲ; ನಿನ್ನ ಜೀವನವು ಅಭಿಶಪಿತವಾದದ್ದು; ನೀನುಎಲ್ಲರ ತಿರಸ್ಕಾರಕ್ಕೂ ಪಾತ್ರನಾದವನು;" ಎಂದು ನೀವು ಆಗಲೆ ನನಗೇಕೆ ತಿಳಿಸಲಿಲ್ಲ? ನಾನು ನಿಮ್ಮ ಧರ್ಮವನ್ನವಲಂಬಿಸಿದ್ದರಿಂದಲೇ ಎಲ್ಲರ ವಿಡಂಬನೆಗೆ ಪಾತ್ರವಾದಂತಾಯಿತು."

ಆ ಪೋರನು ಆಗ ಅದಕ್ಕೂ ಹೆಚ್ಚು ಮಾತಾಡದಾದನು. ಎಷ್ಟೋ ಹೊತ್ತಿನ ವರೆಗೆ ಆ ವೃದ್ಧ ಪಾದರಿಯು ಸುಮ್ಮನೆ ಕುಳಿತುಕೊಂಡದ್ದನ್ನು ನೋಡಿ, ಅವನು ಆತನ ಆ ಕೋಣೆಯಿಂದೆದ್ದು ಹೊರಟು ಹೋದನು. ಹೋಗೆ ಹೋಗುತ್ತ ಆತನು ಅಸ್ಫುಟವಾಗಿ:—"ರಾಬರ್ಟ ಸಾಹೇಬನು ಇನ್ನು ನನ್ನ ಯಜಮಾನನಲ್ಲ; ಈ ಮನುಷ್ಯನು ನನ್ನನ್ನು ಮೋಸಗೊಳಿಸಿರುವನಾದ್ದರಿಂದ, ಇನ್ನು ನಾನು ಇವನನ್ನು ನಂಬಲಾರೆನು ಈತನ ಈ ನೀಚ ಧಾರ್ಮಿಕ ವ್ಯವಹಾರವನ್ನು ನಾನೆಂದಿಗೂ ಮರೆಯಲಾರೆನು. ಈ ಪಾದರಿಯನ್ನು ತನ್ನೀ ಮೋಸಗಾರಿಕೆಯ ಬಗ್ಗೆ ಒಂದಾನೊಂದು ದಿನ ಅನುತಪ್ತಪಡಿಸಲೇಬೇಕು."

ಅಲ್ಲಿಂದ ಹೊರಬಿದ್ದ ಫ್ಯಾನ ಟುಂಡನು ಒಂದು ಸಾಮಾನ್ಯವಾದ ಉದ್ಯಾನವನವನ್ನು ಪ್ರವೇಶಿಸಿ, ಅಲ್ಲಿಯದೊಂದು ವಿಶಾಲವಾದ ಮರದ ಕೆಳಗೆ ಹೋಗಿ ಕುಳಿತನು. ಅವನು ಅಲ್ಲಿ ಅನೇಕ ಬಗೆಯಾಗಿ ಚಿಂತಿಸಿದ ನಂತರ, ಆತನ ಸಮಸ್ತ ಕ್ರೋಧವೂ ಆತನ ತಂದೆಯಲ್ಲಿಯೇ ಒಟ್ಟುಗೂಡಿತು. ತನ್ನ ತಂದೆಯು ಮೋಹಾಂಧನಾಗಿ ಚೀನಿಗರ ಕನ್ನೆಯನ್ನು ಲಗ್ನ ಮಾಡಿಕೊಂಡದ್ದರಿಂದಲೇ ಹೀಗೆ ಸರ್ವ ಬಗೆಯಿಂದಲೂ ತನ್ನ ನಾಶವಾಯಿತೆಂದು ಆ ಫ್ಯಾನ ಟುಂಡನು ನಿರ್ಧರಿಸಿದನು. ಕಟ್ಟಕಡೆಗೆ ಅವನು ತನ್ನ ಮನಸ್ಸಿನಲ್ಲಿ ಏನನ್ನೋ ದೃಢವಾಗಿ ನಿಶ್ಚಯಿಸಿಕೊಂಡು, ಆ ಉದ್ಯಾನವನದಿಂದ ಹೊರಬಿದ್ದನು; ಹಾಗು ಉನ್ಮತ್ತನಂತೆ ಆ ಕ್ಯಾಂಟನ್ನ ಪಟ್ಟಣದ ರಾಜಬೀದಿಯನ್ನು ಹಿಡಿದು ನಡೆದನು ಹಲವು ಕಡೆಗೆ ಅಡ್ಡಾಡಿ, ಹುಚ್ಚು ತಲೆಗೇರಿದವನಂತೆ ಆತನು ಆ ಪಟ್ಟಣದೊಳಗಿನ ಸುಪ್ರಸಿದ್ಧವಾದ ಬುದ್ಧ ಮಂದಿರಕ್ಕೆಹೋಗಿ ತಲುಪಿದನು.

ಆ ಮಂದಿರದೊಳಗೊಂದು ಧ್ಯಾನಸ್ಥವಾದ ಬುದ್ಧಮೂರ್ತಿಯು ಪ್ರತಿಷ್ಠಿಸಲ್ಪಟ್ಟಿತ್ತು. ಅದು ಬಹು ದೊಡ್ಡದಾಗಿತ್ತು. ಆ ಮಂದಿರದ ಪ್ರಶಸ್ತಾದ ಅಂಗಳವೆಲ್ಲ ಕಲ್ಲುಹಾಸಿಗೆಯಿಂದ ಪರಿಶೋಭಿಸುತ್ತಿತ್ತು. ಚೀನದೇಶದೊಳಗಿನ ಅಸಂಖ್ಯ ಬುದ್ಧಭಕ್ತರು ಬಂದು ಪ್ರತಿದಿನ ಆ ದೇವರ ದರ್ಶನ ಹೊಂದುತ್ತಿದ್ದರು ಹಾಗು ಭಕ್ತಿಪೂರ್ಣ ಹೃದಯದಿಂದ ಆ ದೇವರನ್ನು ಕುರಿತು ಹಲವು ಬಗೆಯಿಂದ ಪ್ರಾರ್ಥಿಸುತ್ತಿದ್ದರು. ಆ ಬುದ್ಧಮೂರ್ತಿಯು ಬಹು ಎತ್ತರವಾದ ಬಂಗಾರದ

ವೇದಿಕೆಯ ಮೇಲೆ ಪ್ರತಿಷ್ಠಿತವಾಗಿತ್ತು. ಧೂಪದ ಮಧುರ ಸುಗಂಧದಿಂದಲೂ ನಾನಾ ಜಾತಿಯ ಪುಷ್ಪಗಳ ಸೌರಭದಿಂದಲೂ ಆ ವಿಶಾಲವಾದ ದೇವಾಲಯವು ಘಮಘಮಿಸುತ್ತಿತ್ತಲ್ಲದೆ, ಭಕ್ತವೃಂದದ ವಂದನ ಗೀತಗಳಿಂದ ಪ್ರತಿಧ್ವನಿಗೊಡುತ್ತಿತ್ತು. ವಿಹ್ವಲಚಿತ್ತನಾದ ನಮ್ಮ ಫ್ಯಾನ ಟುಂಡನು ಮದಗ್ರಸ್ತನಂತೆ ಜೋಲಿ ಹೊಡೆಯುತ್ತ ಹೊಡೆಯುತ್ತ ಯಾವಾಗ ಆ ಮಂದಿರವನ್ನು ಪ್ರವೇಶಿಸಿದನೋ, ಆಗ ಹಲವು ಜನ ಭಕ್ತರು ಅಲ್ಲಿ ಕಲೆತು ಬುದ್ಧದೇವನ ಪೂಜಾ ನುಸ್ಕಾರ ಗಳಲ್ಲಿ ತೊಡಗಿದ್ದರು. ಫ್ಯಾನ ಟುಂಡನ ಚಿತ್ತವು ಬೇರೆ ಯಾವ ಕಡೆಗೂ ಇರದ್ದರಿಂದ ಅವನು ನೆಟ್ಟಗೆ ಮಂದಿರದ ಬಾಗಿಲಲ್ಲಿ ಹೊಕ್ಕವನೇ ಬುದ್ಧದೇವನ ಮೂರ್ತಿಯ ಎದುರಿಗೆ ಹೋಗಿ ಮೊಣಕಾಲೂರಿ ಕುಳಿತುಕೊಂಡನು; ಹಾಗು ಆ ಧ್ಯಾನಸ್ಥ ಬುದ್ಧದೇವನ ಮೂರ್ತಿಯ ಕಡೆಗೆ ದೃಷ್ಟಿಯನ್ನಿರಿಸಿ, ಬಳ್ಳೇ ದುಃಖದಿಂದ:—"ಎಲೈ ಭಗವಾನ್, ಕರುಣಾಮಯ ಬುದ್ಧದೇವಾ! ನಾನು ಇದುವರೆಗೆ ನಿನ್ನನ್ನು ಮರೆತು ಸಂಕಟಕ್ಕೀಡಾದೆನು. ಅಜ್ಞನಾದ ನಾನು ವಿದೇಶೀಯರ ಧರ್ಮವನ್ನು ಗ್ರಹಿಸಿದ್ದೆನು; ಆದರೆ ಇಂದು ಆ ನನ್ನ ಭ್ರಮವೆಲ್ಲ ಬಯಲಾಯಿತು. ಇಂದಿನಿಂದ ನೀನೇ ನನ್ನ ಉಪಾಸ್ಯ ದೇವತೆಯು. ಇಂದು ನಾನು ಆ ಪರಮ ಡಾಂಭಿಕವಾದ ಕ್ರೈಸ್ತಧರ್ಮವನ್ನು ತ್ಯಜಿಸಿ, ನಿನ್ನ ಪಾದಗಳ ಮೇಲೆ ಆತ್ಮ ಸಮರ್ಪಣ ಮಾಡಿರುತ್ತೇನೆ. ನಾನು ಬರೇ ಆ ವಿದೇಶೀಯ ಪಿಶಾಚಿಗಳ ಧರ್ಮವನ್ನಷ್ಟೇ ತ್ಯಜಿಸಿ ಬಿಟ್ಟೆನೆಂತಲ್ಲ; ಇಂದಿನಿಂದ ನಾನು ಅವರುಗಳಿಗೆ ಮಹಾ ಶತ್ರುವಾಗಿರುತ್ತೇನೆ. ಅವರ ಕೇಡುಬಗೆಯುವದೇ ನನ್ನ ಜೀವನದ ಮುಖ್ಯ ವ್ರತವಾಗಿರುತ್ತದೆ. ನಾನು ಕಡೆಯುವರೆಗೂ ಅವರ ಅನಿಷ್ಟಕ್ಕಾಗಿ ಪ್ರಯತ್ನಿಸುವವನು. ದೇವಾ, ನೀನು ನನ್ನೀ ಸಂಕಲ್ಪಸಾಧನಕ್ಕೆ ಸಹಾಯಕನಾಗು ಇಂದು ನಿನ್ನ ಮಂದಿರಕ್ಕೆ ಬಂದು ನಿನ್ನೆದುರಿಗೆ ಯಾವ ಪ್ರತಿಜ್ಞೆಯನ್ನು ಮಾಡಿರುವೆನೋ, ನನ್ನ ಜೀವನದ ಕಡೆಯ ಗಳಿಗೆಯುವರೆಗೂ ನಾನು ಈ ಪ್ರತಿಜ್ಞೆಯನ್ನೇ ಪಾಲಿಸತಕ್ಕವನು. ದೇವಾ, ನೀನು ನನಗೆ ಧೈರ್ಯವನ್ನು ಕೊಡು; ಸಾಹಸವನ್ನು ದಯಪಾಲಿಸು; ಬಲವನ್ನೊದಗಿಸು; ನನ್ನೀ ಸಂಕಲ್ಪವು ಈಡೇರುವಂತೆ ನನ್ನನ್ನು ಅನುಗ್ರಹಿಸು" ಹೀಗೆಂದು ಆತನು ಅಲ್ಲಿ ಎಷ್ಟೋ ಹೊತ್ತಿನವರೆಗೆ ಪ್ರಾರ್ಥಿಸಿದನು. ಅವನು ಅಂದು ಅಲ್ಲಿ ಯಾರೊಡನೆಯೂ ಮಾತನಾಡಲಿಲ್ಲ ಅವನತ ಮಸ್ತಕದಿಂದಲೇ ಕುಳಿತಿದ್ದನು. ಸಂಜೆಯ ವರೆಗೂ ಆ ಮಂದಿರದಲ್ಲಿಯೇ ಇದ್ದು, ರಾತ್ರಿಯಾಗುತ್ತಲೆ ಅವನು ಆ ಗಾಢಾಂಧಕಾರದಲ್ಲಿ ಎತ್ತ ಮಾಯವಾದನೋ ತಿಳಿಯಲಿಲ್ಲ.

—: ಇಲ್ಲಿಗೆ ಪೂರ್ವವೃತ್ತವು ಮುಗಿದುದು: —

———

## ೧ನೇ ತೆರೆ.

## ವಿಪತ್ತಿಗೊಳಗಾದ ಯುವತಿಯು.



ಹರ್ಷಿ ಕನ್ಫೂಷಿಯು ಯಾವ ಮಹಾ ವಾಕ್ಯಗಳನ್ನು ಬರೆದಿಟ್ಟಿರುವನೋ ಅವುಗಳಲ್ಲಿಯ ಒಂದು ವಾಕ್ಯದ ಆಶಯವು "ಭವಿಷ್ಯತ್ತಿನಲ್ಲಿ ಯಾವುದು ಆಗಬೇಕಾಗಿರುವದೋ, ಅದು ಮುಂಚೆಯೇ ಸ್ಥಿರವಾಗಿ ಬಿಟ್ಟಿರುತ್ತದೆ; ಅಂದರೆ ಯಾವುದು ಆಗಬೇಕಾಗಿದೆಯೋ ಅದು ಆಗಿಯೇ ತೀರುತ್ತದೆ. ಮನುಷ್ಯ ಪ್ರಯತ್ನದಿಂದ ಅದನ್ನು ತಪ್ಪಿಸಲಿಕ್ಕಾಗುವದಿಲ್ಲವು" ಹೀಗೆ ಇರುತ್ತದೆ. ಆ ಮಹರ್ಷಿಗಳ ಆ ವಾಕ್ಯದಲ್ಲಿ ಅರ್ಥವಿಲ್ಲೆಂದು ಹೇಳುವದು ಹುಚ್ಚುತನದ್ದಾಗಬಹುದು. ಮನುಷ್ಯನು ಹುಟ್ಟುವ ಮೊದಲೇ ವಿಧಿಯು ಆತನ ಹಣೆಯಲ್ಲಿ ಏನೇನು ಬರೆದಿರುವನೋ, ಆ ವಿಧಿ ಲಿಪಿಯನ್ನು ಯಾವನಿಂದಲೂ ಅಳಿಸಲಾಗುವದಿಲ್ಲ. ಆ ವಿಧಿಲಿಪಿಗನುಗುಣವಾಗಿಯೇ ಆ ಮನುಷ್ಯನಿಗೆ ಆತನ ಇಹ ಜೀವನದಲ್ಲಿ ಫಲಾ-ಫಲಗಳು ಲಭಿಸುತ್ತವೆ. ಪ್ರಸ್ತುತದ ನಮ್ಮ ಈ "ಫಿರಂಗಿಯ ಪ್ರತಿಹಿಂಸೆ"ಯ ಕಥಾನ-ದಲ್ಲಾದರೂ ಇದೇ ವಿಷಯವು ಫ್ಯಾನ ಟುಂಡ, ಮರ್ಟನ ಡೆಭೆನಟ ಇವರುಗಳ ಉದಾಹರಣೆ ಸಹಿತವಾಗಿ ಪ್ರತಿಪಾದಿಸಲ್ಪಡುವದು. ವಾಚಕರು ಈ ಪುಸ್ತಕವನ್ನು ಸಾವಧಾನದಿಂದ ಓದಿ, ಮೇಲೆ ಹೇಳಿದ ಮಹರ್ಷಿಗಳ ಮಹಾವಾಕ್ಯವನ್ನು ಮನಗಾಣಬಹುದು.

ಇತ್ತ ತಂದೆಯಿಂದ ಪರಿತ್ಯಜಿಸಲ್ಪಟ್ಟ ಮಾತೃವಿಹೀನವಾದ ಆ ಫ್ಯಾನ ಟುಂಡ ಶಿಶುವು ತನ್ನ ಚಿಕ್ಕಮ್ಮನ ಬಳಿಯಲ್ಲಿ ಚೀನದೇಶದ ಕ್ಯಾಂಟನ್ ನಗರದಲ್ಲಿ ಶುಕ್ಲಪಕ್ಷದ ಚಂದ್ರನಂತೆ ಬೆಳೆಯುತ್ತ ಆರು ವರ್ಷದ್ದಾದಾಗ, ಅತ್ತ ಚೀನದೇಶದಿಂದ ಸಹಸ್ರಾರು ಮೈಲು ದೂರದಲ್ಲಿರುವ ಇಂಗ್ಲಂಡ ದೇಶದ ಸಮರಸೆಟ್ ಜಿಲ್ಹೆಯೊಳಗಿನ ಕೊಯಾಂಟಕ ಪರ್ವತದ ಒಂದಾನೊಂದು ಇಕ್ಕಟ್ಟಿನ ದರಿಯೊಳಗಿನ ಹಳ್ಳಿಯಲ್ಲಿ ರಾಬರ್ಟ ವೆಭಾನ ಎಂಬ ಹೆಸರಿನ ಒಬ್ಬಾನೊಬ್ಬ ಸಾಮಾನ್ಯ ಒಕ್ಕಲಿಗನ ಹೆಂಡತಿಯು ಒಂದು ಹೆಣ್ಣು ಕೂಸಿಗೆ ಜನ್ಮವಿತ್ತಳು. ಆ ಒಕ್ಕಲಿಗ ದಂಪತಿಗಳು ತಮ್ಮ ಆ ಮುದ್ದು ಕೂಸಿಗೆ "ಮೇರಿ" ಎಂಬ ನಾಮಧೇಯ ಮಾಡಿದರು.

ಮೇರಿಯು ಆ ಗುಡ್ಡಗಾಡಿನ ಹಳ್ಳಿಯಲ್ಲಿ ಪಿತೃಗೃಹದಲ್ಲಿ ಪರಿಪಾಲಿತಳಾದಳು. ಕ್ರಮವಾಗಿ ಆಕೆಗೆ ಹತ್ತೊಂಬತ್ತು ವಯಸ್ಸಾಯಿತು. ಮರ್ಟನ್ ಡೆಭೆನಟನು-ಫ್ಯಾನ ಟುಂಡನ ತಂದೆಯು-ಚೀನದೇಶದಿಂದ ಇಂಗ್ಲಂಡಕ್ಕೆ ಮರಳಿ

ಒಂದು ಇಪ್ಪತ್ತೈದು ವರ್ಷಗಳಾದ ನಂತರ ಮೇರಿಯು ವಸಂತ ಋತುವಿನ ಒಂದು ಅಪರಾಹ್ಣ ಕಾಲದಲ್ಲಿ ಲಂಡನ್ನ ಪಟ್ಟಣದೊಳಗಿನ ಪ್ಯಾಡಿಂಟನ್ ಎಂಬ ಹೆಸರಿನ ಸ್ಟೇಶನ್ನಿನಲ್ಲಿ ರೈಲ ಗಾಡಿಯಿಂದ ಇಳಿದಳು. ಆಗ ಮೇರಿಯು ಸರ್ವಾಂಗ ಸುಂದರಳಾದ ಯುವತಿಯಾಗಿದ್ದಳು. ಅವಳು ಆ ಹಳ್ಳಿಯ ಬಡಒಕ್ಕಲಿಗನ ಮಗಳಾಗಿದ್ದರೂ ರೂಪ-ಲಾವಣ್ಯಗಳಿಂದ ಬಹು ಚೆಲುವೆಯಾಗಿ ಕಾಣುತ್ತಿದ್ದಳು. ಹಳ್ಳಿಗಾಡಿನ ಆ ಸೃಷ್ಟಿ ಸೌಂದರ್ಯದಲ್ಲಿ ಬೆಳೆದ ಮೇರಿಯು, ಸುಲಿದ ಬಾಳೆಯ ಹಣ್ಣಿನಂತೆ ಒಳ್ಳೇ ಮನೋಹರಳಾಗಿ ತೋರುತ್ತಿದ್ದದರಿಂದ, ಕೇವಲ ಜಿತೇಂದ್ರಿಯರೂ ಆಜನ್ಮ ಬ್ರಹ್ಮಚಾರಿಗಳೂ ಪರಮ ಸಾಧುಗಳೂ ಅಖಂಡ ತಪಸ್ವಿಗಳೂ ಕೂಡ ಅವಳನ್ನು ಕಂಡು ಮೋಹಾಂಧರಾಗದಿರುತ್ತಿರಲಿಲ್ಲ.

ರೈಲಿನಿಂದಿಳಿದವಳೇ ಮೇರಿಯು ತನ್ನದೊಂದು ಚಿಕ್ಕ ಬ್ಯಾಗನ್ನು ಕೈಯಲ್ಲಿ ಹಿಡಿದುಕೊಂಡು ಸ್ಟೇಶನ್ನಿನಿಂದ ಹೊರಬಿದ್ದಳು. ದೊಡ್ಡ ದಾರಿಗೆ ಒಂದು ಮೋಟಾರ ಇಲ್ಲವೆ ಟ್ರಾಮುಗಳ ಮಾರ್ಗಪ್ರತೀಕ್ಷೆ ಮಾಡದೆ. ಕಾಲ್ನಡಿಗೆಯಿಂದಲೇ ಸಾಗಿದಳು. ಆ ಲಂಡನ್ನಪಟ್ಟಣದೊಳಗಿನ ಜನ ಕೋಲಾಹಲವೂ, ಬಗೆಬಗೆಯ ಯಾನ-ವಾಹನಗಳ ವೇಗದಿಂದುಂಟಾದ ಮಿಶ್ರ ಕಲ್ಲೋಲ ಶಬ್ದವೂ, ರೈಲ ಎಂಜಿನ್ನಿನ, ಬೇರೆ ಯಂತ್ರಗಳ, ಮೋಟಾರ ಬಂಡಿಗಳ, ಗಿರಣಿಗಳ ವಿಚಿತ್ರ ಕೂಗುಗಳ ಶಬ್ದವೂ ಒಟ್ಟುಗೂಡಿ, ದಾರಿಹಿಡಿದು ನಡೆದಿದ್ದ ಆ ಹಳ್ಳಿಗಾಡಿನ ತರುಣಿಯ ಮನಸ್ಸಿನ ಮೇಲೆ ಬಲವಾಗಿ ಆಘಾತ ಮಾಡಲು, ಅವಳು ಮುಂದುಗಾಣದೆ ಕಕ್ಕಾವಿಕ್ಕಿಯಾಗಿ ನೋಡುತ್ತ ದಾರಿಯ ಮಧ್ಯದಲ್ಲೇ ನಿಂತು ಬಿಟ್ಟಳು!

ಮೇರಿಯು ಹಾಗೆ ಆಕಸ್ಮಿಕವಾಗಿ ಲಂಡನ್ನಿಗೆ ಹೊರಡುವ ಮೊದಲು ಐದು ವರ್ಷಗಳ ಹಿಂದೆ ಅವಳ ತಾಯಿಯು ತೀರಿಕೊಂಡಿದ್ದಳು. ಮಾತೃಶೋಕದಿಂದ ಅವಳು ಹೆಚ್ಚಾಗಿ ಬೆಂದಿದ್ದಳು. ತಂದೆಯ ಆ ನಿರ್ಜನವಾದ ಹೊಲದಲ್ಲಿ ಅವಳ ಹೃದಯಕ್ಕುಂಟಾದ ಹಾ ಹಾಕಾರವನ್ನು ನಿವಾರಿಸುವ ಯಾವ ಸಾಧನಗಳೂ ಇರಲಿಲ್ಲವು ಆಕೆಯ ತಂದೆಯು ಅಷ್ಟೊಂದು ಬಡವನಾಗಿರಲಿಲ್ಲ, ಮಧ್ಯಮಸ್ಥಿತಿಯವನಾಗಿದ್ದನು; ಅಲ್ಲದೆ ಮೇರಿಯಲ್ಲಿ ಆತನ ಪ್ರೀತಿ ವಿಶ್ವಾಸಗಳೂ ಕಡಿಮೆಯಾಗಿರಲಿಲ್ಲ; ಆದರೆ ಆ ಕೃಷಕನು ಇತ್ತೀಚೆಗೆ ಬಹು ಕಟಕಟಿಯ ಸ್ವಭಾವದವನಾಗಿದ್ದನು. ತೀರ ಕ್ಷುಲ್ಲಕ ಸಂಗತಿಗಳ ಸಲುವಾಗಿಯೂ ಆತನು ತನ್ನ ಮಗಳನ್ನು ಪೀಡಿಸಹತ್ತಿದ್ದನು. ಅದಕ್ಕಾಗಿ ಬಹು ಬೇಸತ್ತಿದ್ದ ಮೇರಿಯು, ಕಡೆಗೊಂದು ದಿನ ಇನ್ನು ಇಲ್ಲಿ ಇರಲಾಗದೆಂದು ಮನಸ್ಸಿನಲ್ಲಿ ನಿರ್ಧರಿಸಿಕೊಂಡು, ದುರಭಿಮಾನದಿಂದ ತಂದೆಗೆ ಹೇಳದೆ-ಕೇಳದೆ ಮನೆಯಿಂದ ಹೊರಬಿದ್ದು, ಲಂಡನ್ನಿಗೆ ಓಡಿ ಬಂದಿದ್ದಳು.

ಒಹು ದಿನಗಳ ಮುಂಚೆ ಅವಳು ತನ್ನ ತಾಯಿಯೊಡನೆ ಒಮ್ಮೆ ಲಂಡನ್ನಿಗೆ ಬಂದಿದ್ದಳು; ಆದರೆ ಆ ವಿಶಾಲವಾದ ರಾಜಧಾನಿಯ ವಿಷಯವಾಗಿ ಅವಳಿಗೇನೂ ಗೊತ್ತಿರಲಿಲ್ಲ. ತನ್ನಂತಹ ಅನಭಿಜ್ಞ ಹಳ್ಳಿಗಾಡಿನ ಸರಲ-ಸುಂದರಿಯರಿಗೆ ಲಂಡನ್ನಪಟ್ಟಣವು ಎಂಥ ಭಯಂಕರವಾದ ಸ್ಥಳವೆಂಬದನ್ನು ಅರಿಯುವಷ್ಟು ಬುದ್ಧಿವಂತಿಕೆಯು ಅವಳಲ್ಲಿರಲಿಲ್ಲ. ಆದರೂ ಅವಳು ತನ್ನೊಬ್ಬ ಆಪ್ತನನ್ನು ಅವಲಂಬಿಸಿ ಆ ಲಂಡನ್ನ ನಗರಿಗೆ ಬಂದು ಬಿಟ್ಟಿದ್ದಳು. ಆ ಆಪ್ತನಲ್ಲಿ ಅವಳ ಶ್ರದ್ಧೆಯೂ ವಿಶ್ವಾಸವೂ ಹೆಚ್ಚಾಗಿದ್ದವು. ತಾನು ಲಂಡನ್ನಿಗೆ ಹೋಗಿ ಯಾವುದೊಂದು ನೌಕರಿ-ಚಾಕರಿ ದೊರಕಿಸಿಕೊಂಡು ಅಲ್ಲಿಯೇ ಇರಬೇಕೆಂದು ಆ ಮೇರಿಯ ಇಚ್ಛೆಯಿದ್ದಿತು. ತಂದೆಯ ಮನೆಗೆ ಮರಳಿ ಹೋಗಬಾರದೆಂದು ನಿರ್ಧರಿಸಿಕೊಂಡೇ ಅಂದು ಅವಳು ಆ ಲಂಡನ್ನಿಗೆ ಬಂದಿದ್ದಳು.

ಆದರೆ ಮೇರಿಗೆ ತನ್ನ ಆ ಪರಮಾಪ್ತನ ಮನೆಯ ವಿಳಾಸವು ಗೊತ್ತಿರಲಿಲ್ಲ. ಅವಳು ಪ್ಯಾಡಿಂಟನ್ ಸ್ಟೇಶನ್ನಿನಿಂದ ತುಸ ದೂರ ಹೋಗಿ, ಮುಂದೆ ಎತ್ತ ಹೋಗಬೇಕೆಂಬದನ್ನು ನಿರ್ಧರಿಸಲಾರದೆ ಕಾಲುದಾರಿಯೊಳಗೇ ನಿಂತುಕೊಂಡು ಯೋಚಿಸತೊಡಗಿದಳು. ಸಮೀಪದಲ್ಲೇ ಒಬ್ಬ ಪೋಲೀಸ ಶಿಪಾಯಿಯು ನಿಂತುಕೊಂಡಿದ್ದನು. ಅವನು ಮೇರಿಯ ಮುಖಲಕ್ಷಣವನ್ನು ಕಂಡು ಕೂಡಲೆ ಇವಳು ಹಳ್ಳಿಯವಳಾಗಿದ್ದು, ಈ ಲಂಡನ್ನಿಗೆ ಹೊಸಬಳೆಂಬದನ್ನು ತಿಳಿದನು. ಬಳಿಕ ಆ ಶಿಪಾಯಿಯು ಅವಳ ಬಳಿಗೆ ಬಂದು:-ಕುಮಾರಿಯವರೇ, ನೀವು ಈ ಪಟ್ಟಣಕ್ಕೆ ಹೊಸದಾಗಿಯೇ ಬಂದಂತೆ ಕಾಣುತ್ತದಲ್ಲವೆ? ಎಂದು ಕೇಳಿದನು.

ಮೇರಿಯು ಹೇಳುತ್ತಾಳೆ:—ಶಿಪಾಯಿಸಾಹೇಬರೇ, ನಾನು ಸಮರ್‌ಶೆಟ್ ದಿಂದ ಈಗ ತಾನೆ ಬಂದಿರುತ್ತೇನೆ. ನಾನು ಪಪ್ಪಲಿಗೆ ಹೋಗಬೇಕಾಗಿದೆ; ಆದರೆ ಅಲ್ಲಿಗೆ ಹೋಗುವ ಮಾರ್ಗವು ಗೊತ್ತಿಲ್ಲದಾಗಿದೆ; ಆದುದರಿಂದ ನಾನು ಬಹು ಯೋಚನೆಗೊಳಗಾಗಿದ್ದೇನೆ.

"ನೀವು ಪಪ್ಪಲಿಗೆ ಹೋಗಬೇಕೇ? ಅಲ್ಲಿಯ ಯಾರ ಮನೆಗೆ? ಯಾರ ಮನೆಗೆ ಹೋಗಬೇಕೆಂಬದನ್ನು ತಿಳಿಸಲಿಕ್ಕೆ ಆತಂಕವಿಲ್ಲವಷ್ಟೇ?"

"ಪಪ್ಪಲಿನೊಳಗಿನ ಜೇಲಿಗೆ ಹೋಗಬೇಕಾಗಿದೆ."

"ಅದು ಅಷ್ಟೊಂದು ಸಮೀಪವಿಲ್ಲ. ನಿಮಗೆ ಆ ಜೇಲಿಗೆ ಹೋಗುವದಿರಲೊಲ್ಲದೇಕೆ, ನಾನಂತೂ ನಿಮ್ಮನ್ನು ಈ ಕಡೆಯ ಸಮೀಪದ ಜೇಲಿಗೆ ಕಳಿಸಿ ಬಿಡುತ್ತೇನೆ."

"ಯಾವದೊಂದು ಜೇಲಿಗೆ ಹೋದರೆ ನನ್ನ ಕೆಲಸವಾಗಲಿಕ್ಕಿಲ್ಲ. ನಾನು ಪಪ್ಪಲಿನೊಳಗಿನ ಜೇಲಿಗೇ ಹೋಗಬೇಕು. ನಾನು ಯಾರನ್ನು ಭೆಟ್ಟಿಯಾಗ

ಬೇಕಾಗಿದೆಯೋ, ಅವರು ಅದೇ ಜೇಲಿನಲ್ಲಿರುತ್ತಾರೆ."

"ಹಾಗಾದರೆ ನೀವು ಬಸ್ಸನ್ನೇರಿ ಹೋಗಿರಿ, ನಾನು ನಿಮಗೆ ದಾರಿ ಹೇಳಿ ಕೊಡುವೆನು; ಅಂದರೆ ಅದರಿಂದ ನಿಮಗೆ ಯಾವ ಅನಿಷ್ಟವೂ ಉಂಟಾಗಲಾರದು" ಹೀಗೆಂದು ಹೇಳಿ, ಆ ಪೋಲೀಸ ಶಿಪಾಯಿಯು ಮೇರಿಗೆ ಪಪ್ಪಲದ ದಾರಿಯು ಯನ್ನು ಹೇಳಿಕೊಟ್ಟನು; ಆದರೆ ಪೋಲೀಸರಿಂದಲೂ ಆಗಾಗ್ಗೆ ಎಷ್ಟೋ ತಪ್ಪು ಗಳಾಗುತ್ತಿರುತ್ತವೆ; ಅದರಂತೆ ಅಂದು ಆ ಶಿಪಾಯಿಯಿಂದಲೂ ಘಟಿಸಿತು. ಆ ಶಿಪಾಯಿಗೆ ಪಪ್ಪಲದ ದಾರಿಯು ಚೆನ್ನಾಗಿ ಗೊತ್ತಿರದ್ದರಿಂದ, ಅವನು ಯಾವುದೋ ಒಂದು ಬಸ್ಸನ್ನು ತೋರಿಸಿ, ಇದರಲ್ಲಿ ಕುಳಿತು ಇಂಥಲ್ಲಿ ಇಳಿದರೆ, ನೀವು ಪಪ್ಪಲಿಗೆ ಸುಲಭವಾಗಿ ತಲುಪುವಿರೆಂದು ತಿಳಿಸಿದನು. ಅಷ್ಟರಲ್ಲಿ ಆತನು ತೋರಿಸಿದ್ದ ಆ ನಂಬರಿನ ಬಸ್ಸು ಅಲ್ಲಿಗೆ ಬರಲು, ಮೇರಿಯು ಆ ವ್ಹಿಕ್ಟೋರಿಯಾ ಒಸ್ಸಿನಲ್ಲಿ ಕುಳಿತು, ಶ್ಯಾಮುಬರ್ಝಾರದ ತಿಕೀಟು ಕೊಂಡುಕೊಂಡಳು. ಆ ವ್ಹಿಕ್ಟೋರಿಯಾ ಬಸ್ಸು ಹಾಯಕೋರ್ಟು, ಧರ್ಮತಲಾಯ ಮುಂತಾದ ಭಾಗ ಗಳನ್ನು ದಾಟಿ ಶ್ಯಾಮುಬರ್ಝಾರಕ್ಕೆ ಹೋಗಿ ನಿಂತಿತು. ಕೂಡಲೆ ಕಂಡಕ್ಟರನು "ಶಾಮುಬರ್ಝಾರಿಗೆ ಇಳಿಯುವವರು ಇಳಿಯಿರಿ" ಎಂದು ಕೂಗಿದನು. ಆ ಕೂಡಲೆ ಮೇರಿಯು ಒಸ್ಸಿನಿಂದಿಳಿಯಲು, ಅದು ತನ್ನ ಶೀಘ್ರಗತಿಯಿಂದ ಮುಂದಕ್ಕೆ ಹೊರಟು ಹೋಯಿತು. ಅಷ್ಟರಲ್ಲಿ ಸಂಧ್ಯಾಕಾಲವಾಯಿತು. ಬರಬರುತ್ತ ಗಾಢವಾದ ಕತ್ತಲೆಯೂ ಬೀಳತೊಡಗಿತು.

ಮೇರಿಯು ಅಲ್ಲಿಯದೊಂದು ಕುದುರೆಯ ಬಂಡಿಯನ್ನು ಗೊತ್ತು ಮಾಡಿ ಕೊಂಡು ಪಪ್ಪಲಿನ ಜೇಲಿಗೆ ಹೋಗಬೇಕೆಂದು ಯೋಚಿಸಿ, ಬಾಡಿಗೆಯ ದುಡ್ಡನ್ನು ತೆಗೆಯಲಿಕ್ಕೆಂದು ತನ್ನ ಬೊಕ್ಕಣದೊಳಗೆ ಕೈಹಾಕಲು, ಅಲ್ಲಿ ಆಕೆಯ ದುಡ್ಡಿನ ಚೀಲವೇ ಇರಲಿಲ್ಲ! ತನ್ನ ಕಿಸೆಯೊಳಗಿನ ರೊಕ್ಕದ ಚೀಲವು ಯಾವಾಗ ಹಾಗು ಹೇಗೆ ಮಾಯವಾಯಿತೆಂಬದು ಆಕೆಗೆ ತಿಳಿಯಲೇ ಇಲ್ಲ.

ಮೇರಿಯ ಬಳಿಯಲ್ಲಿದ್ದ ಎಲ್ಲ ಗಂಟೂ ಅದರಲ್ಲೇ ಇದ್ದಿತು. ಅವಳು ತನ್ನ ಮನೆಯಿಂದ ಹೊರಬೀಳುವಾಗ ಮೂರು ಪೌಂಡುಗಳನ್ನು ಸಂಗಡ ತಂದಿದ್ದಳು. ರೈಲ ಖರ್ಚಿನ ಕೆಲ ಶಿಲಿಂಗುಗಳು ಹೋಗಲಾಗಿ, ಬಾಕಿ ಉಳಿದಿದ್ದ ಹಣ ವೆಲ್ಲ ಅದರಲ್ಲೇ ಇತ್ತು. ಅವಳು ತನ್ನ ಹಣದ ಹಮ್ಮಿಣಿಯನ್ನು ಕಳಕೊಂಡು ಆ ದೊಡ್ಡ ಪಟ್ಟಣದಲ್ಲಿ ಕೇವಲ ನಿರಾಶ್ರಿತಳಾದಳು. ತಾನು ಆ ವ್ಹಿಕ್ಟೋರಿಯಾ ಬಸ್ಸಿನಲ್ಲಿ ಕುಳಿತಾಗ ತನ್ನ ಬಳಿಯಲ್ಲಿ ನಗೆಮೊಗದಿಂದ ಕುಳಿತಿದ್ದ ಆ ಬದ್‌ಮಾಷನೇ ಅದನ್ನು ಎತ್ತಿ ಹಾಕಿದನೆಂದು ಎಷ್ಟೋ ಹೊತ್ತಿನ ಮೇಲೆ ಅವಳಿಗೆ ಗೊತ್ತಾಯಿತು.

ಇನ್ನು ಅವಳು ಮಿಕ್ಕ ದಾರಿಯನ್ನು ಕಾಲಿಲೆ ನಡೆದು ಹೋದ ಹೊರತು ಗತ್ಯಂತರವಿರಲಿಲ್ಲ. ಆ ವ್ಹಿಕ್ಟೋರಿಯಾ ಬಸ್ಸು ಆ ಶ್ಯಾಮುಬರ್ಝಾರದಿಂದ ಮುಂದೆ ಯಾವ ದಾರಿ ಹಿಡಿದು ಹೋಗಿದ್ದಿತೋ, ಮೇರಿಯೂ ಅದೇ ದಾರಿ ಹಿಡಿದು ಸಾಗಿದಳು. ಕೆಲ ದಾರಿ ಕ್ರಮಿಸಿದ ಬಳಿಕ ಅವಳು ಹಿಂದಿರುಗಿ ನೋಡಲು, ಕೆಲ ಜನ ಪುಂಡ ತರುಣರು ಒದರಾಡುತ್ತ-ಚೀರಾಡುತ್ತ ತನ್ನನ್ನೇ ಅನುಸರಿಸಿ ಬರುತ್ತಿರುವಂತೆ ಆಕೆಗೆ ಕಂಡಿತು ಆಗ ಅವಳು ಒಬ್ಬೊಂಟಿಗಳಾಗಿದ್ದಳು. ಸುತ್ತಲೂ ಕತ್ತಲೆ ಬಿದ್ದಿತ್ತು; ಅಲ್ಲದೆ ಆ ದಾರಿಯು ತೀರ ನಿರ್ಜನವಾಗಿದ್ದಿತು. ಮೇರಿಯು ಆ ಪುಂಡ ಜನರ ಮನೋಭಾವವನ್ನರಿತು ಮನಸ್ಸಿನಲ್ಲಿ ಹೆಚ್ಚಾಗಿ ಅಂಜಿದಳು; ಹಾಗು ಆ ದೊಡ್ಡ ದಾರಿಯನ್ನು ಬಿಟ್ಟು ಪಕ್ಕದ ಕಾಲುದಾರಿಯನ್ನು ಹಿಡಿದು ವೇಗದಿಂದ ನಡೆದಳು. ಸುದೈವದಿಂದ ಆ ಪುಂಡರ ತಂಡವು ಅವಳನ್ನನುಸರಿಸದೆ ಬೇರೆ ಕಡೆಗೆ ಸಾಗಿತು. ಅವಳು ಎಷ್ಟೋ ಒತ್ತರದಿಂದ ನಡೆದರೂ ಆ ದಾರಿಯು ತೀರಲಿಲ್ಲ; ಅವಳು ಹೋಗಬೇಕಾದ ಆ ಪಪ್ಪಲಿನ ಜೇಲೂ ಬರಲಿಲ್ಲ. ಕಡೆಗೆ ಅವಳು ಒತ್ತಟ್ಟಿಗೆ ನಿಂತುಕೊಂಡು ಯಾವನಾದರೂ ಪೋಲೀಸನ ದರ್ಶನವಾಗುವದೇನೆಂದು ಸುತ್ತಲೂ ನಿರೀಕ್ಷಿಸಿದಳು. ಆಗ ಅವಳಿಗೆ ಪೋಲೀಸ ಸಿಪಾಯಿಯ ಬದಲು ಆಜಾನುಬಾಹುವುಳ್ಳ ಕೆಂಪಡರಿದ ಕಣ್ಣಿನ ಚೀನಿಗನೊಬ್ಬನು ಕಾಣಿಸಿಕೊಂಡು, ದೂರ್ತ್ತಿಂದು ಬಂದು ಅವಳೆದುರಿಗೆ ನಿಂತುಕೊಂಡನು. ಆಗ ಅವನು ಯಾವ ಭಾಷೆಯಿಂದ ತನ್ನನ್ನು ಏನೆಂದು ಕೇಳುತ್ತಿರುವನೆಂಬದು ಕೂಡ ಮೇರಿಗೆ ತಿಳಿಯದಾಯಿತು. ಅವನನ್ನು ಕಂಡು ಹೆಚ್ಚಾಗಿ ಬೆದರಿದ ಮೇರಿಯು ಒತ್ತಟ್ಟಿಗಿನ ಗಲ್ಲಿಯೊಳಗೆ ಪ್ರವೇಶಿಸಲು, ಮತ್ತೊಬ್ಬ ಚೀನಿಗನು ಅಲ್ಲಿಗೆ ಬಂದು ಅವಳನ್ನು ಅಡ್ಡಗಟ್ಟಿ ನಿಂತುಕೊಂಡನು. ಈ ಎರಡನೇ ಚೀನಿಗನು ನವತರುಣನಾಗಿದ್ದನು. ಈತನ ಮುಖಚರ್ಯೆಯು ಸನ್ಮಾನ್ಯ ಸಭ್ಯಗೃಹಸ್ಥನಂತಿತ್ತು. ಈ ಯುವಕ ಚೀನಿಗನು ಮೇರಿಯನ್ನು ಕಂಡು ಮುಗುಳು ನಗೆ ನಕ್ಕು, ಅಚ್ಚ ಇಂಗ್ಲಿಷ ಭಾಷೆಯಿಂದ:—ಕುಮಾರಿಯವರು ಇತ್ತಕಡೆಗೆ ಯಾವ ಉದ್ದೇಶದಿಂದ ದಯಮಾಡಿಸಿರುತ್ತಾರೆಂಬದನ್ನು ತಿಳಿಸುವರೇನು? ಎಂದು ಬಹುಮಾನ ಪೂರ್ವಕವಾಗಿ ಪ್ರಶ್ನಮಾಡಿದನು.

ಭಯವಿಹ್ವಲಳಾದ ಮೇರಿಯು:—"ದಾರಿತಪ್ಪಿದ್ದರಿಂದ ನಾನಿತ್ತ ಬಂದಿರುತ್ತೇನೆ. ನಾನು ಪ್ರಯತ್ನಪೂರ್ವಕವಾಗಿ ನನ್ನ ದಾರಿಯನ್ನು ಗೊತ್ತುಮಾಡಿಕೊಳ್ಳುತ್ತೇನೆ. ನೀವು ತುಸ ಒತ್ತಟ್ಟಿಗೆ ಸರಿದು, ನನ್ನನ್ನು ಮುಂದಕ್ಕೆ ಹೋಗಗೊಡಿರಿ" ಎಂದ ನುಡಿಯನ್ನು ಕೇಳಿ, ಆ ಯುವಕನು ಮತ್ತೆ:—

"ಕುಮಾರಿಯವರೇ, ಭಯಪಡುವ ಕಾರಣವಿಲ್ಲ. ನಾನು ತಮ್ಮನ್ನು

ಹಿಡಿದುಕೊಂಡು ಹೋಗಬಂದಿಲ್ಲ; ತಾವು ಎಲ್ಲಿಗೆ ಹೋಗಬೇಕಾಗಿದೆ?"

"ನಾನು ಪಪ್ಪಲಿನ ಜೇಲಿಗೆ ಹೋಗಬೇಕು."

ತರುಣನು ಒಳ್ಳೇ ಆಶ್ಚರ್ಯಚಕಿತನಾಗಿ:—"ಪಪ್ಪಲಿನ ಜೇಲಿಗೇ! ಅದು ಇಲ್ಲಿಂದ ಅಷ್ಟೊಂದು ದೂರವಾಗಿಲ್ಲ. ನಡೆಯಿರಿ, ನಾನು ತಮ್ಮನ್ನು ಅಲ್ಲಿಯ ವರೆಗೆ ಕಳಿಸಿಬರುತ್ತೇನೆ. ಕುಮಾರಿಯವರೇ, ನಿಮಗೊಬ್ಬರಿಗೇ ಆ ಕಡೆಯ ದಾರಿಯು ಸಿಗಲಾರದು."

ಆ ಯುವಕನ ಆ ನುಡಿಯನ್ನು ಕೇಳಿ ಮೇರಿಯು ಮೊದಮೊದಲು ತುಸ ಗೊಂದಲದಲ್ಲಿ ಬಿದ್ದಳು. ಅದರಿಂದ ತಾನು ಈತನೊಡನೆ ಹೋಗಬೇಕೋ-ಹೋಗಬಾರದೋ ಎಂಬ ವಿಷಯವಾಗಿ ಸಂಶಯಗ್ರಸ್ತಳಾದಳು. ಕಡೆಗೆ ಅವಳು ಅನಿಚ್ಛೆಯಿಂದ, ತನ್ನ ಮನಸ್ಸಿನ ವಿರುದ್ಧವಾಗಿ:—"ನೀವು ನನ್ನನ್ನು ಆ ಪಪ್ಪಲಿನ ಜೇಲಿಗೇ ತಲುಪಿಸುವಿರಷ್ಟೇ? ನಾನು ಅಲ್ಲಿಗೆ ಬೇಗನೆ ಹೋಗಿ ಸೇರಬೇಕಾಗಿದೆ; ಈಗಾಗಲೆ ಹೆಚ್ಚು ರಾತ್ರಿಯಾದಂತಿದೆ," ಎನ್ನಲು,

"ಪಪ್ಪಲಿನೊಳಗಿನ ಜೇಲಿಗೇ ತಲುಪಿಸುತ್ತೇನೆ. ಇನ್ನು ನೀವು ಹೆಚ್ಚು ದೂರ ಕೂಡ ನಡೆಯಬೇಕಾಗಿಲ್ಲ; ನಡೆಯಿರಿ."

ಹೀಗೆಂದು ನುಡಿದು ಆ ತರುಣನು ಮುಂದಾಗಲು, ಮೇರಿಯೂ ಆತನ ಪಕ್ಕದಿಂದಲೇ ಆ ಅಪ್ರಶಸ್ತವಾದ ಗಲ್ಲಿಯೊಳಗಿಂದ ನಡೆದಳು. ಆ ಗಲ್ಲಿಯ ಎರಡೂ ಕಡೆಗಳಲ್ಲಿಯೂ ಜೇಸಿಗರ ಮನೆಗಳೇ ಇರುತ್ತಿರುವವೆಂಬುದನ್ನು ಮೇರಿಯು ತಿಳಿದಳು. ಹಲಕೆಲವು ಮನೆಗಳ ಬಾಗಿಲಲ್ಲಿ ನಿಂತುಕೊಂಡು ತನ್ನನ್ನು ಕೌತುಕ ಭರದಿಂದ ನೋಡುತ್ತಿರುವ ಕೆಲ ಜೇಸಿಗರನ್ನು ಅವಳು ಕಂಡಳು. ಅದನ್ನು ಕಂಡು ಮೇರಿಯ ಮನಸ್ಸು ಮತ್ತಿಷ್ಟು ಭಯ-ಸಂದೇಹಗಳಿಂದ ತ್ರಸ್ತವಾಯಿತು. ಅವಳು ಕೆಲ ದೂರ ನಡೆದ ಬಳಿಕ, ಈ ತರುಣನೊಡನೆ ಮುಂದೆ ಸಾಗಬೇಕೋ-ಬಾರದೋ ಎಂಬ ಬಗ್ಗೆ ಒತ್ತಟ್ಟಿಗೆ ನಿಂತು ಆಲೋಚಿಸ ಹತ್ತಿದ್ದಳು. ಅಷ್ಟರಲ್ಲಿ ಆ ತರುಣ ಜೇಸಿಗನು ಒಮ್ಮೆಲೆ ಟಣ್ಣನೆ ಜಿಗಿದು, ಅವಳನ್ನು ಹತ್ತಿಕ್ಕಿ ಹಿಡಿದು, ಒಂದು ಕೈಯಿಂದ ಅವಳ ಬಾಯಿಯನ್ನು ಒತ್ತಿ ಹಿಡಿದನು; ಹಾಗು ಅವಳನ್ನು ಜಗ್ಗುತ್ತ ಜಗ್ಗುತ್ತ ಸಮೀಪದಲ್ಲಿಯ ಒಂದು ಮನೆಯನ್ನು ಹೊಕ್ಕನು. ಮೇರಿಯು ಆತನ ಕವಳದೊಳಗಿಂದ ಪಾರಾಗುವದಕ್ಕೆಂದು ಹೆಚ್ಚಾಗಿ ಪ್ರಯತ್ನಿಸಿದಳು; ಆದರೆ ಆ ದುರ್ವೃತ್ತನು ಅವಳನ್ನು ಬಿಟ್ಟುಗೊಡಲಿಲ್ಲ. ಆ ಜೇಸಿಗನು ಅವಳ ಮೂಗು-ಬಾಯಿಗಳನ್ನು ಒತ್ತಿ ಹಿಡಿದು ಅವಳ ಶ್ವಾಸವನ್ನು ನಿರ್ಬಂಧಿಸಿದನು. ಒಂದೆರಡು ಸಾರೆ ಅವನ ಕೈಯೊಳಗಿಂದ ಬಿಡುಗಡೆ ಹೊಂದಲೆತ್ನಿಸಿದ ಮೇರಿಯು ನಿರುಪಾಯಳಾಗಿ, ಕಡೆಗೆ ಮೂರ್ಛೆಹೊಂದಿ

ಬಿದ್ದುಬಿಟ್ಟಳು. ಕೂಡಲೆ ಆ ಚೀನೀ ಯುವಕನು ಅವಳನ್ನು ತನ್ನ ಹೆಗಲ ಮೇಲೆ ಹೊತ್ತುಕೊಂಡು ದೀಪಜ್ಯೋತಿಗಳಿಂದ ಪ್ರಕಾಶಮಾನವಾದಂಥದೊಂದು ಕೋಣೆಯನ್ನು ಪ್ರವೇಶಿಸಿದನು.

+ + + +

ಮೇರಿಯು ಯಾವಾಗ ಮೂರ್ಛೆಯಿಂದ ತಿಳಿದೆದ್ದಳೋ ಆಗ ತನ್ನನ್ನು ಒಂದು ಚಿಕ್ಕಮನೆಯ ಮೂಲೆಯೊಳಗಿನ ಒಂದು ಕೋಚದ ಮೇಲೆ ಮಲಗಿಸಿರುವಂತೆ ಆಕೆಗೆ ತೋರಿತು. ಅವಳ ಬಾಯಿಯು ಹೆಚ್ಚಾಗಿ ಕಹಿಯಾಗಿತ್ತು. ಅದರಿಂದ ಯಾರೋ ತನ್ನ ಬಾಯಲ್ಲಿ ಯಾವುದಾದರೊಂದು ಕಹಿ ಔಷಧಿಯನ್ನು ಬಲಪೂರ್ವಕವಾಗಿ ಹೊಯ್ದಿರುವರೆಂದು ಗೊತ್ತಾಯಿತು; ಆದರೆ ಅದನ್ನು ಯಾರು ಹಾಗು ಯಾವಾಗ ಹುಯಿದರೆಂಬದನ್ನು ಅವಳು ಜ್ಞಾಪಿಸಿಕೊಳ್ಳಲಸಮರ್ಥಳಾದಳು. ತಾನು ಆಗ ಎಚ್ಚತ್ತಿದ್ದೇನೋ ಸ್ವಪ್ನಸ್ಥಳಾಗಿದ್ದೇನೋ ಎಂಬದನ್ನು ಕೂಡ ಅವಳು ನೆನಿಸಿಕೊಳ್ಳಲಾರದಾಗಿದ್ದಳು. ಅವಳ ಮೂರ್ಛೆಯು ಇನ್ನೂ ಸಂಪೂರ್ಣವಾಗಿ ತಿಳಿದಿರಲಿಲ್ಲ. ಅವಳ ಎರಡೂ ಪಕ್ಕಗಳಲ್ಲಿ ಇಬ್ಬರು ಚೀನಿಗರು ಸ್ತಬ್ಧವಾಗಿ ನಿಂತುಕೊಂಡಿದ್ದರು. ಅವರ ವೇಷಭೂಷಣಗಳೆಲ್ಲ ಅಚ್ಚ ಚೀನೀಯರಂತಿದ್ದವು. ಪ್ರತಿಯೊಬ್ಬರ ತಲೆಯ ಮೇಲೂ ಉದ್ದವಾದ ಹೆಳಲಿದ್ದಿತು. ಮೇರಿಯ ಎದುರಿನಲ್ಲಿ ಎರಡೇ ಮೊಳಗಳ ಅಂತರದ ಮೇಲೆ ಕರಿಮರದಿಂದ ಮಾಡಿದ ಒಂದು ಅದ್ಭುತಾಕಾರದ ಕುರ್ಚಿಯ ಮೇಲೆ ಒಬ್ಬ ಗೃಹಸ್ಥನು ಕುಳಿತಿದ್ದನು. ಆ ಗೃಹಸ್ಥನು ಚಿಕ್ಕಪ್ರಾಯದವನಾಗಿದ್ದನು. ಆತನ ವೇಷಭೂಷಣಗಳು ಒಳ್ಳೇ ರೀತಿಯವಾಗಿದ್ದವು. ಆಗ್ಗೆ ಆತನು ಅಚ್ಚ ಕೆಂಪು ಬಣ್ಣದ ರೇಶ್ಮಿಯ ಉಡುಪನ್ನು ಧರಿಸಿದ್ದನು. ಆತನ ಶಿರಸ್ತ್ರಾಣದ ಮೇಲೆ ಒಂದು ಉಜ್ವಲವಾದ ರತ್ನವು ಝುಕ್‌ಪಕ್ಕೆಂದು ಹೊಳೆಯುತಲಿತ್ತು. ಆತನು ಸುಂದರನಿದ್ದು, ಚೀನೀಯರಿಗಿಂತ ಉಜ್ವಲವರ್ಣದವನಾಗಿದ್ದನು.

ಆ ಕೋಣೆಯೊಳಗೊಂದು ವಿದ್ಯುದ್ದೀಪವು ಬೆಳಗುತ್ತಿತ್ತು. ಕೋಣೆಯ ನೆಲಕ್ಕೆಲ್ಲ ಬಹು ಮೂಲ್ಯವಾದ ರತ್ನಗಂಬಳಿಯು ಹಾಸಲ್ಪಟ್ಟಿತ್ತು. ಗೋಡೆಗಳ ಮೇಲಿನ ಕರಿಯಬಣ್ಣದ ಪರದೆಯಮೇಲೆ ಕೆಂಪು ಬಣ್ಣದ ಚಿತ್ರಗಳು ಚಿತ್ರಿಸಲ್ಪಟ್ಟಿದ್ದವು. ಅವುಗಳಲ್ಲಿ ಭೂತಪಿಶಾಚಿಗಳ, ದೈತ್ಯರಾಕ್ಷಸರ ಗೊಂಬೆಗಳೇ ಹೆಚ್ಚು. ಆ ಕೋಣೆಯ ಒಂದುಕಡೆಯ ಅಗ್ನಿಷ್ಟಿಗೆಯಲ್ಲಿ ಧೂಪವೋ ಅಗರವೋ ಅಥವಾ ಮತ್ತಾವ ಸುಗಂಧ ದ್ರವ್ಯವೋ ಹೊತ್ತಿಕೊಂಡು, ಆ ಕೋಣೆಯನ್ನೆಲ್ಲ ಸುಗಂಧಪೂರ್ಣವನ್ನಾಗ ಮಾಡಿತ್ತು. ಆ ಕೋಣೆಯ ಮಗ್ಗಲಿಗೇ ಮತ್ತೊಂದು ಚಿಕ್ಕ ಮನೆಯಿದ್ದಿತು. ಅವೆರಡರ ನಡುವಿನ ಸೂಕ್ಷ್ಮ ಅರಿವೆಯು

ಪರದೆಯ ಮೂಲಕ ಆಚೆಯ ಕೋಣೆಯು ಸ್ಪಷ್ಟವಾಗಿ ಕಾಣಿಸುತ್ತಿತ್ತು. ಆ ಪರದೆಯ ವಿಶುದ್ಧ ಸ್ವರ್ಣ ವರ್ಣದ ಮೂಲಕ ಆಚೆಗಿನ ಪದಾರ್ಥಗಳೆಲ್ಲ ಕಾದ ಬಂಗಾರದಂತೆ ಒಳ್ಳೇ ಹೊಳಪಾಗಿ ತೋರುತ್ತಿದ್ದವು.

ಮೇರಿಯು ಕೆಲ ನಿಮಿಷಗಳಲ್ಲೇ ಹುಷಾರಿಯಾಗಲು, ತನಗೆ ಪ್ರಾಪ್ತವಾದ ಸಂಕಟದ ಸಂಗತಿಯು ನೆನಪಿಗೆ ಬಂದಿತು; ಕೂಡಲೆ ಅವಳು ತಟ್ಟನೆ ಎದ್ದು ನಿಂತಳು; ಆದರೆ ಭಯದಿಂದ ಹೆಚ್ಚಾದ ನಡುಗು ಹುಟ್ಟಲು, ಆ ಕೂಡಲೆ ಅವಳು ಮತ್ತೆ ಸ್ವಸ್ಥಾನಾಧಿಷ್ಠಿತಳಾದಳು. ಅವಳ ಹೃದಯವು ಚಳಚಳನೆ ನಡುಗಿತು. ಮೇರಿಯು ಹೆಚ್ಚಾಗಿ ಗಾಬರಿಗೊಂಡಿರುವದನ್ನು ಅರಿತು, ಆಕೆಯ ಎದುರಿಗೆ ಕುಳಿತಿದ್ದ ಆ ಚೀನಿಗನು ಶುದ್ಧವಾದ ಇಂಗ್ಲಿಷಿನಲ್ಲಿ:—"ಕುಮಾರಿಯವರೇ, ನೀವು ಅಂಜಬೇಡಿರಿ. ನಾನು ನಿಮಗಾವ ತೊಂದರೆಯನ್ನೂ ಕೊಡುವದಿಲ್ಲ." ಎಂದು ಹೇಳಿದನು.

ಹಾಗೆಂದು ಹೇಳುವವನನ್ನು ಮೇರಿಯು ಒಮ್ಮೆ ದಿಟ್ಟಿಸಿ ನೋಡಿದಳು ಮಾತ್ರ. ಆದರೆ ಆತನ ಮಾತಿನಲ್ಲಿ ಅವಳಿಗೆ ನಂಬಿಗೆ ಹುಟ್ಟಲಿಲ್ಲ. ಆತನ ವಾಣಿಯಲ್ಲಿ ಕರ್ಕಶತೆಯು ಕೊಂಚವೂ; ಇರದಿದ್ದರೂ, ಆತನ ದುಂಡು ದುಂಡನ್ನ ಕಣ್ಣುಗಳೊಳಗಿಂದ ಕ್ರೌರ್ಯವೂ ತಿರಸ್ಕಾರವೂ ಭರದಿಂದ ಹೊರಚಿಮ್ಮುತ್ತಿರುವಂತೆ ಭಾಸವಾಗುತಲಿತ್ತು.

ಆ ಯುವಕನು ಕ್ಷಣಕಾಲವೇ ನಿಸ್ತಬ್ಧನಾಗಿದ್ದು ನಂತರ ಮತ್ತೆ:—"ನಿಜವಾಗಿಯೂ ಇಲ್ಲಿ ನೀವು ಕೊಂಚವೂ ಅಂಜುವ ಕಾರಣವಿಲ್ಲ. ದಾರಿ ತಪ್ಪಿದ ಹಾಗೂ ಸಂಕಟಕ್ಕೀಡಾದ ನಿಮ್ಮನ್ನು ನಮ್ಮ ಅನುಚರರು ಸದಯದಿಂದಲೇ ಇಲ್ಲಿಗೆ ಕರೆತಂದಿರುತ್ತಾರೆ"

ಈ ಸಾರೆ ಮೇರಿಯಿಂದ ಸುಮ್ಮನೆ ಕೂಡ್ರುವದಾಗಲಿಲ್ಲ. ಅದರಿಂದ ಅವಳು:—ಅಹುದು; ಕರೆತಂದದ್ದೇನೋ ನಿಜ; ಆದರೆ ಅವರು ಸಭ್ಯ ಗೃಹಸ್ಥರಂತೆ ನನ್ನನ್ನು ಕರೆತಂದಿರುವರೇನು? ಅವರು ನನ್ನನ್ನು ಆಕಸ್ಮಿಕವಾಗಿ ಆಕ್ರಮಿಸಿ, ನನ್ನ ಮೂಗು-ಬಾಯಿಗಳನ್ನು ಒತ್ತಿ ಹಿಡಿದು, ಇಲ್ಲಿಗೆ ಒರುವ ಇಚ್ಛೆಯು ನನಗಿರದಿದ್ದರೂ ನನ್ನನ್ನು ಎಳಕೊಂಡು ಬಂದಿರುತ್ತಾರೆ. ವಿಪದ್ಗ್ರಸ್ತರಾದ ಹೆಣ್ಣುಮಕ್ಕಳಿಗೆ ಆಶ್ರಯುವಿಯುವದಿದೊಂದು ಹೊಸ ಪದ್ಧತಿಯೇ ಅಲ್ಲವೇ?" ಎಂದು ಕೇಳಲು,

"ಆದರೆ ಕುಮಾರಿಯವರೇ, ನಮ್ಮ ಆ ಸೇವಕರ ಉದ್ದೇಶವು ಕೆಟ್ಟದಿರಲಿಲ್ಲ. ಅವರು ನಿಮ್ಮ ಕಲ್ಯಾಣಕ್ಕಾಗಿಯೇ ಹಾಗೆ ಮಾಡಿರುತ್ತಾರೆ. ಈ ಹಳ್ಳಿಯಲ್ಲೆಲ್ಲ ಬದ್‌ಮಾಷ ಜನರ ವಸತಿಯೇ ಹೆಚ್ಚಾಗಿದೆ. ಅಲ್ಲದೆ, ನಿಮ್ಮನ್ನು ಕೆಲ

ಪುಂಡ ಜನರು ಅನುಸರಣ ಮಾಡಿ ಬರುತ್ತಿದ್ದರು. ನೀವು ಅವರ ಕೈಯಲ್ಲಿ ಸಿಕ್ಕಿದ್ದರೆ ನಿಮ್ಮ ಲಾಂಛನಕ್ಕೆ ಮೇರೆಯುಳಿಯಲಿಕ್ಕಿಲ್ಲೆಂದು ಭಾವಿಸಿಯೇ ನನ್ನ ಸೇವಕನಾದ ಸೆಂಗಚಂಗನು ನಿಮ್ಮನ್ನು ಎಳೆಕೊಂಡು ಬಂದು, ಈ ಕೋಣೆ ಯಲ್ಲಿ ಸೇರಿಸಿದನು. ಅವನು ಅತ್ಯವಸರದಿಂದ ಬಾಗಿಲವನ್ನಿಕ್ಕಿಕೊಳ್ಳದಿದ್ದರೆ, ನಿಮ್ಮನ್ನು ಆ ತುಂಟರ ತಂಡದಿಂದ ಸಂರಕ್ಷಿಸುವದು ಅಸಾಧ್ಯವಾಗುತ್ತಿತ್ತು"

"ಹಾಗಿದ್ದರೆ ನನ್ನಸ್ನಾವರಿಸಿದ್ದ ಆ ಸಂಕಟದ ವಿಷಯವಾಗಿ ಆತನು ನನಗೇಕೆ ಎಚ್ಚರಗೊಡಲಿಲ್ಲ? ಅಲ್ಲದೆ ಆಗಿನ ಆತನ ಆಚರಣೆಯು ತೀರ ದುರ್ವೃತ್ತನಂತಿತ್ತು."

"ಏನೇ ಆಗಿರಲಿ, ಆತನ ಉದ್ದೇಶವಂತೂ ಕೆಟ್ಟದಿರಲಿಲ್ಲ. ನಿಮ್ಮ ಕಲ್ಯಾಣಕ್ಕಾಗಿಯೇ ಆತನು ಹಾಗೆ ವರ್ತಿಸಿರುವನೆಂದು ಹೇಳುವ ನನ್ನ ಮಾ-ತನ್ನು ನೀವು ನಂಬಬಹುದಾಗಿದೆ"

"ಪುಂಡನೊಬ್ಬನು ನನ್ನನ್ನು ಅನುಸರಿಸಿದ್ದುದೇನೋ ನಿಜವು; ಆದರೆ ನಿಮ್ಮ ಆಳು ನನ್ನ ಕಲ್ಯಾಣಕ್ಕೆಂದು ನನ್ನ ಕುತ್ತಿಗೆ ಹಿಚುಕಿ, ಮೂರ್ಛೆಗೊಳಿಸಿ, ನನ್ನನ್ನು ಸೆರೆಹಿಡಿದು ತಂದಿರುತ್ತಾನಾದ್ದರಿಂದ ನಾನು ನಿಮ್ಮ ಯಾವ ಮಾತನ್ನೂ ನಂಬಲಾರೆನು."

ಆಗ ಆ ಯುವಕನು ಮುಗುಳು ನಗೆ ನಕ್ಕು:—ನಾನಂತೂ ಸತ್ಯವನ್ನೇ ನಿಮ್ಮೆದುರಿಗೆ ಹೇಳಿರುತ್ತೇನೆ. ಏನೇ ಇರಲಿ, ನಾನು ನಿಮ್ಮೊಡನೆ ವಾದ ವಿವಾದ ಬೆಳಿಸಲಿಚ್ಛಿಸುವದಿಲ್ಲ. ನೀವು ಪಪ್ಪಲಿನೊಳಗಿನ ಜೇಲಿಗೆ ಹೋಗಬೇಕಾಗಿದೆ ಯೆಂಬದನ್ನು ನಾನು ನನ್ನ ಭೃತ್ಯನ ಮೂಲಕ ತಿಳಿದಿರುತ್ತೇನೆ. ಈ ಮಾತಂತೂ ನಿಜವಷ್ಟೇ?

ಮೇರಿಯು ಹೇಳುತ್ತಾಳೆ. "ಅಹುದು ನಾನು ಪಪ್ಪಲಿನ ಜೇಲಿಗೇ ನಡೆದಿದ್ದೆನು; ಆದರೆ ನಡುವೆ ದಾರಿ ತಪ್ಪಿದ್ದರಿಂದ ಮಹಾ ಸಂಕಟದಲ್ಲಿ ಸಿಲುಕ ಬೇಕಾಯಿತು. ನಿಮ್ಮ ಸೇವಕನು ನನ್ನನ್ನು ಅಲ್ಲಿಗೆ ಕಳಿಸುತ್ತೇನೆಂದು ಹೇಳಿದ್ದ ರಿಂದಲೇ ನಾನು ಆ ಮಾತನ್ನು ನಂಬಿ, ಅವನೊಡನೆ ಅತ್ತ ಸಾಗಿದ್ದೆನು."

ಯುವಕ:—ನೀವು ಪಪ್ಪಲಿನೊಳಗಿನ ಆ ಜೇಲಿಗೇತಕ್ಕೆ ಹೋಗುವದು?

ಮೇರಿ:—ನಮ್ಮ ಒಬ್ಬ ಆಪ್ತನ ಭೆಟ್ಟಿಗೆಂದು ಅಲ್ಲಿಗೆ ಹೋಗಬೇಕಾಗಿದೆ.

ಯುವಕ:—ಆತನ ಹೆಸರೇನು?

ಮೇರಿ:—ರಿಚರ್ಡ ಡೆಭೆನಟ. ಆತನು ಪಪ್ಪಲಿನ ಜೇಲಿನ ಇನ್ಸಪೇಕ್ಟ ರನ ಮಗನು.

ಮೇರಿಯ ಆ ಉತ್ತರವನ್ನು ಕೇಳಿ ಆ ಚೀನೀಯ ಯುವಕನ ಕಣ್ಣುಗಳು

ಕ್ರೋಧ ಸಂತಾಪದಿಂದ ಕಿಡಿಗಳನ್ನುದುರಿಸಹತ್ತಿದವು; ಆದರೆ ಅಲ್ಪಾವಕಾಶದಲ್ಲಿಯೇ ಬಹು ಕಷ್ಟದಿಂದ ಅವನು ಆತ್ಮಸಂಯಮನ ಮಾಡಿ, ಸುಮ್ಮನೆ ತಲೆ ತಗ್ಗಿಸಿಕೊಂಡು ಕುಳಿತನು. ಆತನ ಮುಖಭಾವವನ್ನು ನೋಡಲು, ಅವನು ಕಡು ಚಿಂತೆಗೊಳಗಾಗಿರುವಂತೆ ಕಾಣುತ್ತಿತ್ತು.

ನಾಲ್ಕಾರು ನಿಮಿಷಗಳಲ್ಲೇ ಅವನು ತನ್ನ ಮೋರೆಯನ್ನೆತ್ತಿ ತೀಕ್ಷ್ಣದೃಷ್ಟಿಯಿಂದ ಮೇರಿಯ ಮುಖದ ಕಡೆಗೆ ನೋಡುತ್ತ:—ಕುಮಾರಿಯವರೇ, ನಿಮ್ಮ ಹೆಸರೇನು?

"ನನ್ನ ಹೆಸರು ಮೇರಿ ವೆಭಾನಳೆಂದಿದೆ"

"ನಿಮ್ಮ ವಾಸಸ್ಥಳವು ಈ ಲಂಡನ್ನಿನಲ್ಲಿಯೇ ಇರುವದೇನು?"

"ಇಲ್ಲ. ನಾನು ಹಳ್ಳಿಗಾಡಿನವಳು. ಸಮರಶೆಟ್ ಜಿಲ್ಲೆಯಲ್ಲಿ ನಮ್ಮ ಮನೆಯಿದೆ. ಅಲ್ಲಿಂದ ಇಂದೇ ಈ ರಾಜಧಾನಿಗೆ ಬಂದಿರುತ್ತೇನೆ."

"ಯಾವ ಉದ್ದೇಶಕ್ಕೆಂದು ನೀವ ಈ ಲಂಡನ್ನಿಗೆ ಬಂದಿರುತ್ತೀರಿ?"

"ನಾನು ನನ್ನ ತಂದೆಯೊಡನೆ ಜಗಳಾಡಿ ಅವನಿಗೆ ತಿಳಿಯದಂತೆ ಇಲ್ಲಿಗೆ ಓಡಿ ಬಂದಿದ್ದೇನೆ. ನನಗೆ ಆ ಹಾಳು ಹಳ್ಳಿವಾಸವು ಬೇಸರವಾಗಿದೆ. ಬಹು ದಿನಗಳಿಂದ ನಾನು ಈ ಲಂಡನ್ನ ಪಟ್ಟಣಕ್ಕೆ ಬಂದು ವಾಸವಾಗಿರಬೇಕೆಂದು ಬಯಸುತ್ತಿದ್ದೆನು. ರಿಚರ್ಡ ಡೆಭಿನಟನು ನನಗೆ ಯಾವುದೊಂದು ಕೆಲಸ ಹಚ್ಚಿಕೊಟ್ಟಾನೆಂಬ ಭರವಸೆಯಿಂದ ನಾನು ಅವನನ್ನು ಕಾಣುಕ್ಕೆಂದು ಇಂದು ಆತನೆಡೆಗೆ ಹೊರಟಿರುತ್ತೇನೆ."

"ನೀವು ಆತನನ್ನು ನಂಬಿಯೇ ಈ ಪಟ್ಟಣಕ್ಕೆ ಬಂದಿರುವಿರಷ್ಟೇ?"

"ಛೀ ಛೀ, ಆತನು ನನಗೆ ದೂರನ ಆಪ್ತನಾಗಬೇಕಾದುದೇನೋ ನಿಜ; ಆದರೆ ಆತನ ನನ್ನ ಸಂಬಂಧವು ಅಷ್ಟರಮಟ್ಟಿಗೆಯೇ ಹೊರತು, ವಿಶೇಷವಿಲ್ಲ"

"ದಿಟವಾದುದನ್ನು ಹೇಳಿರಿ ನೀವು ಪರಸ್ಪರರನ್ನು ಪ್ರೀತಿಸುತ್ತಿಲ್ಲವೇ?"

"ಏನೆಂಬದನ್ನು ಈ ಮೊದಲು ತಿಳಿಸಿಯೇ ಬಿಟ್ಟಿರುವೆನು. ಮತ್ತೇನೂ ಇಲ್ಲ; ಆದರೆ ನೀವು ಇದೆಲ್ಲವನ್ನು ಇಷ್ಟು ಸೂಕ್ಷ್ಮವಾಗಿ ಕೇಳುವ ಕಾರಣವೇನು? ನೀನು ವಿದೇಶೀಯ ಮನುಷ್ಯನು. ನಮ್ಮ ಮನೆತನದ ಸಂಗತಿಗಳನ್ನು ತಿಳಿಯುವ ಬಗ್ಗೆ ನಿನ್ನ ಆಗ್ರಹವಿಷ್ಟೇಕೆ? ಒಂದು ವೇಳೆ ನಾನು ನಿಜವಾಗಿಯೇ ಆ ರಿಚರ್ಡ ಡೆಭಿನಟನನ್ನು ಪ್ರೀತಿಸುತ್ತಿದ್ದರೆ ಅದನ್ನು ಕೇಳಿ ನಿನಗೆ ಯಾವ ಲಾಭ-ಹಾನಿಗಳಾಗಬೇಕಾಗಿವೆ?"

ಯುವಕನು ಬಹಳೇ ಉತ್ಸುಕತೆಯಿಂದ:—ನೀನು ಅವನನ್ನು ಇಷ್ಟು ಮೇಲು

ಗಟ್ಟುತ್ತಿರುವದರಿಂದ ನಿನ್ನಲ್ಲಿ ಅವನ ವಿಷಯದ ಪ್ರೇಮವು ಮನೆ ಮಾಡಿರಲಿಕ್ಕೇ ಬೇಕು. ಕುಮಾರೀ, ನೀನು ಅವನನ್ನು ನಿಜವಾಗಿಯೂ ಪ್ರೀತಿಸುತ್ತೀಯೇನು? ದಿಟವಾದುದನ್ನು ನುಡಿಯಬಾರದೇ?

"ನಾನು ಅವನ ಪಕ್ಷದವಳೆಂದೇ ತಿಳಿ; ಆದರೆ-ಆದರೆ........ ..."

ಆ ಯುವಕನು ಅವಳಿಗೆ ಮತ್ತೇನೂ ಹೇಳದೆ, ತನ್ನ ಅನುಚರರಿರ್ವರನ್ನು ಕುರಿತು:— "ಈ ತರುಣಿಯನ್ನು ಸಾವಧಾನದಿಂದ ಹಿಡಿಯಿರಿ; ಆದರೆ ಇವಳಿಗೆ ಕೊಂಚವೂ ಅನಿಷ್ಟವಾಗಲಿ ಅಪಮಾನವಾಗಲಿ ಆಗದಂತೆ ದಕ್ಷತೆ ವಹಿಸಿರಿ. ಇವಳ ಕೂದಲಿಗೆ ಕೂಡ ಧಕ್ಕೆ ಹತ್ತದಂತೆ ಎಚ್ಚರ ಪಡಿರಿ" ಎಂದು ಹೇಳಿದನು.

ಅದನ್ನು ಕೇಳಿ ಮೇರಿಯು ಕಾತರ ದನಿಯಿಂದ:—"ನನ್ನನ್ನು ಬಿಟ್ಟು ಬಿಡಿರಿ. ನಾನು ಹೊರಟು ಹೋಗುತ್ತೇನೆ. ನನ್ನ ಕಲ್ಯಾಣಕ್ಕಾಗಿ ನೀವುಗಳು ಅಷ್ಟೊಂದು ತೊಂದರೆ ವಹಿಸುವ ಕಾರಣವಿಲ್ಲ. ನನ್ನನ್ನು ಬೇಗನೆ ಹೋಗಗೊಡಿರಿ" ಎಂದು ಕೇಳುತ್ತಿರಲು, ಒಬ್ಬ ಅನುಚರನು ಆ ಕೂಡಲೆ ಅವಳ ಬಾಯಿಯನ್ನೊತ್ತಿ ಹಿಡಿದನು, ಇನ್ನೊಬ್ಬನು ಅವಳ ಕೈ ಹಿಡಿದು ಎಳೆದೊಯ್ಯಲಾರಂಭಿಸಿದನು. ಮೇರಿಯು ಆ ಅವಸ್ಥೆಯಲ್ಲಿ ಮತ್ತೆ ಮೂರ್ಛಿತಳಾಗಿ ಬಿದ್ದಳು!

---

೭ನೇ ತೆರೆ

## ರಹಸ್ಯದ ಪೂರ್ವ ವೃತ್ತವು.




ಡನ್ನ ಪಟ್ಟಣದ ಪೂರ್ವ ಭಾಗದಲ್ಲಿ ಲಂಡನ್ನ ಪ್ರವಾಸಿಗಳಾದ ಚೀನೀ ಜನರ ಹಳ್ಳಿಯು "ಚಾಯನಾ ಫೀಲ್ಡ" ಎಂಬ ಹೆಸರಿನಿಂದ ಪ್ರಸಿದ್ಧವಾಗಿರುತ್ತದೆ. ಮುಂಬಯಿಯ ಒಂದು ವಿಶಿಷ್ಟ ಓಣಿಯಲ್ಲಿಯೂ, ಮದ್ರಾಸ-ಕಲಕತ್ತೆಗಳ ಒಂದೊಂದು ಸ್ಟ್ರೀಟುಗಳಲ್ಲಿಯೂ ಚೀನೀ ಜನರ ವಸತಿಯು ಹೇಗೆ ಪ್ರತ್ಯೇಕವಾಗಿರುವದೋ, ಅದರಂತೆಯೇ ಲಂಡನ್ನಿನೊಳಗಿನ ಆ ಚಾಯನಾ ಫೀಲ್ಡಿನಲ್ಲಿ ಚೀನಿಗರ ವಸತಿಯೇ ಹೆಚ್ಚಾಗಿರುತ್ತದೆ. ಆ ಚಾಯನಾ ಫೀಲ್ಡನ್ನು ಪ್ರವೇಶಿಸಿದೊಡನೆ ಅದೊಂದು ಚೀನದೊಳಗಿನ ಪ್ರಖ್ಯಾತ ಪಟ್ಟಣವೇನೋ ಎಂಬಂತೆ ಭಾಸವಾಗುತ್ತದೆ.

ಒಂದು ದಿನ ಸಂಜೆಯ ಮುಂದೆ ಆ ಚೀನಿಗರ ಹಳ್ಳಿಯಲ್ಲಿ ಬಂದೂಕಿನ ಗಂಭೀರವಾದ 'ಧುಡುಂ' ಎಂಬ ಸಪ್ಪಳವು ನಿನಾದಗೊಂಡಿತು. ಪರಕ್ಷಣದಲ್ಲಿಯೇ ಒಬ್ಬ ಮನುಷ್ಯನು ಓಡುತ್ತೋಡುತ್ತ ಕೆಟ್ಟ ದನಿಯಿಂದ ಕೂಗಿದ

ವನೇ ದೊಪ್ಪನೆ ನೆಲಕ್ಕೆ ಬಿದ್ದುಬಿಟ್ಟನು. ಒಬ್ಬ ತರುಣನು ಆತನ ಎದುರಿಗೇ ಇದ್ದನು. ಆತನು ಧಾವಿಸಿ ಬಂದು ನೆಲಕ್ಕೆ ಬಿದ್ದವನ ಬಳಿಯಲ್ಲಿ ನಿಂತು, ಕೈಯೊಳಗಿನ ಪಿಸ್ತೂಲನ್ನು ತೆಗೆದಿರಿಸಿಕೊಂಡು, ಆತನನ್ನು ಕುರಿತು:-ಒಡೆಯರೇ, ತಾವು ಗಾಯ ಹೊಂದಿದಿರೇನು? ಎಂದು ಪ್ರಶ್ನೆ ಮಾಡಿದನು.

ಗಾಯಗೊಂಡ ಮನುಷ್ಯನು ತನ್ನ ಕೈಯ ಮೇಲೆ ಭಾರವನ್ನು ಹಾಕಿ, ಎದ್ದೇಳಲು ಪ್ರಯತ್ನಿಸಿದನು, ಆದರೆ ಏಳಲಾರದೆ ಅವನು ಮತ್ತೆ ಬಿದ್ದುಕೊಂಡು ಅಸ್ಫುಟ ದನಿಯಿಂದ:—"ಅಹುದು, ಗಾಯಪಟ್ಟಿರುತ್ತೇನೆ; ಆದರೆ ಗಾಯವು ಪ್ರಾಣಾಂತಿಕವಾಗಿಲ್ಲ. ಗುಂಡು ಮೈಗೆ ಸವರಿಕೊಂಡು ಹೋಗಿದೆಯಷ್ಟೇ. ಶರೀರಕ್ಕೆ ಅದರ ಝಳವು ಮಾತ್ರ ಹತ್ತಿರುತ್ತದೆ; ಆದರೆ ಗುಂಡು ಬರುವಾಗ್ಗೆ ಅದನ್ನು ತಪ್ಪಿಸಲಿಕ್ಕೆ ಹೋಗಿ ನೆಲಕ್ಕೆ ಬಿದ್ದದ್ದರಿಂದ ತಲೆಗೆ ಹೆಚ್ಚಾಗಿ ಪೆಟ್ಟಾಗಿರುತ್ತದೆ. ತಲೆಯು ಗೋಡೆಗೆ ತಾಕಿದ್ದರಿಂದ ಬಹು ನೋಯುತ್ತದೆ. ಆದರೂ ಅಲ್ಪಾವಕಾಶದಲ್ಲಿಯೇ ಎದ್ದೇಳಬಹುದಂದೆನಿಸುತ್ತದೆ"

ಅಂದು ಅಲ್ಲಿ ಹಾಗೆ ಗಾಯಪಟ್ಟ ಮನುಷ್ಯನು ಸುಪ್ರಸಿದ್ಧ ಪತ್ತೇದಾರನಾದ ರಾಬರ್ಟ್ ಬ್ಲೇಕನು; ಮತ್ತು ಆತನ ಬಳಿಯಲ್ಲಿ ಮಾತಾಡುತ್ತ ನಿಂತಿದ್ದ ತರುಣ ವ್ಯಕ್ತಿಯು ಆತನ ಅನುಚರನಾದ ಸ್ಮಿತ್ಥನು. ತಾಯಿ-ತಂದಗಳಿಲ್ಲದ ಆ ಅನಾಥ ಸ್ಮಿತ್ಥನಿಗೆ ಬ್ಲೇಕನು ತನ್ನಲ್ಲಿ ಆಶ್ರಯಪಿತ್ತು, ಆತನನ್ನು ತನ್ನ ಸಹಕಾರಿ ವರ್ಗಕ್ಕೆ ಸೇರಿಸಿಕೊಂಡಿದ್ದನು.

ಒಳಿಕ ಸ್ಮಿತ್ಥನು ಹೇಳುತ್ತಾನೆ:-ಒಡೆಯರೇ, ನಾನು ನಿಮ್ಮ ಕೈ ಹಿಡಿದುಕೊಂಡು ಕರೆದೊಯ್ಯುತ್ತೇನೆ, ನಡೆಯಿರಿ. ಬೇಗನೆ ಸುರಕ್ಷಿತ ಸ್ಥಳಕ್ಕೆ ತಲುಪದಿದ್ದರೆ ನಾವು ಮಹಾ ಸಂಕಟಕ್ಕೀಡಾಗದಿರಲಾರೆವು.

"ಸ್ಮಿತ್ಥಾ, ಇಲ್ಲಿಂದ ಅಷ್ಟು ಅವಸರದಿಂದ ಹೊರಟು ಹೋಗುವದು ಪ್ರಶಸ್ತವಾಗಿ ತೋರುವದಿಲ್ಲ. ಆ ನೀಚ ಪುಂಡರು ನಮ್ಮನ್ನು ಇನ್ನೂ ಅನುಸರಿಸಬಹುದೇನು?"

"ಒಡೆಯರೇ, ಹಾಗಿಲ್ಲ; ಆದರೆ ಅವರು ಎಲ್ಲಿಯೋ ಅಡಗಿಕೊಂಡು ನಿಂತಿರಬಹುದಾಗಿದೆ"

"ಅವರು ತಮ್ಮ ಗುಂಡಿನಿಂದಲೇ ನನ್ನ ಇತಿಶ್ರೀಯಾಗಿದೆಯೆಂದು ತಿಳಿದಿರುತ್ತಾರೆ. ತಮ್ಮ ಕರ್ತವ್ಯಕರ್ಮವು ಪೂರೈಸಿತೆಂದು ಭಾವಿಸಿ, ಅವರು ನಮ್ಮನ್ನು ಅನುಸರಿಸದೆ ಹೊರಟು ಹೋಗಿರಬಹುದು. ಇಂಥ ದುಷ್ಟ ಕೆಲಸಕ್ಕೆ ಪ್ರವೃತ್ತರಾದವರು ನಮಗೆ ಅಂಜಿ ಅಡಗಿಕೊಳ್ಳುವದು ಅಸಂಭವವೇ ಸರಿ. ನಾನು ಇನ್ನೂ ಕೆಲ ಕ್ಷಣಗಳ ವರೆಗೆ ಇಲ್ಲಿಯೇ ಬಿದ್ದಿರುತ್ತೇನೆ"

ಸ್ಮಿತ್ಥ:—"ಹಾಗಾದರೆ, ನಮಗೆ ಯಾರದಾದರೂ ಸಹಾಯವು ದೊರೆಯ ಬಹುದೋ ಹೇಗೆಂಬದನ್ನು ಪರೀಕ್ಷಿಸೋಣ" ಎಂದೆಂದು ಜೇಬಿನೊಳಗಿನ ಪೋ. ಲೀಸ ಕೊಳಲನ್ನು ತೆಗೆದು ಊದಿದನು. ಪ್ರತಿ ಕ್ಷಣದಲ್ಲಿಯೇ ಬೇರೆ ಕಡೆ ಯಿಂದ ಅಂಥ ಕೊಳಲಿನ ಧ್ವನಿಯು ಕೇಳಿಸಿತು. ಸ್ಮಿತ್ಥನು ಮತ್ತೊಮ್ಮೆ ಸೀಟಿಯನ್ನು ಕೊಟ್ಟು, ಬ್ಲೇಕನ ತಲೆ ಹಿಡಿದು ಎಬ್ಬಿಸಿದನು, ಹಾಗೂ ಆತನ ಕೈ ಹಿಡಿದುಕೊಂಡು ಒಂದು ಗಲ್ಲಿಯ ಮುಖಕ್ಕೆ ಬಂದು ನಿಂತುಕೊಂಡನು. ಆಗ ಆತನು ಬ್ಲೇಕನನ್ನು ಕುರಿತು:- ಪೋಲಿಸರು ಧ್ವನಿಗೊಟ್ಟಿರುತ್ತಾರೆ. ಇಷ್ಟರೊಳಗೆ ಅವರು ಇಲ್ಲಿಗೇ ಬರಬಹುದಾಗಿದೆ, ಎಂದು ತಿಳಿಸಿದನು.

ಆದು ವರೆಗೂ ಬ್ಲೇಕನಿಗೂ-ಸ್ಮಿತ್ಥನಿಗೂ ಜೀವದಾಶೆ ಇರಲಿಲ್ಲವು. ತಮ್ಮನ್ನು ನಾಲ್ಕು ಕಡೆಯಿಂದಲೂ ವೈರಿದಲವು ಸುತ್ತಿಕೊಂಡಿರುತ್ತದೆಂಬದು ಅವರಿಗೆ ಗೊತ್ತಿತ್ತು. ಸುರಕ್ಷಿತವಾದ ಸ್ಥಳವು ಅಲ್ಲಿಂದ ಬಹು ದೂರದಲ್ಲಿತ್ತು.

ಆಗ ಆ ಚಾಯನಾ ಫಿಲ್ಡಿನೊಳಗಿನ ಬಹುಶಃ ಪ್ರತಿಯೊಂದು ಮನೆಯ ಬಾಗಿಲದೊಳಗಿಂದಲೂ ಕ್ಷುದ್ರರಾದ ಚೀನಿಗರು ತಮ್ಮ ಮೋರೆಯನ್ನು ಹೊರ ಗಿಕ್ಕಿ ಬಣೆಯ ಕಡೆಗೆ ನೋಡುತ್ತ, ಪ್ರತಿಯೊಬ್ಬರನ್ನೂ ಹುರಿದುಂಬಿಸುತ್ತಿದ್ದರು. ಆ ಮಹಾ ನೀಚ ಪುಂಡರ ತಂಡವು ರಾಬರ್ಟ ಬ್ಲೇಕನನ್ನು ತಮ್ಮ ಕಡು ವೈರಿಯೆಂದು ತಿಳಿಯುತ್ತಿತ್ತು. ಬ್ಲೇಕನನ್ನು ಸಂಹರಿಸಿದ ಹೊರ್ತು ತಮ್ಮ ಮೇಲಿನ ಸಂಕಟದ ಸಂದೇಹವು ಬೈಲಾಗಲಾರದೆಂದು ಅವರು ಚೆನ್ನಾಗಿ ತಿಳಿದಿದ್ದರು; ಆದರೆ ಆಗ ಮತ್ತೆ ಪೋಲೀಸರ ಸೀಟಿಯ ಸಪ್ಪಳವು ಕೇಳಿಸಲು, ಆ ಪುಂಡರ ತಂಡವು ಮಾಯವಾಗಿ ಬಿಟ್ಟಿತು!

ಅಲ್ಪಾವಕಾಶದಲ್ಲಿಯೇ ಮೂರು ನಾಲ್ಕು ಜನ ಪೋಲಿಸ ಕಾನ್ಸಟೇಬ ಲ್ಲರು ಆ ಗಲ್ಲಿಯ ಮುಖಕ್ಕೆ ಬಂದು ತಲುಪಿದರು. ಅವರೊಳಗಿನವನೊಬ್ಬನು ತನ್ನ ಕೈಯೊಳಗಿನ ಲಾಟನ್ನಿನ ಬೆಳಕನ್ನು ಸ್ಮಿತ್ಥನ ಮೋರೆಯ ಮೇಲೆ ಕೆಡಹಿ, ತನ್ನ ಸಂಗಡಿಗರನ್ನು ಕುರಿತು:"ಗೆಳೆಯರೇ, ಈ ಪೋರನನ್ನು ಗುರ್ತಿಸಿದಿರೇನು? ಈತನು ಸ್ಮಿತ್ಥನೇ ಆಗಿರುತ್ತಾನೆ."

ಮತ್ತೊಬ್ಬ ಪೋಲೀಸನಿಗೆ ಆ ದೀಪದ ಬೆಳಕಿನಲ್ಲಿ ರಾಬರ್ಟ ಬ್ಲೇಕನ ಮುಖವು ಕಾಣಿಸಲು, ಆತನು ಅವನನ್ನು ಗುರ್ತಿಸಿ, ಆಶ್ಚರ್ಯಭರದಿಂದ:— "ಬ್ಲೇಕಮಹಾಶಯರೇನು? ತಾವೇ ಗಾಯಗೊಂಡವರೇನು? ಇದೆಂಥ ಸೋಜಿಗದ ಸಂಗತಿಯು!" ಎಂದೆಂದನು.

ಅದಕ್ಕೆ ಸ್ಮಿತ್ಥನು ಹೇಳುತ್ತಾನೆ:-ಇವರು ಅತ್ತ ಕಡೆಯ ಒಂದು ಮನೆಯ ಗೋಡೆಯ ಮೇಲೆ ಭರದಿಂದ ಬೀಳಲು, ಇವರ ತಲೆಗೆ ಹೆಚ್ಚಾಗಿ ಪೆಟ್ಟಾಗಿರು

ತ್ತದೆ. ಇವರಿಗೆ ಒಂದು ಗುಂಡು ಕೂಡ ತಾಕಿತು; ಆದರೆ....

ಸ್ಮಿತ್ಥನ ವಾಕ್ಯವನ್ನು ಪೂರ್ಣಮಾಡಗೊಡದಂತೆ ಬ್ಲೇಕನು ಆ ಪೋಲೀಸನನ್ನು ಕುರಿತು:—ಲೊ ಫೋರ್ಡಾ, ನೀನು ಆ ಬಗ್ಗೆ ಚಿಂತಿಸುವ ಕಾರಣವಿಲ್ಲ. ನಾನು ಎಷ್ಟೋ ಜನ ಚೀನೀ ಪುಂಡರನ್ನು ಅನುಸರಿಸಿ ನಡೆದಿದ್ದೆನು. ಅವರಲ್ಲೊಬ್ಬನು ನನ್ನನ್ನು ಬಂದೂಕಿನಿಂದ ಹೊಡೆದು ಓಡಿದನು. ತನ್ನ ಆ ಗುಂಡಿನೇಟಿನಿಂದಲೇ ನನ್ನ ಇಹಲೋಕದ ಯಾತ್ರೆಯು ಪೂರೈಸಿ ಬಿಟ್ಟಿತೆಂದು ತಿಳಿದು ಅವನು ಹೊರಟು ಹೋಗಿರುತ್ತಾನೆ. ಸುದೈವದಿಂದ ಆ ಗುಂಡು ನನ್ನ ಮೈದೊಗಲಿಗೆ ಸರಿಸಿ ಹೋಗಿರುತ್ತದಷ್ಟೆ.

ಅದಕ್ಕೆ ಆ ಪೋಲೀಸನು:—ನಡೆಯಿರಿ, ನಿಮ್ಮನ್ನು ಸುರಕ್ಷಿತ ಸ್ಥಳಕ್ಕೆ ಒಯ್ದು ಬಿಡೋಣ. ಈ ಅಪರಾತ್ರಿಯಲ್ಲಿ ಪುಂಡಗುಂಡರ ಅನುಸರಣ ಮಾಡುವದರಿಂದ ಯಾವ ಪ್ರಯೋಜನವೂ ಇಲ್ಲ.

ಬ್ಲೇಕನು ಅವನ ಮಾತಿಗೆ ಒಪ್ಪಿ ಸ್ಮಿತ್ಥನೊಡನೆ ಅದೇ ದಾರಿ ಹಿಡಿದು ಮುಂದಕ್ಕೆ ನಡೆದನು. ಪೋಲೀಸರು ಅವರುಗಳ ಹಿಂದೆಮುಂಬಾಗಿ ಸಾಗಿದರು.

ಸುಮಾರು ಅರ್ಧಗಂಟೆಯ ನಂತರ ಅವರು ಆ ಬದಿಯ ಜೇಲಿಗೆ ಹೋಗಿ ತಲುಪಿದರು. ಆ ಜೇಲಿನ ಇನ್ಸಪೆಕ್ಟರನಾದ ಮಾರ್ಟನ್ ಡೆಭೆನಟನು ಆ ಅಪರಾತ್ರಿಯಲ್ಲಿ ಬ್ಲೇಕನನ್ನು ಕಂಡು ವಿಸ್ಮಿತನಾಗಿ, ಆತನ ಮೋರೆಯ ಕಡೆಗೆ ಟಕಮಕನೆಂದು ನೋಡುತ್ತ:—ಬ್ಲೇಕರೇ, ನೀವೂ ಸ್ಮಿತ್ಥನೂ ಇಬ್ಬರೂ ನಮ್ಮ ಜೇಲಿನಲ್ಲಿಯೇ ಬಂದಿರುತ್ತೀರಲ್ಲಾ! ವರ್ತಮಾನವೇನು? ಎಲ್ಲಿಂದ ಬಂದಿರಿ? ಇತ್ಯಾದಿ ಪ್ರಶ್ನಗಳ ಮಳೆ ಸುರಿಸಿದನು.

ಬ್ಲೇಕನು ಮುಗುಳು ನಗೆ ನಗುತ್ತ:--ಐತಿಹಾಸಿಕ ಕಾಲದ "ಹಾರುನ್-ಅಲ್-ರಸೀದ" ಎಂಬವನು ಭಯಂಕರವಾದ ಕಾರ್ಗತ್ತಲೆಯಲ್ಲಿ ಹೇಗೆ ತಡವರಿಸುತ್ತ ದಾರಿಹಿಡಿದು ನಡೆದಿದ್ದನೋ, ಹಾಗೆಯೇ ನಾವೂ ಈ ದಿನ ಅಂಧಃಕಾರದಲ್ಲಿ ಆ ಚಾಯನಾ ಫೀಲ್ಡಿನಕಡೆಗೆ ಅಡ್ಡಾಡ ಹೋಗಿದ್ದೆವು; ಆದರೆ ನಾವು ಆ ಹಾರುನ್-ಅಲ್-ರಸೀದನಂತೆ ಛದ್ಮವೇಷ ಧರಿಸಿ ಅಡ್ಡಾಡ ಹೋಗಿರಲಿಲ್ಲ. ಅದರಿಂದಲೇ ಆ ಬದ್‌ಮಾಷರು ನಮ್ಮನ್ನು ಗುರ್ತಿಸಿ ವಿಪತ್ತಿಗೀಡು ಮಾಡಲಿಕ್ಕೆ ಪ್ರಯತ್ನಿಸಿದರು.

"ಆದದ್ದು ಬಹು ಮೂರ್ಖತನದ ಕೆಲಸವಾದಂತಾಗಿದೆ. ನೀವು ಇಷ್ಟು ಅಜಾಗರೂಕರಾಗಿ ನಡೆಯಬಹುದೆಂಬನ್ನು ಕನಸಿನಲ್ಲಿ ಕೂಡ ನೆನಿಸಿರಲಿಲ್ಲ."

"ಅಹುದು. ಕಾರ್ಯವೇನೋ ಯೋಗ್ಯವಾಗಲಿಲ್ಲವೆಂಬದನ್ನು ಒಪ್ಪದಿರಲಾರೆನು. ಯಾವನೋ ಒಬ್ಬ ದುಷ್ಟ ಪುಂಡನು ನಮ್ಮನ್ನು ಗುರ್ತಿಸಿದನು;

ಪ್ರಾಯಶಃ ನನ್ನಲ್ಲಿ ಆತನ ಕೋಪಪರಿಬಹುದು. ಅಂತೆಯೇ ಅವನು ಆ ಸಂಧಿ ಸಾಧಿಸಿ ನನ್ನ ಮೇಲೆ ತನ್ನ ಬಂದೂಕಿನ ಗುರಿಯಿಟ್ಟು ಗುಂಡು ಬಿಟ್ಟನು; ಆದರೆ ಮನುಜನೇ ಮಾನವನ ದೈವಲಿಖಿತವನ್ನು ಬರೆದವನಲ್ಲ. ಅಂತೆಯೇ ಆ ಪುಂಡನ ಹಾವಭಾವಗಳನ್ನು ಕಂಡು ನಾನೂ ಸ್ಮಿತ್ಥನೂ ಒಮ್ಮೆಲೆ ಒತ್ತಟ್ಟಿಗೆ ಸರಿದೆವು; ಆದರೆ ಆತನ ಆ ಗುಂಡು 'ಧುಡುಂ' ಎಂದೆನ್ನುತ್ತ ಬಂದು ನನ್ನ ಹೆಗಲಿನ ಬಳಿಯಿಂದ ಹೊರಟೇ ಹೋಯಿತು. ಆ ಗುಂಡಿನ ಕೂಡ ನನ್ನ ಹೆಗಲ ಮೇಲಿನ ಕೊಂಚ ಚರ್ಮವೂ ಸುಲಿದು ಹೋಯಿತು. ಅದೇ ಕಾಲಕ್ಕೆ ನಾನು ಆ ಓಣಿಯೊಳಗಿನ ಒತ್ತಟ್ಟಿಗಿನ ಗೋಡೆಯ ಮೇಲೆ ಬಿದ್ದದ್ದರಿಂದ ನನ್ನ ತಲೆಗೆ ಹೆಚ್ಚಾಗಿ ಪೆಟ್ಟಾಯಿತು. ಅಲ್ಪಾವಕಾಶದಲ್ಲೇ ನಿಮ್ಮ ಈ ಪೋಲಿಸ ಶಿಪಾಯರು ನಮಗೆ ಭೇಟಿಯಾಗಲು, ನಾವು ಇವರ ಸಹಾಯದಿಂದ ಆ ಸ್ಥಳದಿಂದ ಪಾರಾಗಿ ಇಲ್ಲಿಗೆ ಬಂದಿರುತ್ತೇವೆ.''

''ವಿಧಿಲಿಖಿತದಿಂದಲೇ ನೀವು ಇಂದಿನ ದಿವಸ ಆ ಪುಂಡರ ಕೈಯಿಂದ ಪಾರಾಗಿ ಬಂದಿರುತ್ತೀರಿ. ಇನ್ನು ಮುಂದೆಂದೂ ಈ ಒಗೆಯ ಅಜಾಗರೂಕತೆಯಿಂದ ನಡೆಯಬೇಡಿರಿ ಈ ಚೀನಿಗರ ಪುಂಡರ ಉಪದ್ರವದಿಂದ ಈ ಬದಿಯ ಪುರನಿವಾಸಿಗಳ ವಿತ್ತಪ್ರಾಣಗಳನ್ನು ಸಂರಕ್ಷಿಸುವದು ಬಲು ಕಠಿಣವಾಗಿರುತ್ತದೆ.''

ಆ ಚೀನೀಯ ಪುಂಡರ ಆ ಪ್ರಸಂಗದಿಂದ ಅವರಿಬ್ಬರ ಮನಸ್ಸಿನಲ್ಲಿಯೂ ಪೂರ್ವಸ್ಮೃತಿಯು ಜಾಗೃತಗೊಂಡಿತು ಬಹು ವರ್ಷಗಳ ಮುಂಚೆ ಬ್ಲೀಕನು ಚೀನದೇಶದೊಳಗಿನ ಕ್ಯಾಂಟನ್ನಪಟ್ಟಣದಲ್ಲಿ ಚೀನಿಯ ದಸ್ಯುಗಳಿಂದ ಹೇಗೆ ಆಕ್ರಮಿಸಲ್ಪಟ್ಟಿದ್ದನು, ಆಗ ಮಟರ್ನ್ನ ಡೆಭೆನಟನು ಯಾವ ಒಗೆಯಿಂದ ಆತನ ಸಂರಕ್ಷಣ ಮಾಡಿದ್ದನು ಮುಂತಾದ ಸಂಗತಿಗಳ ನೆನಪಾಗಲು, ಡೆಭೆನಟನ ಆ ಪಾಂತಸ್ಥ ಜೀವನದ ಸಂಗತಿಯೂ ಅವನಿಗೆ ಒಮ್ಮೆಲೆ ನೆನಪಾಯಿತು. ಆಗಿನ ಆತನ ಆ ಚೀನೀಯ ಹೆಂಡತಿಯ ಪ್ರಾಣಾಂತಿಕ ಸಮಯದ ಚಿತ್ರವೂ ಅವನ ಕಣ್ಣೆದುರಿಗೆ ಕಟ್ಟಿತು. ಅವರಿಬ್ಬರೂ ಕೆಲಕ್ಷಣಗಳ ವರೆಗೆ ಮೌನದಿಂದಿದ್ದು ಬಹು ದಿನಗಳ ಹಿಂದಿನ ಆ ಸಂಗತಿಯನ್ನು ಕುರಿತು ತಮ್ಮ ಮನಸ್ಸಿನಲ್ಲಿಯೇ ಭಾವಿಸಿದರು. ಆ ಇಪ್ಪತ್ತೈದು ವರ್ಷಗಳ ಮುಂಚಿನ ಸಂಗತಿಯು ಇಂದು ನಡೆದಿದೆಯೋ ಏನೋ ಎಂಬಂತೆ ಭಾಸವಾಯಿತು ಆಗ್ಗೆ ಅವರಿಬ್ಬರೂ ತರುಣರಾಗಿದ್ದರು; ಆದರೆ ಇಂದು ಅವರೀರ್ವರೂ ಪ್ರೌಢರಾಗಿದ್ದರು. ಅವರಿಬ್ಬರೂ ಸಾಮಾನ್ಯವಾಗಿ ಸಮವಯಸ್ಸಿನವರಾಗಿದ್ದರೂ ಮರ್ಟನ್ನ ಡೆಭೆನಟನು ಪ್ರೌಢಾವಸ್ಥೆಯನ್ನು ಮೀರಲಿರುವವನಂತೆ ತೋರುತ್ತಿದ್ದನು. ಆತನ ಕೂದಲುಗಳು ಬಿಳಿಛಾಯೆಯನ್ನು ಹೊಂದಿದ್ದವು; ಆದರೆ ಚಿರಕುಮಾರನಾದ ಬ್ಲೀಕನ ದೇಹ

ಸ್ಥಿತಿಯಲ್ಲಿ ವಿಶೇಷವಾದ ಹೆಚ್ಚುಕಡಿಮೆಯಾಗಿರಲಿಲ್ಲವು. ಅವನನ್ನು ಕಂಡವರು ಈತನಿನ್ನೂ ಯುವಕನೇ ಎಂದೆನ್ನುವಂತಿದ್ದನು. ಬ್ಲೇಕನು ಜಿತೇಂದ್ರಿಯನೂ, ಮಿತಾಹಾರಿಯೂ, ಆತ್ಮಸಂಯಮಿಯೂ ಆಗಿದ್ದನು. ಅಂಥ ಜನರು ಸಹಜವಾಗಿ ವೃದ್ಧಾಪ್ಯವನ್ನು ಹೊಂದಲಾರರು.

ಮಾರ್ಟಿನ್ನ ಡೆಭೆನಟನು ಬಹು ಉಚ್ಛೃಂಖಲ ಸ್ವಭಾವದವನು; ಸಂಯಮರಹಿತನು; ವ್ಯಸನಾಕ್ರಾಂತನು. ಅವನು ಚೀನದೇಶದಿಂದ ಲಂಡನ್ನಿಗೆ ಮರಳಿ ಬಂದೊಡನೆಯೇ ಪತ್ನಿವಿಯೋಗದ ವಿಸ್ಮರಣೆಗಾಗಿ ಒಬ್ಬ ಇಂಗ್ಲಿಷ ಜಾತಿಯ ನವಯುವತಿಯನ್ನು ಲಗ್ನವಾಗಿ ಹೊಸ ಸಂಸಾರವನ್ನು ಹೂಡಿದನು. ಲಗ್ನವಾಗಿ ವರ್ಷ ತುಂಬುವದರೊಳಗೇ ರಿಚರ್ಡನೆಂಬ ಆತನ ಮಗನು ಹುಟ್ಟಿದನು. ಡೆಭೆನಟನು ಚೀನದೇಶದಲ್ಲಿ ಅಫೀಮಿನ ವ್ಯವಹಾರದಿಂದ ಸಾಕಷ್ಟು ಧನಸಂಚಯ ಮಾಡಿದ್ದನು. ಆದರಿಂದ ಅವನು ಸ್ವದೇಶಕ್ಕೆ ಹಿಂದಿರುಗಿ ಬಂದಕೂಡಲೆ ನಾನಾ ಬಗೆಯ ಕುಡಿತಗಳ ವ್ಯಸನದಲ್ಲಿಯೂ, ಕುದುರೆಯ ಜೂಜಿನಲ್ಲಿಯೂ, ಹೆದ್ದಾಟಗಳಲ್ಲಿಯೂ ಆ ಎಲ್ಲ ಹಣವನ್ನು ತುಸ ದಿನಗಳಲ್ಲಿಯೇ ಹಾಳುಮಾಡಿಬಿಟ್ಟನು. ಆದರಿಂದ ಅವನು ಒಳಗಿನ ಕೊಬ್ಬರಿಯನ್ನೆಲ್ಲ ತೆಗೆದುಕೊಂಡ ನಂತರ ಉಳಿಯುವ ಚಿಂತಾಮಣಿ ಪಾತ್ರದಂತೆ ನಿಷ್ಕಾಂಚನನಾದನು! ಇನ್ನು ಈ ಸ್ಥಿತಿಯಲ್ಲಿ ತನ್ನ ಸಂಸಾರವು ನಿರಾತಂಕವಾಗಿ ಸಾಗದೆಂದು ತಿಳಿದು, ಅವನು ಒಬ್ಬ ದೊಡ್ಡ ಅಧಿಕಾರಿಯ ಸಹಾಯದಿಂದ ತೀರ ಕೀಳು ಕೆಲಸವಾದ ಪೋಲೀಸ ಖಾತೆಯಲ್ಲಿ ಒಂದು ಸಾಮಾನ್ಯ ನೌಕರಿಗೆ ಸೇರಿಕೊಂಡನು. ಎಷ್ಟೋ ವರ್ಷಗಳ ನಂತರ ಆತನ ಆ ಎರಡನೇ ಹೆಂಡತಿಯೂ ತೀರಿಕೊಂಡಳು. ಆತನ ಯೋಗ್ಯತೆಯು ಮೇರೆಗೆ ಆತನು ಮುಂದೆ ಪೋಲೀಸ ಇನ್ಸಪೆಕ್ಟರನಾದನು. ಇತ್ತೀಚೆಗೆ ಆತನು ಆ ಪಪ್ಲಲಿನ ಜೇಲಿನ ಇನ್ಸಪೆಕ್ಟರನಾಗಿದ್ದನು. ಚಾಯನಾಫೀಲ್ಡು ಆತನ ಅಧಿಕಾರಕ್ಕೊಳಪಟ್ಟ ಪ್ರದೇಶವೇ ಆಗಿದ್ದಿತು. ಚೀನದೇಶದ ಭಾಷೆ-ವ್ಯವಹಾರಗಳೆಲ್ಲವೂ ಈತನಿಗೆ ಗೊತ್ತೆಂದು ತಿಳಿದೇ ಲಂಡನ್ನ ಪಟ್ಟಣದ ಪೋಲೀಸ ಖಾತೆಯ ಮುಖ್ಯಸ್ತನು ಈತನನ್ನು ಬೇಕೆಂತಲೇ ಆ ವಿಭಾಗಕ್ಕೆ ನಿಯಮಿಸಿದ್ದನು. ಆತನ ಮಗನಾದ ರಿಚರ್ಡನ ವಯಸ್ಸು ೨೪ ವರ್ಷ. ಅಧಿಕಾರಿಗಳ ಮುರುವತ್ತಿನಿಂದ ಆತನೂ ಆ ಪಪ್ಲಲಿನ ಜೇಲಿನಲ್ಲಿಯೇ ಸಹಾಯ್ಯಕ ಸಬ್‌ಇನ್ಸಪೆಕ್ಟರನೆಂದು ತಂದೆಯ ಕೈಕೆಳಗೆ ಆ ಪೋಲೀಸಖಾತೆಯಲ್ಲಿಯೇ ಕೆಲಸಕ್ಕೆ ಹತ್ತಿದ್ದನು. ತಾನು ಒಬ್ಬ ಪ್ರಖ್ಯಾತ ಪತ್ತೇದಾರನಾಗಬೇಕೆಂಬ ರಿಚರ್ಡನ ಉಚ್ಚಾಭಿಲಾಷೆಯಿದ್ದಿತು

ಕೆಲಕ್ಷಣಗಳ ನಂತರ ಬ್ಲೇಕನು ಡೆಭೆನಟನ ಮೋರೆಯನ್ನು ಮಿಕಿ-ಮಿಕಿ

ಯೆಂದು ನೋಡಿ, ಬಳಿಕ:—ನಿಮ್ಮ ದೇಹಾರೋಗ್ಯವು ಸರಿಯಾಗಿಲ್ಲವೇನು? ಇಲ್ಲಿ ನಿಮಗೆ ಹೆಚ್ಚಾದ ಪರಿಶ್ರಮ ಮಾಡಬೇಕಾಗುವದಲ್ಲವೇ? ಎಂದು ಕೇಳಲು,

"ನನಗೆ ಶಾರೀರಿಕ ಅಸುಖವಿಲ್ಲ; ಮಾನಸಿಕ ಅಸುಖವಿದೆ. ನನ್ನ ಮಗನ ಸಲುವಾಗಿ ನನಗೆ ಸಮಾಧಾನವಿರುವದಿಲ್ಲ."

"ನಿಮ್ಮ ಮಗನೇ? ಯಾವ ಮಗನು? ಅವನಿಗೆ ಏನಾಗಿದೆಯೆಂಬದನ್ನಾದರೂ ತಿಳಿಸಬಾರದೇ?"

"ಅದೊಂದು ದೊಡ್ಡ ಪುರಾಣವೇ ಇರುತ್ತದೆ. ಆತನ ರೂಢನಾಮವು ಡ್ಯೂಕನೆಂದು. ಕೆಲ ದಿನಗಳ ಮುಂಚೆ ಹಡಗುಪಡೆಯ ಕೂಲಿಕಾರರು ಸಂಪು ಮಾಡಿ ಕೆಲಸಗಳನ್ನೆಲ್ಲ ನಿಲ್ಲಿಸಿಬಿಟ್ಟಿದ್ದರು ಅಲ್ಲಿಯ ಪುಂಡರ ಕೂಡ ಡ್ಯೂಕನ ವಾದವಿವಾದವಾಯಿತು ಆಗ ಅವರಲ್ಲಿಯ ಒಬ್ಬ ತುಂಟನು ತನ್ನ ಬಗಲೊಳಗಿನ ಚೂರಿಯಿಂದ ಡ್ಯೂಕನನ್ನು ಇರಿದನು. ಆ ಆಘಾತವು ಬಲವಾಗಿ ಆದದ್ದರಿಂದ ಡ್ಯೂಕನು ಕೆಲ ದಿನಗಳ ವರೆಗೆ ಆಸ್ಪತ್ರಿಯಲ್ಲೇ ಬಿದ್ದುಕೊಂಡಿದ್ದನು. ಆಸ್ಪತ್ರಿಯಿಂದ ಹೊರಬಿದ್ದ ಬಳಿಕ ವಾಯುಪರಿವರ್ತನದ ಸಲುವಾಗಿ ಆತನು ಕೆಲದಿನಗಳ ವರೆಗೆ ಸಮರಶೇಟ್ ಜಿಲ್ಲೆಯೊಳಗಿನ ಗುಡ್ಡಗಾಡು ಪ್ರದೇಶಕ್ಕೆ ಹೋದನು. ಅವನು ಅಲ್ಲಿಯ ವೆಭಾನ ಎಂಬ ಹೆಸರಿನ ಒಬ್ಬ ರೈತನ ಮನೆಯಲ್ಲಿ ವಾಸವಾಗಿದ್ದನು. ಆ ಕೃಷಕನಿಗೆ ಒಬ್ಬ ಲಾವಣ್ಯವತಿಯಾದ ಕನ್ಯೆ ಇರುವಳು. ಡ್ಯೂಕನು ಅವರಲ್ಲಿ ಕೆಲ ದಿನಗಳಿದ್ದು ಹಿಂದಿರುಗಲು, ಆತನ ದೇಹಾರೋಗ್ಯವು ಬಹು ಸುಧಾರಿಸಿತು; ಆದರೆ ಆತನ ಮನಸ್ಸು ಮಾತ್ರ ಸಂಪೂರ್ಣವಾಗಿ ಬದಲಾವಣೆ ಹೊಂದಿತ್ತು. ಅದಕ್ಕೆ ಕಾರಣವೇನೆಂಬದನ್ನು ನಾನು ಅನುಮಾನಿಸಿ ತಿಳಿದೆನು; ಆದರೆ ನಾನು ಅವನಿಗೆ ಆ ಕಾರಣವನ್ನು ಕುರಿತು ಏನೊಂದೂ ಪ್ರಶ್ನೆಮಾಡಲಿಲ್ಲ. ಕೆಲ ದಿನಗಳಲ್ಲಿಯೇ ಆತನು ತನ್ನ ಮನೋಗತವನ್ನು ನನ್ನೆಡೆಯಲ್ಲಿ ಪ್ರಕಟಿಸಬಹುದೆಂದು ನಾನು ನಂಬಿಕೊಂಡಿದ್ದೆನು. ಮುಂದೊಂದು ದಿನ ಆತನು ನನ್ನನ್ನು ಕುರಿತು:—ನಾನು ಆ ಕೃಷಕನ ಕನ್ಯೆಯನ್ನು ಪ್ರೀತಿಸುತ್ತಿರುವೆನೆಂದನು. ಆ ಕನ್ಯೆಯ ಹೆಸರು ಮೇರಿಯೆಂದಿದೆ. ತಾನು ಆಕೆಯನ್ನು ಲಗ್ನವಾಗುವೆನೆಂಬದನ್ನು ತಿಳಿಸುವ ಸಲುವಾಗಿ ಅವನು ಆಕೆಯ ತಂದೆಯ ಮನೆಗೆ ಹೋಗಬೇಕೆಂದು ಇಚ್ಛಿಸಿರುವನು. ತನ್ನ ಮಾತಿಗೆ ಮೇರಿಯೂ ಆಕೆಯ ತಂದೆಯೂ ಒಪ್ಪಬಹುದೆಂದು ಆತನ ವಿಶ್ವಾಸವಿರುವದು. ಡ್ಯೂಕನು ಅಲ್ಲಿಗೆ ಹೊರಡುವ ಸಿದ್ಧತೆಯಲ್ಲಿರಲು, ಇಂದಿಗೆ ಮೂರು ದಿನಗಳ ಹಿಂದೆ ನನಗೆ ಆ ವೆಭಾನನಿಂದ ಒಂದು ಪತ್ರ ಬಂದಿತು. ಅದರಲ್ಲಿ

ಅವನು: "ಮೇರಿಯು ತನ್ನೊಡನೆ ಜಗಳಾಡಿ ಎಲ್ಲಿಗೋ ಹೊರಟು ಹೋಗಿರುತ್ತಾಳೆ. ಆಕೆಯು ಬಹು ದಿನಗಳಿಂದ ಲಂಡನ್ನಿಗೆ ಹೋಗಬೇಕೆಂದೂ, ಅಲ್ಲಿ ನಿಮ್ಮ ಡ್ಯೂಕನ ಸಹಾಯದಿಂದ ಯಾವುದೊಂದು ನೌಕರಿ ದೊರಕಿಸಿಕೊಂಡು ಅಲ್ಲಿಯೇ ವಾಸಿಸಬೇಕೆಂದೂ ಅನ್ನುತ್ತಿದ್ದಳು. ಆದುದರಿಂದ ಆಕೆಯು ಬಹುಶಃ ಲಂಡನ್ನಿಗೇ ಹೋಗಿರಬೇಕು" ಎಂದು ಬರೆದಿರುತ್ತಾನೆ, ಆದರೆ ಮೇರಿಯು ಇದುವರೆಗಂತೂ ಇಲ್ಲಿಗೆ ಬಂದಿರುವದಿಲ್ಲವು. ನಮ್ಮ ಡ್ಯೂಕನು ಆ ವೆಭಾನ ಕೃಷಕನಿಗೆ ತಂತಿಕೊಟ್ಟು ಕೇಳಿದನೇನಂದರೆ, ಮೇರಿಯು ಇತ್ತ ಹೊರಟಾಗ ಯಾವ ಬಗೆಯ ವೇಷಭೂಷಣಗಳನ್ನು ಧರಿಸಿದ್ದಳು? ಯಾವ ದಿವಸ ಯಾವ ಕಾಲಕ್ಕೆ ಹೊರಟಳು ಇತ್ಯಾದಿ. ಆ ವೆಭಾನನಿಂದ ಬಂದ ಉತ್ತರವನ್ನು ತಿಳಿದು, ಅಂದಿನಿಂದ ನಮ್ಮ ಡ್ಯೂಕನು ಆ ಮೇರಿಯ ಅನುಸಂಧಾನಕ್ಕೆಂದು ಪತ್ತೆದಾರಿಯ ಎಷ್ಟೋ ಲಾಗಗಳನ್ನು ಹಾಕಿದನು. ಆತನ ಆ ಪ್ರಯತ್ನಗಳು ಬಹು ಪ್ರಶಂಸನೀಯಗಳಾಗಿದ್ದರೂ, ಅವೆಲ್ಲ ವ್ಯರ್ಥವೇ ಆದಂತಾಗಿವೆ."

"ಮೇರಿಯ ತಂದೆಯಿಂದ ಬಂದ ತಂತಿಯ ಮೇಲಿಂದ ಮೇರಿಯು ಕಳೆದ ಸೋಮವಾರ ದಿವಸವೇ ಇಲ್ಲಿಗೆ ಬಂದಿರಬೇಕೆಂದು ಡ್ಯೂಕನ ತಿಳುವಳಿಕೆಯಾಗಿದೆ. ಅಂದು ಅಪರಾಹ್ಣಕಾಲದಲ್ಲಿ ಒಬ್ಬ ಸುಂದರಿಯಾದ ತರುಣಿಯು ಪ್ಯಾಡಿಂಟನ್ನ ಸ್ಟೇಶನ್ನಿನಿಂದ ಕೆಲ ದೂರ ಬಂದು, ಒಬ್ಬ ಪೋಲೀಸನಿಗೆ ತಾನು ಸಮರಶೇಟ್ ಜಿಲ್ಹೆಯಿಂದ ಈ ಲಂಡನ್ನಿಗೆ ಬಂದಿದ್ದು, ಪಪ್ಪಲಿನ ಜೇಲಿಗೆ ಹೋಗಬೇಕಾಗಿದೆಯೆಂದು ತಿಳಿಸಿದ್ದಳು. ಆ ಸಿಪಾಯಿಯು ಭ್ರಮದಿಂದ ಅವಳನ್ನು ವ್ಹಿಕ್ಟೋರಿಯಾ ಟ್ರಾಮಿನಲ್ಲಿ ಕೂರಿಸಿ ಈ ಪಪ್ಪಲಿಗೆ ಹೋಗಬಹುದೆಂದು ಹೇಳಿದನಂತೆ. ಮತ್ತೊಬ್ಬ ಪೋಲೀಸನು ಅವಳು ಆ ವ್ಹಿಕ್ಟೋರಿಯಾ ಟ್ರಾಮಿನಿಂದಿಳಿದು ಬೇರೆ ಟ್ರಾಮಿನ ದಾರಿ ಕಾಯುತ್ತ ಒಂದು ಕೂಟಿನಲ್ಲಿ ನಿಂತಿರುವದನ್ನು ನೋಡಿದ್ದನಂತೆ; ಆದರೆ ಯಾವ ಕಾರಣದಿಂದಲೋ ಅವಳು ಆ ಬೇರೆ ಟ್ರಾಮಿನಲ್ಲಿ ಕೂರದೆ, ಕಾಲಿಲೆ ನಡೆಯುತ್ತಲೆ ಸಾಗಿದಳಂತೆ ಅವಳು ಇನ್ನೊಬ್ಬ ಸಿಪಾಯಿಯನ್ನು ಕಂಡು ಪಪ್ಪಲಿನ ಜೇಲಿನ ದಾರಿಯ ವಿಷಯವಾಗಿ ಕೇಳಿದಳಂತೆ. ಮುಂದೆ ಅವಳು ಆ ದಾರಿಯಲ್ಲಿಯೇ ಮಾಯವಾಗಿರುತ್ತಾಳೆ! ನಮ್ಮ ರಿಚರ್ಡ ಡ್ಯೂಕನು ಕಳೆದ ಮೂರು ದಿನಗಳಿಂದಲೂ ಒಂದೇಸವನೆ ಆಕೆಯ ಸಂಧಾನದಲ್ಲಿ ತೊಡಗಿರುತ್ತಾನೆ; ಆದರೆ ಆಕೆಯ ಪತ್ತೆಯು ಹತ್ತದೆ, ಆ ಪೋರನು ಹುಚ್ಚುಬೆಪ್ಪನಂತಾಗಿ ಬಿಟ್ಟಿರುತ್ತಾನೆ!"

ಬ್ಲೇಕನು ನಿಸ್ತಬ್ಧಭಾವದಿಂದ ಅದನ್ನೆಲ್ಲಾ ಕೇಳಿಕೊಂಡನು. ಬಳಿಕ ಅವನು ಇನ್ಸಪೆಕ್ಟರ ಡೆಫೆನಟನನ್ನು ಕುರಿತು:—ನಿಮ್ಮ ಈ ಸಂಗತಿಗಳನ್ನೆಲ್ಲ ಕೇಳಿ

ಕಡು ದುಃಖವಾಗುತ್ತಿದೆ. ಮೇರಿ ಸುಂದರಿಯು ಆ ರಾತ್ರಿಕಾಲದಲ್ಲಿ ಒಬ್ಬೊಂಟಿಗಳಾಗಿ ಅತ್ತ ನಡೆದುದು ವಿಹಿತವಾಗಲಿಲ್ಲ. ಆ ದಾರಿಯಲ್ಲಿ ವಿಪತ್ತಿನ ಅಂಜಿಕೆಯು ಹೆಚ್ಚಾಗಿರುತ್ತದೆ. ಮೇಲಾಗಿ ಆಕೆಗೆ ಈ ಲಂಡನ್ನ ಪಟ್ಟಣದ ಗಾರಿ-ಬಟ್ಟೆಗಳಾವವೂ ಗೊತ್ತಿಲ್ಲ. ಅದರಿಂದ ಅವಳು ಬಹುಶಃ ಯಾವನೊಬ್ಬ ಪುಂಡನಿಂದ ಆಕ್ರಮಿಸಲ್ಪಟ್ಟಿರಬೇಕೆಂದು ತೋರುತ್ತಿದೆ.

"ನನಗಾದರೂ ಹಾಗೆಯೇ ಅನಿಸುತ್ತಿದೆ. ಆ ದಾರಿಯಲ್ಲೇ ಅವಳು ಯಾವುದೊಂದು ಸಂಕಟಕ್ಕೀಡಾಗಿರಬೇಕು; ಇಲ್ಲದಿದ್ದರೆ ಅವಳು ಇಲ್ಲಿಗೆ ಸಹಜವಾಗಿ ಬಂದುಬಿಡುತ್ತಿದ್ದಳು."

"ಅಥವಾ ಯಾವುದೊಂದು ಶೀಘ್ರಗತಿಯ ವಾಹನದಿಂದ ಆಘಾತಪಟ್ಟು ಯಾವುದೊಂದು ಆಸ್ಪತ್ರಿಯಲ್ಲಿ ಬಿದ್ದುಕೊಂಡಿರಲಿಕ್ಕಿಲ್ಲವಷ್ಟೇ?"

"ಅದೂ ಅಸಂಭವವಲ್ಲೆಂದು ತಿಳಿದೇ, ಡ್ಯೂಕನು ಈ ಒದಿಯ ಪ್ರತಿಯೊಂದು ಆಸ್ಪತ್ರಿಯಲ್ಲಿ ಆ ಬಗ್ಗೆ ಶೋಧ ನಡೆಸಿದನು; ಆದರೆ ಯಾವ ರುಗ್ಣಾಲಯದಲ್ಲಿಯೂ ಅವಳ ಪತ್ತೆಹತ್ತಲಿಲ್ಲವು. ಕಳೆದ ಮೂರು ದಿನಗಳಲ್ಲಿ ಯಾವ ತರುಣಿಯೂ ಯಾವುದೊಂದು ವಾಹನದ ಕೆಳಗೆ ಸಿಕ್ಕು ಸತ್ತ ಅಥವಾ ಗಾಯಗೊಂಡ ವರ್ತಮಾನವಿಲ್ಲ. ಅದರಿಂದ ನಾವು ಇನ್ನು ಅವಳನ್ನು ಕಾಣುವೆವೆಂಬ ಆಶೆಯನ್ನೇ ತೊರೆದಂತಾಗಿರುತ್ತದೆ. ಈ ಲಂಡನ್ನ ಪಟ್ಟಣದ ಈ ಪೂರ್ವಪ್ರದೇಶವು ಎಂಥ ಭಯಾನಕವಾದದ್ದೆಂಬದನ್ನು ನೀವು ಸ್ವತಃ ಚೆನ್ನಾಗಿ ಮನಗಂಡಿರುತ್ತೀರಿ. ಆ ಬಡವೆಯು ಎಂಥ ಸಂಕಟಕ್ಕೀಡಾದಳೋ! ಎಂಬದನ್ನು ಮನದಂದರೆ, ಮೈಮೇಲೆ ಮುಳ್ಳೇಳುತ್ತವೆ."

ಹೀಗೆಂದು ನುಡಿದು ಮಟರ್ನ್ನ ಡೆಭೆನಟನು ಕೆಲಕ್ಷಣಗಳವರೆಗೆ ಸುಮ್ಮನೆ ಕುಳಿತು, ನಂತರ ಮತ್ತೆ:—ನೀವು ಇಂದಿನ ಈ ಭಯಾನಕ ರಾತ್ರಿಯಲ್ಲಿ ಆ ಚಾಯನಾ ಫೀಲ್ಡಿನ ಕಡೆಗೇಕೆ ಹೋಗಿದ್ದಿರಿ?

"ಒಂದು ತಪಾಸಣೆಯ ಭಾರವನ್ನು ವಹಿಸಿರುತ್ತೇನೆ. ಅದನ್ನು ಯಥಾಕ್ರಮವಾಗಿ ಪ್ರಾರಂಭಿಸುವ ಪೂರ್ವದಲ್ಲಿ ಆ ಚಾಯನಾಫೀಲ್ಡನ್ನೊಮ್ಮೆ ಸುತ್ತಿ, ಅಲ್ಲಿಯ ದಾರಿಬಟ್ಟೆಗಳನ್ನು ಕಣ್ಣಾರೆ ನೋಡಲಿಕ್ಕೆಂದು ಹೊರಟಿದ್ದೆನು."

"ಅದಾವ ತಪಾಸಣೆಯು?"

"ನಿಮಗೆ ಗೊತ್ತಾಗಿದ್ದರೂ ಆಗಿರಬಹುದು, ಚಾಯನಾ ಫೀಲ್ಡಿನಲ್ಲಿ ದರವಡೆಖೋರರ ಯಾವ ಗುಪ್ತಮಂಡಲವು ಸ್ಥಾಪಿತವಾಗಿದೆಯೋ, ಆ ಮಂಡಲದ ಮುಖ್ಯಸ್ಥನನ್ನು ಹಿಡಿದು, ಆ ಮಂಡಲವನ್ನು ನಾಶಗೊಳಿಸುವ ಕೆಲಸವು ನನ್ನ ಮೇಲೆಯೇ ಹೊರಿಸಲ್ಪಟ್ಟಿರುತ್ತದೆ. ಅದರಿಂದ ನಾನು ಆ ಮುಖ್ಯಸ್ಥನನ್ನು

ಹಿಡಿಯುವದಕ್ಕೆಂದು ಆಪ್ಪಾಪುತ್ತಿದ್ದನು."

"ಪೋಲೀಸ ಕಮೀಶನರರಿಂದಲೇ ಈ ಕೆಲಸವನ್ನು ಪಡೆದಿರುತ್ತೀರೇನು?"

"ಅಹುದು; ಪೋಲೀಸ ಕಮೀಶನರರ ಅಪ್ಪಣೆಯ ಮೇರೆಗೆ ನಿನ್ನೆ ರಾತ್ರಿ ನಾನು ಅವರನ್ನು ಕಂಡಿದ್ದೆನು. ನೀವೂ ನಿಮ್ಮ ಮಗನೂ ಈ ಕೆಲಸದಲ್ಲಿ ನನಗೆ ಸಾಕಷ್ಟು ಸಹಾಯ ಮಾಡತ್ತೀರೆಂದು ಅವರು ನನಗೆ ಹೇಳಿರುತ್ತಾರೆ. ನೀವುಗಳು ನನಗೆ ಹೆಚ್ಚಾಗಿ ಸಹಾಯ ಮಾಡದಿದ್ದರೆ, ನಾನು ಕೃತಕಾರ್ಯನಾಗುವದು ದುಸ್ತರವು. ಆದಕ್ಕೆಂದೇ ನಾನಿಂದು ಇಲ್ಲಿಗೆ ನಿಮ್ಮನ್ನು ಕಾಣಬಂದಿರುತ್ತೇನೆ."

"ನೀವು ಎಂಥ ಕಠಿಣ ಕೆಲಸಕ್ಕೆ ಕೈ ನೀಡಿರುತ್ತೀರೆಂಬದನ್ನು ಚೆನ್ನಾಗಿ ತಿಳಿದು ನೋಡಿರುವಿರೇನು?"

"ನಾನು ಯಾವುದಕ್ಕೆ ಕೈ ಹಾಕಿರುವೆನೋ, ಜೀವ ಹೋದರೂ ಅದನ್ನು ಮಾಡಿಯೇ ತೀರಬೇಕೆಂದಿರುತ್ತೇನೆ. ಆ ಕೆಲಸವು ಬಹು ಗಡಚಾದದ್ದೆಂದೇ ನನ್ನ ಕಡೆಗೆ ಬಂದಿರುತ್ತದೆ."

"ಅದು ಸಾಧಿಸುವುದಾದರೆ ನಿಮ್ಮಿಂದಲ್ಲದೆ ಬೇರೆಯವರಿಂದಾಗದು. ನಿಮ್ಮ ಸಾಹಸ ಮತ್ತು ಕೌಶಲ್ಯಗಳು ಹೊಗಳತಕ್ಕಂಥವುಗಳಾಗಿವೆ. ಸಾಧ್ಯವಾದ ಮಟ್ಟಿಗೆ ನಾವು ನಿಮಗೆ ನೆರವಾಗುತ್ತೇವೆ, ಆದರೆ ಆ ಚೀನಿಗರ ಸಂಬಂಧದ ಸಮಗ್ರ ಸಂಗತಿಯನ್ನು ಕೇಳಿ ನೀವು ಹತಾಶರೂ ನಿರುತ್ಸಾಹಿಗಳೂ ಆಗಕೂಡದು. ಅಲ್ಲಿ ಬಹು ದೊಡ್ಡ ಗೊಂದಲವೆದ್ದಿದೆ. ಆ ಗುಪ್ತಮಂಡಲದ ಕಾರ್ಯವಾಹಕರೆಲ್ಲ ಪೌರ್ವಾತ್ಯದೇಶದವರೇ ಆಗಿರುತ್ತಾರೆ. ಅವರುಗಳ ಹೊಸ ಹೊಸ ಯುಕ್ತಿಗಳ ಪರಿಚಯ ಮಾಡಿಕೊಂಡರೆ ವಿಸ್ಮಯಪಡಬೇಕಾಗುತ್ತದೆ. ಅವರ ಆ ಗುಪ್ತಮಂಡಲವು "ಜಾಗೃತ ಮಂಡಲ" ಎಂಬ ಹೆಸರಿನಿಂದ ಪ್ರಖ್ಯಾತವಾಗಿದೆ. ನಾವು ಅದಕ್ಕೆ 'ಚೀನೀಯ ಪುಂಡರ ತಂಡ'ವೆಂದೆನ್ನಬಹುದು. ಅವರ ಆ ಮಂಡಲದಲ್ಲಿ ಎಲ್ಲ ತರಗತಿಯ ಬದ್‌ಮಾಷರೂ ಅರಾಜಕರೂ ಕೂಡಿಕೊಂಡಿರುತ್ತಾರೆ. ಎಷ್ಟೋ ಜನ ಧನಾಢ್ಯ ಚೀನಿಗರು ಸ್ವದೇಶದಲ್ಲಿದ್ದುಕೊಂಡೇ ಇವರುಗಳ ಖರ್ಚು-ಕಂದಾಯಗಳನ್ನೆಲ್ಲ ಸಾಗಿಸುತ್ತಾರೆ. ಇಲ್ಲಿರುವ ಪುಂಡರು ಈ ದೇಶದಲ್ಲಿ ಕಳವು-ದರವಡೆ ಮಾಡಿ ಯಾವ ಧನಸಂಚಯ ಮಾಡುವರೋ, ಅದರಲ್ಲಿ ಅಲ್ಲಿಯವರಿಗೂ ಪಾಲುಂಟು. ಹಾಂಗಕಾಂಗ ಪಟ್ಟಣವೇ ಈ ಗುಪ್ತಮಂಡಲಗಳ ಮುಖ್ಯಸ್ಥಳವು; ಆದರೆ ಕ್ಯಾಂಟನ್ನ, ಶಾಂಘಾಯ, ಹಾಂಕಾ,ಓ ಪೇಕಿನ ಮುಂತಾದ ಪಟ್ಟಣಗಳಲ್ಲಿಯೂ ಈ ಮಂಡಲದ ಶಾಖೆಗಳಿರುತ್ತವೆ. ಇದಲ್ಲದೆ ಅಮೇರಿಕೆಯೊಳಗಿನ ನ್ಯೂಯಾರ್ಕ ಮತ್ತು ಸ್ಯಾನ್‌ಫ್ರಾನ್ಸಿಸ್ಕೋಗಳಲ್ಲಿಯು

ಚಾಯನಾಟೌನುಗಳಲ್ಲಿಯೂ ಇವುಗಳ ಶಾಖೆ-ಪ್ರತಿಶಾಖೆಗಳಿರುತ್ತವೆ; ಆದರೆ ಲಂಡನ್ನ ಪಟ್ಟಣವೇ ಈ ಗುಪ್ತಮಂಡಲದ ಸರ್ವಶ್ರೇಷ್ಠ ಕೇಂದ್ರವಾಗಿರುತ್ತದೆ. ಈ ಕೇಂದ್ರದವರು ಗ್ಲಾಸಗೋ, ನ್ಯೂಕ್ಯಾಸಲ್, ಹಲ್, ಡಬ್ಲಿನ್ ಮುಂತಾದ ಕಡೆಗಳಲ್ಲಿಯೂ ತಮ್ಮ ಮಂಡಲಗಳನ್ನು ಸ್ಥಾಪಿಸಿರುತ್ತಾರೆಂಬ ಪ್ರವಾದವುಂಟು. ನಿಯಮಕ್ಕೆ ವಿರುದ್ಧವಾಗಿ ಅಫೀಮನ್ನು ತರಿಸುವದೂ ಸಂಗ್ರಹಿಸುವದೂ ಮಾರುವದೂ ಈ ಗುಪ್ತಮಂಡಲದವರ ಧನಾರ್ಜನೆಯ ಪ್ರಮುಖ ವ್ಯವಸಾಯವಾಗಿದೆ. ಕಳವು, ದರವಡೆ, ದಾರಿ ಒಡೆಯುವದು, ವಂಚಿಸುವದು ಮುಂತಾದ ಕೆಲಸಗಳೂ ಅವರ ನಿತ್ಯ ಕಾರ್ಯಕ್ರಮಗಳಲ್ಲಿವೆ. ಲಂಡನ್ನಿನಲ್ಲಿ ಅವರ ಮುಖ್ಯ ಸ್ಥಳವು ಎಲ್ಲಿರುವದೆಂಬದು ನಮಗಿನ್ನೂ ತಿಳಿದಿಲ್ಲ; ಇಷ್ಟೇ ಅಲ್ಲ, ಇಲ್ಲಿಯ ಯಾವ ಪೋಲೀಸನಿಗಾಗಲಿ-ಗುಪ್ತ ಪೋಲೀಸನಿಗಾಗಲಿ ಅದು ಇನ್ನೂವರೆಗೆ ತಿಳಿದಿರುವದಿಲ್ಲ; ಆದರೆ ಆ ಗುಪ್ತ ಮಂಡಳದ ಮುಖ್ಯಸ್ತನು ಅಸಾಧಾರಣ ವ್ಯಕ್ತಿಯೆಂಬದರಲ್ಲಿ ಸಂದೇಹವಿಲ್ಲ. ಸಾಹಸದಲ್ಲಿ, ಬುದ್ಧಿ-ಕೌಶಲ್ಯದಲ್ಲಿ, ಹೊಸ ಹೊಸ ಕಲ್ಪನೆಗಳಲ್ಲಿ ಮತ್ತು ತಮ್ಮ ಮಂಡಳದವರ ಮೇಲೆ ತನ್ನ ವರ್ಚಸ್ಸು ನಡಿಸುವಲ್ಲಿ ಅವನು ಎರಡನೇ ನೆಪೋಲಿಯನ್ನನು ಅಥವಾ ಲೇನಿನ್ನನೆಂದೆನ್ನಬಹುದು. ಅವನು ಇಂಗ್ಲಿಷ ಜನರ ವಿಷಯವಾಗಿ ಹಟ್ಟಾ ವೈರಿಯಾಗಿರುತ್ತಾನೆಂದು ಕೇಳಿದ್ದೇನೆ. ಇದು ಸತ್ಯವೋ-ಅಸತ್ಯವೋ, ಅದಕ್ಕೆ ಕಾರಣವೇನಾದರೂ ಉಂಟೋ ಇಲ್ಲವೋ ಎಂಬದು ನನಗೆ ತಿಳಿಯದು. ಮಂದಿಗೆ ಉಪಕಾರ ಮಾಡುವದು ನಮ್ಮ ಇಂಗ್ಲಿಷರ ಕುಲಧರ್ಮವಾಗಿರುತ್ತದೆ. ಅಧಃಪತಿತರೂ ದುರ್ದೆಸೆಗೀಡಾದವರೂ ಆದ ಮಾನವರ ಹಿತಕ್ಕಾಗಿ ನಮ್ಮ ಜೀವನವನ್ನು ವೆಚ್ಚ ಮಾಡಿ, ಈ ಪೃಥ್ವಿಯ ಮೇಲೆಲ್ಲ ಬ್ರಿಟಿಶರ ಮಹಿಮೆಗೆ ಕುಂದುಂಟಾಗದಂತೆ ಕಾಪಾಡಿಕೊಂಡಿರುತ್ತೇವೆ; ಆದರೂ ಈ ಮೂರ್ಖ ಪೌರ್ವಾತ್ಯ ಜನರು ನಮ್ಮನ್ನು ತಿರಸ್ಕರಿಸಿ, ವೈರ ತಾಳಿ, ಅವಿಶ್ವಾಸಪಟ್ಟು ನಮ್ಮಗಳ ಅನಿಷ್ಟ ಸಾಧನದ ಪ್ರಯತ್ನದಲ್ಲಿರುತ್ತಾರ. ಇದೇನು ಸಾಧಾರಣ ಆಕ್ಷೇಪಣೆಯ ವಿಷಯವಾಗಿದೆಯೇನು?"

ಅದಕ್ಕೆ ಬ್ಲೇಕನು:—ಅಹುದು; ಅವರು ನಮ್ಮ ಪ್ರೇಮ-ವಿಶ್ವಾಸಗಳ ಮಹಿಮೆಯನ್ನು ತಿಳಿಯಲು ಅಸಮರ್ಥರಾಗಿರುತ್ತಾರೆ; ಆದರೆ ಅವರಿಗೆ ನಮ್ಮ ತೋಫು-ಬಂದೂಕುಗಳ ಪ್ರಭಾವವು ಚೆನ್ನಾಗಿ ಅವಗತವಾಗಿರುತ್ತದೆ. ಅದು ಏನೇ ಇರಲಿ, ನೀವು ಅವರ ಯಾವುದೊಂದು ಗುಪ್ತವಾರ್ತೆಯನ್ನು ತಿಳಿದಿರುವಿರೋ ಇಲ್ಲವೋ ಎಂಬದನ್ನಷ್ಟು ತಿಳಿಸಿರಿ.

"ಇಲ್ಲ; ಗುಪ್ತಸಂಗತಿ ಯಾವುದೂ ತಿಳಿದಿಲ್ಲ. ಅವರ ದಳದಲ್ಲಿಯ ಕೆಲ

ಜನರು ಈ ಮೊದಲು ಕೈದು ಮಾಡಲ್ಪಟ್ಟಿದ್ದರು; ಮತ್ತು ಕೆಲಕೇವರ ಮೇಲೆ ಪೋಲೀಸರ ದೃಷ್ಟಿಯೂ ಇರುತ್ತದೆ; ಆದರೆ ಬೇಕಾದಷ್ಟು ಯತ್ನಿಸಿದರೂ ಅವರಾರಿಂದಲೂ ಅವರ ಗುಪ್ತರಹಸ್ಯದ ಯಾವುದೊಂದು ಸಂಗತಿಯೂ ತಿಳಿದಿರುವದಿಲ್ಲ. ತಮ್ಮ ಗುಂಪಿನ ಗೌಪ್ಯವನ್ನು ಗುಪ್ತವಾಗಿರಿಸುವ ಬಗ್ಗೆ ಅವರೆಲ್ಲರೂ ಪ್ರತಿಜ್ಞಾಬದ್ಧರಾಗಿರಬಹುದಾಗಿದೆ. ಪ್ರಾಣ ಹೋದರೂ ಅವರಲ್ಲಿಯ ಯಾವನೊಬ್ಬನು ಆ ಗೌಪ್ಯವನ್ನು ಸ್ಫೋಟಗೊಳಿಸಲಾರನು. ಇಷ್ಟೇ ಅಲ್ಲ, ಅವರು ತಮ್ಮ ಸಂಘದ ಮುಖ್ಯಸ್ಥನ ಹೆಸರು ಕೂಡ ಒಡನುಡಿಯುವದಿಲ್ಲ. ಆ ಗುಪ್ತ ಸಂಘದ ಒಳಿಯಲ್ಲಿ ಹೇರಳವಾಗಿ ದ್ರವ್ಯವಿರುತ್ತದೆ. ಅವರು ಅದನ್ನು ನಾನಾ ಛದ್ಮ ನಾಮಗಳಿಂದ ಬೇರೆ ಬೇರೆ ಬ್ಯಾಂಕುಗಳಲ್ಲಿ ಠೇವಾಗಿರಿಸಿರುತ್ತಾರೆ. ಇವರುಗಳಿಂದ ನಡಿಸಲ್ಪಡುತ್ತಿರುವ ಜೂಜಿನ ಅಡ್ಡೆಗಳು ಪೋಲೀಸರ ಪ್ರಯತ್ನದಿಂದ ಆಗಾಗ್ಗೆ ಮುಚ್ಚಲ್ಪಡುತ್ತಿದ್ದರೂ ಮತ್ತೆ ಹೊಸ ಹೊಸ ಅಡ್ಡೆಗಳು ಪ್ರಾರಂಭಿಸಲ್ಪಡುತ್ತಿರುತ್ತವೆ ಬಹು ಪ್ರಯತ್ನದಿಂದ ನನಗೆ ತಿಳಿದಿರುವದೇನಂದರೆ, ಈ ಪುಂಡರ ಮುಖ್ಯಸ್ಥನು ನಮ್ಮ ತೇಮ್ಸ ನದಿಯ ದಂಡೆಯ ಮೇಲಿನ ಯಾವುದೋ ಒಂದು ಕಟ್ಟಡದಲ್ಲಿ ವಾಸಿಸುತ್ತಿರುತ್ತಾನೆಂದು. ಆ ಕಟ್ಟಡದೊಳಗಿಂದ ನದಿಯ ದಂಡೆಯವರೆಗೂ ಒಂದು ನೆಲಮನೆಯಿದೆಯಂತೆ. ಚೀನದೇಶದೊಳಗಿಂದ ಗೌಪ್ಯವಾಗಿ ಸಮುದ್ರ ಮಾರ್ಗದಿಂದ ಬರುವ ಅಫೀಮು ತೇಮ್ಸ ನದಿಯೊಳಗಿನ ಆ ನೆಲಮನೆಯ ಮುಖಾಂತರವಾಗಿಯೇ ಆತನ ಕೈವಶವಾಗುತ್ತಿದ್ದು, ಅವನು ಅದನ್ನು ಆ ತನ್ನ ವಿಸ್ತೃತವಾದ ಕಟ್ಟಡದೊಳಗಿನ ಯಾವುದೊಂದು ಗುಪ್ತ ಸ್ಥಳದಲ್ಲಿ ಶೇಖರಿಸಿಡುತ್ತಿರುವನಂತೆ. ನಾನು ಕೇಳಿರುವದು ಇಷ್ಟೇ ಅಲ್ಲ; ಆ ಪುಂಡರ ದಳಪತಿಯು ಕೇವಲ ನಮ್ಮ ಇಂಗ್ಲಿಷ ಜನಾಂಗವನ್ನೇ ತಿರಸ್ಕರಿಸುತ್ತಿರದೆ, ಸ್ವಜಾತೀಯರನ್ನೂ ತಿರಸ್ಕರಿಸಿ, ಅವರಲ್ಲಿ ಅವಿಶ್ವಾಸವನ್ನೂ ಅಶ್ರದ್ಧೆಯನ್ನೂ ವಹಿಸಿ, ಅವರನ್ನು ಹೆಚ್ಚಾಗಿ ದ್ವೇಷಿಸುತ್ತಿರುವನಂತೆ! ಇಂಥ ಆತನು ಅದ್ಭುತ ಪ್ರಕೃತಿಯವನಲ್ಲದೆ ಮತ್ತೇನು?''

''ಅಹುದು, ಆತನು ಅದ್ಭುತ ಪ್ರಾಣಿಯೇನೋ ನಿಜ; ಆದರೆ ಆತನು ಚೀನ ದೇಶದವನೇ ಅಹುದೇನು?''

''ಅಹುದು; ಆ ಬಗ್ಗೆ ಸಂದೇಹಕ್ಕೆ ಇಂಬು ಇಲ್ಲ.''

ಅದಕ್ಕೆ ಬ್ಲೇಕನು:—ನಿಮ್ಮ ಮಾತುಗಳನ್ನು ಕೇಳಿ ನನ್ನ ಕುತೂಹಲವು ಹೆಚ್ಚಿಬಿಟ್ಟಿದೆ. ನಾನು ಆತನ ತಂಡವನ್ನು ಬೊಗ್ಗು ಒಡಿಯಲಿಕ್ಕೆ ಚೆನ್ನಾಗಿ ಪ್ರಯತ್ನಿಸುತ್ತೇನೆ; ಆದರೂ ಆ ದಳಪತಿಯನ್ನು ಹಿಡಿಯುವದು ಮಾತ್ರ ಅಲೋಚಿಸತಕ್ಕ ಸಂಗತಿಯೇ ಆಗಿರುತ್ತದೆ. ಆತನನ್ನು ಹಿಡಿಯುವ ವಿಷಯದಲ್ಲಿ

ನೀವು ನನಗೆ ನೆರವಾದರೆ ಮಾತ್ರ ನಾನು ಕೃತಕಾರ್ಯನಾಗಬಹುದು.

ಅಷ್ಟರಲ್ಲಿ ಅವರು ಮಾತನಾಡುತ್ತ ಕುಳಿತಿದ್ದ ಆ ಕೋಣೆಯ ಬಾಗಿಲವು ತೆರೆಯಲ್ಪಟ್ಟಿತು. ಕೂಡಲೆ ಒಬ್ಬ ಯುವಕನು ಒಳಗೆ ಬಂದನು. ಅವನನ್ನು ಕಂಡು ಡೆಭೆನಟನು ಬ್ಲೇಕನನ್ನು ಕುರಿತು:—ಬ್ಲೇಕರೇ, ಈತನೇ ರಿಚರ್ಡನು—ನನ್ನ ಮಗನು, ಎಂದನು.

---

## ೩ನೇ ತೆರೆ.

## ಚಾಯ್ನಾ ಫೀಲ್ಡಿನ ಸಿಂಹ.



ರಿಚರ್ಡನು ತನ್ನ ಪ್ರಣಯಿನಿಯ ಸಂಧಾನವನ್ನು ಹೊಂದದ್ದರಿಂದ ಎಷ್ಟು ಅಧೀರನಾಗಿದ್ದನೆಂಬದನ್ನು ಬ್ಲೇಕನು ಆತನ ಮುಖಚರ್ಯೆಯಿಂದ ಒಮ್ಮೆಲೆ ತಿಳಿದನು. ಆತನ ಕಣ್ಣುಗಳು ಒಳಸೇರಿ ಹೋಗಿದ್ದವು. ಹತಾಶಭಾವವು ಒಡೆದು ಕಾಣುತ್ತಿತ್ತು. ಅವನು ಬಂದವನೇ ಬ್ಲೇಕನನ್ನು ಅಭಿನಂದಿಸಿ, ನಿಟ್ಟುಸಿರುಗರೆಯುತ್ತ ಒತ್ತಟ್ಟಿಗೆ ಕುಳಿತು ಬಿಟ್ಟನು.

ಆಗ ಇನ್ಸಪೆಕ್ಟರ ಡೆಭೆನಟನು ರಿಚರ್ಡನನ್ನು ಕುರಿತು:—ತಮ್ಮಾ, ಮತ್ತೇನಾದರೂ ಪತ್ತೆ ಹತ್ತಿತೇನು?

"ಅಪ್ಪಾ, ಏನೂ ತಿಳಿದಿಲ್ಲ. ಇಷ್ಟು ಪ್ರಯತ್ನಪಟ್ಟರೂ ಶ್ರಮವಹಿಸಿದರೂ ಎಲ್ಲವೂ ವ್ಯರ್ಥವೇ ಆದಂತಾಯಿತು. ಇನ್ನು ನಾನು ಅವಳನ್ನು ಪಡೆಯುವ ಆಶೆಯನ್ನು ತ್ಯಜಿಸಿರುವೆನು. ನಾನು ಇನ್ನು ಅವಳನ್ನು ಹುಡುಕುವದಾದರೂ ಎಲ್ಲಿ? ಈ ವಿಪುಲ ಜನವಸತಿಯ ವಿಶಾಲವಾದ ಪಟ್ಟಣಕ್ಕೆ ಬಂದ ಆ ಮೇರಿಯು ಇಲ್ಲಿ ಎಲ್ಲಿಯೋ ಕಾಣದಾಗಿರುತ್ತಾಳೆ. ನಾನು ಆಕೆಯ ಬಗ್ಗೆ ಇತ್ತೀಚೆಗೆ ತಿಳಿದಿರುವ ವಿಶೇಷವೇನೆಂದರೆ—ಮೇರಿಯು ಕಳೆದ ಸೋಮವಾರ ಸಾಯಂಕಾಲಕ್ಕೆ ಅಲ್ಡಗೇಟ ಮತ್ತು ಪಪ್ಪಲು ಇವುಗಳ ಮಧ್ಯದಲ್ಲಿ ಹೇಗೋ ಮಾಯವಾಗಿರುತ್ತಾಳೆ. ಹೇಗೆ ಮತ್ತು ಎಲ್ಲಿಗೆ ಹೋಗಿರಬಹುದೆಂಬದನ್ನು ಅನುಮಾನಿಸುವದೇ ಅಶಕ್ಯವಾಗಿದೆ. ಯಾರೋ ದುಷ್ಟಜನರು ಆಕೆಗೆ ಏನೋ ಸುಳ್ಳು ಹೇಳಿ ಮೋಸಗೊಳಿಸಿ ಅವಳನ್ನು ತಮ್ಮ ಜಾಲದಲ್ಲಿ ತೊಡಗಿಸಿರಬೇಕು; ಇಲ್ಲವೆ ಒತ್ತಾಯದಿಂದ ಎಳೆದೊಯ್ದು ಕೈದು ಮಾಡಿರಬೇಕು. ಹೀಗಿರದಿದ್ದರೆ ಇದುವರೆಗೆ ಅವಳ ಪತ್ತೆ ಹತ್ತದಿರುತ್ತಿರಲಿಲ್ಲ."

"ರಿಚರ್ಡಾ, ಈ ಬಗ್ಗೆ ಇಷ್ಟೊಂದು ಹತಾಶನಾಗಬೇಡ. ನಾನು ಬ್ಲೇಕರಿಗೆ ಈ ಎಲ್ಲ ಸಮಾಚಾರವನ್ನೂ ತಿಳಿಸಿರುತ್ತೇನೆ. ಮೇರಿಯು ಕೆಲ ದಿನಗಳಲ್ಲಿಯೇ ಇಲ್ಲಿಗೆ ಸುಖರೂಪವಾಗಿ ಬರಬಹುದೆಂದು ಇವರಿಗೂ ಅನಿಸುತ್ತಿದೆ."

"ಹಾಗೆ ಸಂಭವಿಸಿದುವಾದರೆ ನಾನು ಬಹು ಮೋದಗೊಂಡೇನು; ಆದರೆ ಅಪ್ಪಾ, ಹಾಗೆ ನಿರಾಶೆಯಲ್ಲಿ ಆಶೆ ತಾಳಬೇಕೆಂದು ಇನ್ನು ನನಗೆ ಅನಿಸುವದಿಲ್ಲ. ಮೇರಿಯು ಇನ್ನು ಬದುಕಿರುವಳೆಂದು ಅನ್ನಬಹುದೇ? ಅವಳು ಇನ್ನೂ ಬದುಕಿದ್ದರೆ, ಮರಣವೇ ಅವಳಿಗೆ ತಕ್ಕದ್ದೆಂದು ತೋರುತ್ತದೆ."

"ಹುಚ್ಚನಂತೆ ಇದೇನು ನುಡಿಯುವೆ? ಇಷ್ಟು ಅಧೈರ್ಯಗೊಂಡರೆ ನಡೆದೀತೆ? ಕೆಟ್ಟ ಸುದ್ದಿಯನ್ನು ಕೇಳುವದಕ್ಕಿಂತ, ಯಾವ ಸುದ್ದಿಯನ್ನೂ ಕೇಳದಿರುವದು ಎಷ್ಟೋ ಪಾಲು ಮೇಲು. ನಿನ್ನ ಮನಸ್ಸಿನ ವ್ಯಾಕುಲತೆಯನ್ನು ನಾನು ಚೆನ್ನಾಗಿ ಬಲ್ಲೆನು........"ಹೀಗೆ ಡಭೆನಟನು ಮಗನಿಗೆ ಏನೇನೋ ಸಮಾಧಾನದ ಮಾತು ಹೇಳುತ್ತಿರಲಿಕ್ಕೆ ಯಾರೋ ಹೊರಗಿನಿಂದ ಆ ಕೋಣೆಯ ಕದವನ್ನು ತಟ್ಟಿದರು ಪರಕ್ಷಣದಲ್ಲಿ ಒಬ್ಬ ಸಾರ್ಜಂಟನು ಒಳಗೆ ಬಂದು ರಿಚರ್ಡನ ಕೈಗೊಂದು ಪತ್ರಕೊಟ್ಟು ಹೋದನು. ರಿಚರ್ಡನು ಆ ಪತ್ರವನ್ನು ಒಂದೇ ಉಸುರಿನಿಂದ ಓದಿ ಮುಗಿಸಿ, ದಿಙ್ಮೂಢನಾದನು. ಆತನ ಮುಖವು ಹುಚ್ಚನಂತಾಯಿತು. ಆಗ ಆ ಪತ್ರವು ಆತನ ನಡುಗುವ ಕೈಯಿಂದ ಜಾರಿ ಮೇಜಿನ ಮೇಲೆ ಬಿದ್ದಿತು.

ಕೂಡಲೆ ಡಭೆನಟನು ವಿಸ್ಮಯಭರದಿಂದ ಆ ಪತ್ರವನ್ನು ತಕ್ಕೊಂಡು ಅದರ ಸಂಗತಿಗಳನ್ನು ಬ್ಲೇಕನೆದುರಿಗೆ ಓದಿ ಹೇಳಿದನು. ಅದರಲ್ಲಿ ಹೀಗೆ ಬರೆದಿತ್ತು:—

"ಪ್ರಿಯ ಮಹಾನುಭಾವರೇ, ತಮಗೆ ಈ ಪತ್ರಮೂಲಕ ತಿಳಿಸಿಡುವದೇನಂದರೆ, ಸಮರಸೆಟ್ ಜಿಲ್ಲೆಯಿಂದ ಈ ಲಂಡನ್ನಪಟ್ಟಣಕ್ಕೆ ಬಂದಿದ್ದ ಮೇರಿ ಎಂಬ ಯುವತಿಯು ಕಳೆದ ಸೋಮವಾರ ನನ್ನಿಂದ ಹಿಡಿಯಲ್ಪಟ್ಟು, ನನ್ನ ಮನೆಯಲ್ಲಿ ಸೆರೆಯಾಗಿರುತ್ತಾಳೆ. ನಾನು ಯಾವ ಉದ್ದೇಶಕ್ಕಾಗಿ ಆ ತರುಣಿಯನ್ನು ಸೆರೆ ಹಿಡಿದಿರುವೆನೋ ಅದನ್ನು ನಿಮಗೆ ಸಂಕ್ಷೇಪವಾಗಿ ಹೇಳಬಯಸುತ್ತೇನೆ; ನಾನು ಪೋಲೀಸರಿಗೆ ಎಳ್ಳಷ್ಟು ಅಂಜದಿದ್ದರೂ-ಲೆಕ್ಕಿಸದಿದ್ದರೂ ಅವರು ನನ್ನನ್ನು ಪತ್ತೆ ಹಚ್ಚುವ ಹಾಗು ನನ್ನ ವಾಸಸ್ಥಳವನ್ನು ತಿಳಿಯುವ ಮತ್ತು ನಾನು ಯಾವ ಕೆಲಸದಲ್ಲಿ ತೊಡಗಿರುವೆನೋ ಅದನ್ನು ತಿಳಿಯುವ ಸಲುವಾಗಿ ಯಾವ ಬಗೆಯಿಂದ ಪ್ರಯತ್ನಿಸುತ್ತಿರುವರೆಂಬದನ್ನು ನೋಡಿದರೆ ಬಹು ಕುತೂಹಲವುಂಟಾಗುವಂತಿದೆ. ನೀವು ಹಾಗು ನಿಮ್ಮ ತಂದೆ

ಉಭಯತರೂ ನನ್ನ ಅನಿಷ್ಟ ಸಾಧನದ ಬಗ್ಗೆ ಹೆಚ್ಚಾಗಿ ಪ್ರಯತ್ನಿಸುತ್ತಿರುವಿರಿ. ಇನ್ನು ಮುಂದೆ ನೀವು ಆ ಪ್ರಯತ್ನವನ್ನು ಬಿಟ್ಟು ಬಿಡಬೇಕೆಂದೇ ನಾನು ಆ ಮೇರಿಯನ್ನು ಜಾಮೀನಿಗಾಗಿ ನನ್ನಲ್ಲಿ ಸೆರೆಯಿರಿಸಿಕೊಂಡಿರುತ್ತೇನೆ. ನೀವುಗಳು ಎಲ್ಲಿಯವರೆಗೆ ನನ್ನ ದ್ರೋಹವನ್ನು ಬಗೆಯಲಾರಿರೋ, ಅಲ್ಲಿಯ ವರೆಗೆ ನಾನು ಆ ಯುವತಿಯ ಕೂದಲಿಗೆ ಕೂಡ ಧಕ್ಕೆ ಹಚ್ಚಲಿಕ್ಕಿಲ್ಲ. ನೀವುಗಳು ನನ್ನ ಉಸಾಬರಿಯನ್ನು ಬಿಟ್ಟು ಬಿಟ್ಟೀರೆಂಬದು ನನ್ನ ಖಾತ್ರಿಯಾದ ಕೂಡಲೆ ನಾನು ಅವಳನ್ನು ಬಂಧಮುಕ್ತಗೊಳಿಸಿ ನಿಮ್ಮಲ್ಲಿಗೆ ಸುಖರೂಪವಾಗಿ ತಂದು ತಲುಪಿಸುತ್ತೇನೆ. ನನ್ನ ಈ ಅಪ್ಪಣೆಯನ್ನು ಪಾಲಿಸದೆ ಇದಕ್ಕೆ ವಿರುದ್ಧವಾಗಿ ನಡೆದರೆ, ನೀವುಗಳು ಆಕೆಯ ಆಶೆಯನ್ನು ಬಿಟ್ಟೇಬಿಡಬೇಕಾಗುತ್ತದೆ. ನೀವು ಆಕೆಯನ್ನು ಪತ್ತೆ ಹಚ್ಚಲಿಕ್ಕೆ ಪ್ರಯತ್ನಿಸಿದರೆ ಅದೆಂದೂ ಸಫಲವಾಗುವ ಸಂಭವವಿಲ್ಲವು. ನೀವು ಬೇಕಾದ ಹಾಗೆ ಪ್ರಯತ್ನಿಸಿದರೂ ನಿಮಗೆ ನನ್ನ ಪತ್ತೆ ಹತ್ತಲಾರದು. ಪೋಲೀಸರ ಸಾಮ್ರಾಜ್ಯವಾದ ಈ ಲಂಡನ್ನ ಪಟ್ಟಣದಲ್ಲಿ ನಾನು ಸಂಪೂರ್ಣ ನಿರ್ಭಯನೂ ನಿರಾಪದನೂ ಆಗಿರುತ್ತೇನೆ. ನಿಮ್ಮ ನಂಬಿಗೆಯ,

ಚಾಯ್ನಾ ಫೀಲ್ಡಿನ ಸಿಂಹ.''

ಆ ಪತ್ರವನ್ನೋದಿ ಡೆಭೆನಟನು ಬಹು ಗೊಂದಲದಲ್ಲಿ ಬಿದ್ದನು. ಕ್ರೋಧದಿಂದಲೂ ಕ್ಷೋಭದಿಂದಲೂ ಆತನ ಕಣ್ಣುಗಳು ಕೆಂಪಡರಿದವು. ರಿಚರ್ಡನೂ ಸಿಟ್ಟು ಬೆಂಕಿಯಾಗಿ ಕರ್ಕಶ ದನಿಯಿಂದ:—''ಮೇರಿಯು ಆ ದುಷ್ಟನ ಕೈ ಸೇರಿರುವಳೇ? ಚಾಯನಾ ಫೀಲ್ಡಿನೊಳಗಿನ ಆ ಪುಂಡರ ಮುಖಂಡನ ಮನೆಯಲ್ಲಿ ಸೆರೆಯಾಳಾಗಿರುವಳೇ? ಅಬ್ಬಬ್ಬ! ಆ ಪಿಶಾಚಿಯ ಸಾಹಸವಾದರೂ ಎಷ್ಟು? ನಾನು ಆಕೆಯ ಬಗ್ಗೆ ಯಾವ ಭಯ ತಾಳಿದ್ದೆನೋ, ಅದಕ್ಕಿಂತಲೂ ಹೆಚ್ಚಿನ ಭಯಾನಕವಿದಾಗಿರುತ್ತದೆ ಈ ಬಗೆಯ ಪ್ರಸಂಗವೊದಗಿದರೆ ಅದಾವನು ಕೋಪಗೊಳ್ಳದಿದ್ದಾನು? ನಾನು ಆ ವಿಪದ್ಗ್ರಸ್ತ ರಮಣಿಯನ್ನು ಆ ಸೈತಾನನ ದವಡೆಯೊಳಗಿಂದ ಬಿಡಿಸುವೆನು; ಇದಕ್ಕಾಗಿ ಆ ಚಾಯನಾ ಫೀಲ್ಡಿನೊಳಗಿನ ಪ್ರತಿಯೊಂದು ಮನೆಯನ್ನು ಶೋಧಿಸಬೇಕಾದರೂ ಶೋಧಿಸುವೆನು. ಆ ಚೀನಿಗರ ಹಳ್ಳಿಯನ್ನು ಬೊಕ್‌ಬೊಲರ್ಗಿ ಮಾಡುವೆನು. ಇನ್ನು ತಡ ಮಾಡುವದು ವಿಹಿತವಲ್ಲ. ಇಂದು ರಾತ್ರಿಯೇ ನಾನು ಅಲ್ಲಿಗೆ ತೆರಳುವೆನು; ಮತ್ತು ಯಾವುದೊಂದು ಯುಕ್ತಿಯಿಂದ ಆ ನರ ಪಿಶಾಚಿಯನ್ನು ಸೆರೆ ಹಿಡಿಯುವದು ಸಾಧ್ಯವಾದರೆ....''

ಇನ್ಸಪೆಕ್ಟರ ಡೆಭೆನಟನು ಮಗನನ್ನು ಹೆಚ್ಚು ಮಾತಾಡಗೊಡದೆ:— ''ರಿಚರ್ಡ, ಶಾಂತನಾಗು ಸಮಾಧಾನ ತಾಳು. ಸಿಟ್ಟಿನಿಂದ ಅಧೀರನಾಗಿ ಹೀಗೆ ಬಾಯಿಗೆ ಬಂದ ಹಾಗೆ ಮಾತಾಡಿದರೆ ಆಗುವ ಪ್ರಯೋಜನವೇನು?

ನೀನು ಬಾಯಿಂದ ಏನೇನು ನುಡಿದೆಯೋ ಅದೆಲ್ಲವನ್ನು ಕೃತಿಯಲ್ಲಿ ತರುವದು ಬಹು ಕಠಿಣವೆಂಬದು ನಿನಗೆ ಗೊತ್ತಿಲ್ಲವೆಂತಿಲ್ಲ. ಈಗ ನೀನು ಬಹು ಸಂತಾಪಗೊಂಡಿರುತ್ತೀಯೆ. ಕ್ರೋಧದಿಂದ ನಿನಗೆ ಹಿತಾ-ಹಿತಗಳು ಕಾಣದಂತಾಗಿವೆ. ನೀನು ಈ ಅಧೀರತೆಯನ್ನೂ ಚಾಂಚಲ್ಯವನ್ನೂ ಬಿಟ್ಟು ಬಿಡು. ಧೈರ್ಯವನ್ನು ತಾಳು. ಬ್ಲೇಕರು ಈ ಸಂಕಟ ಸಮಯದಲ್ಲಿ ನಮಗೆ ನೆರವಾಗಿಯೇ ನೆರವಾಗುವರು. ಪೋಲೀಸ ಕಮಿಶನರರ ಅಪ್ಪಣೆಯ ಮೇರೆಗೆ ಇವರು ಆ ಪುಂಡರನ್ನು ದಂಡಿಸುವ ಸಂಕಲ್ಪವನ್ನೇ ಮಾಡಿರುತ್ತಾರೆ.'' ಎಂದು ಹೇಳಿದನು.

''ಅಪ್ಪಾ, ನಾನು ಬ್ಲೇಕರ ಕೆಲಸದ ಬಗ್ಗೆ ಶಂಕೆಪಡುವಂತಿಲ್ಲ; ಆದರೆ ಇವರು ಯಾವ ಕೆಲಸವನ್ನೂ ಎಂದೂ ದುಡುಕಿನಿಂದ ಮಾಡುವವರಲ್ಲ. ಇವರ ಈ ಕಾಲವಿಲಂಬನದ ಲಾಭ ಪಡೆದು, ಆ ದುಷ್ಟನು ಮೇರಿಯ ಪ್ರಾಣ ತಕ್ಕೊಳ್ಳದಿರುವನೇ?''

ಡೆಭೆನಟನು:—ಇಲ್ಲ; ಆ ಅಂಜಿಕೆಯು ಇರುವದಿಲ್ಲವು; ಯಾಕಂದರೆ ಆ ವೈರಿಯ ಉದ್ದೇಶವು ಹಾಗಿರುವದಿಲ್ಲ. ನಿನ್ನ ಸಂಕಲ್ಪದಂತೆ ನಡೆಯಹತ್ತಿದರೆ ಮಾತ್ರ ಆಕೆಯು ಅನಿಷ್ಟವಾಗಬಹುದಾಗಿದೆ. ನಿನ್ನ ಪ್ರಯತ್ನಗಳಿಂದ ಮೇರಿಗೆ ಎಳ್ಳಷ್ಟು ಉಪಕಾರವಾಗದೆ, ಪ್ರಾಣಾಂತಿಕ ಅಪಕಾರವು ಮಾತ್ರ ಆಗದಿರದು.''

ರಿಚರ್ಡನು ತನ್ನ ತಂದೆಯ ಮಾತಿಗೆ ಪ್ರತಿ ಮಾತನಾಡದೆ, ಏನನ್ನೋ ಯೋಚಿಸುತ್ತ ಆ ಕೋಣೆಯಲ್ಲಿ ಇತ್ತಿಂದತ್ತ ಅತ್ತಿಂದಿತ್ತ ಅಡ್ಡಾಡಹತ್ತಿದನು. ಕೆಲಕಾಲದಲ್ಲಿಯೇ ಆತನ ಮನಸ್ಸು ಮೊದಲಿಗಿಂತಲೂ ತುಸ ಶಾಂತವಾಯಿತು; ಆದರೆ ಆತನ ಉತ್ಕಂಠೆಯು ಮಾತ್ರ ತೆಗ್ಗಲಿಲ್ಲ. ಇಷ್ಟರಲ್ಲಿ ಸ್ಮಿತ್ಥನು ಆ ಪತ್ರವನ್ನೋದಿಕೊಂಡು, ನಂತರ ಅದನ್ನು ಬ್ಲೇಕನ ಕೈಗಿತ್ತನು ಬ್ಲೇಕನು ಆ ಪತ್ರವನ್ನು ಮೊದಲಿನಿಂದ ಕೊನೆಯ ವರೆಗೆ ಎರಡು ಸಾರೆ ನಿಶ್ಶಬ್ದವಾಗಿ ಓದಿ ಮುಗಿಸಿದನು. ಆ ಮೇಲೆ ಅವನು ಮೆಲ್ಲನೆ: ''ಈ ಪತ್ರವು ಶುದ್ಧವಾದ ಇಂಗ್ಲಿಷ ಭಾಷೆಯಲ್ಲಿ ಬರೆಯಲ್ಪಟ್ಟಿದೆ. ಇದರಲ್ಲಿ ಎಲ್ಲಿಯೂ ಒಂದು ಅಕ್ಷರವು ಕೂಡ ತಪ್ಪಿರುವದಿಲ್ಲವು. ಯಾವ ಚೀನಿಗನ ಲೆಕ್ಕಣಿಕೆಯಿಂದಲೂ ಇಷ್ಟು ಶುದ್ಧವಾದ ಇಂಗ್ಲಿಷ ಭಾಷೆಯು ಲಿಪಿಬದ್ಧವಾದೀತೆಂದು ನನಗನಿಸುವದಿಲ್ಲ!!''

ಸ್ಮಿತ್ಥನು:—''ಒಡೆಯರೇ, ತಮ್ಮ ಮಾತು ಯಥಾರ್ಥವಾದದ್ದಾಗಿದೆ. ಈ ಪತ್ರವನ್ನೋದುತ್ತಲೆ ನನಗೂ ಹಾಗೆಯೇ ಅನಿಸಿರುತ್ತದೆ. ನಾನು ಇಂಗ್ಲಿಷ ವಂಶಜನು. ಇಂಗ್ಲಿಷವು ನನ್ನ ಮಾತೃಭಾಷೆಯು; ಹೀಗಿದ್ದರೂ ನಾನು ಕೂಡ ಈ ಪತ್ರ ಲೇಖಕ ಚೀನಿಗನಸರಿತ ಚಲೋ ಇಂಗ್ಲಿಷ ಭಾಷೆಯನ್ನು ಬರೆಯಲಾರೆನು.''

ಅದಕ್ಕೆ ಡಭೆನಸಟನು:—ಆತನು ಬಹು ದಿನಗಳಿಂದ ಈ ದೇಶದಲ್ಲೇ ವಾಸವಾಗಿರಬಹುದಾಗಿದೆ. ಅವನು ಇಲ್ಲಿಯೇ ಶಿಕ್ಷಣ ಪಡೆದಿರುವಂತೆ ತೋರುತ್ತದೆ; ಅದರಿಂದ ಒಳ್ಳೇ ಇಂಗ್ಲಿಷ ಭಾಷೆ ಬರೆಯುವದು ಅವನಿಗೆ ಅಸಂಭವವಾಗಿರುವದಿಲ್ಲವು. ನಾನು ಇಲ್ಲಿರುವ ಮೂರು ನಾಲ್ಕು ಜನ ಬಂಗಾಲೀ ಸದ್ಗೃಹಸ್ಥರನ್ನು ಬಲ್ಲೆನು. ಅವರುಗಳ ಇಂಗ್ಲಿಷ ಭಾಷಾಜ್ಞಾನವು ಯಾವ ಇಂಗ್ಲಿಷ ಮನುಷ್ಯನಿಗಿಂತಲೂ ಕಡಿಮೆಯಾಗಿರುವದಿಲ್ಲ ಇಷ್ಟೇ ಅಲ್ಲ, ಅವರಲ್ಲಿಯ ಒಬ್ಬನು ಇಂಗ್ಲಿಷ ಭಾಷೆಯಲ್ಲಿ ಕಾವ್ಯಗಳನ್ನು ರಚಿಸಿ, 'ನೋಬಲ್ಲ ಪ್ರಾಯಿಜ' ನ್ನು ಪಡೆದಿರುತ್ತಾನೆ!

"ಅಹುದು. ಡಾಕ್ಟರ ರವೀಂದ್ರನಾಥ ಟಾಗೋರರು ಅಸಾಧಾರಣ ಪ್ರತಿಭಾ ಸಂಪನ್ನರು. ಅಸಾಮಾನ್ಯ ಬುದ್ಧಿವಂತರು. ಯಾವನೊಬ್ಬ ಸಾಮಾನ್ಯನೊಡನೆ ಅವರನ್ನು ಹೋಲಿಸುವಂತಿಲ್ಲ, ಆದರೆ ಈ ಚೀನಿಗರ ಮಾತೇ ಬೇರೆ. ಇವರು ಈ ದೇಶಕ್ಕೆ ಬಂದು ಎಂಥ ಉಚ್ಚ ಶಿಕ್ಷಣವನ್ನೇ ಪಡೆಯಲಿ, ಚೀನೀ ಭಾಷೆಯ ಪ್ರಾಮುಖ್ಯ ಶಬ್ದಾಡಂಬರವೂ, ಅಲಂಕಾರಗಳ ಶೈಲಿಯೂ ಅತಿಶಯೋಕ್ತಿಗಳ ಲೋಭವೂ ಅವರಿಂದ ಬಿಚ್ಚಿಗಲಿಕ್ಕೆ ಆಗುವದಿಲ್ಲವು. ಈ ಪತ್ರದಲ್ಲಿ ಆ ವೈಶಿಷ್ಟ್ಯದ ಅಭಾವವನ್ನು ಕಂಡೇ ಈ ಪತ್ರಲೇಖಕನು ಶುದ್ಧ ಚೀನಿಗನಹುದೋ ಅಲ್ಲವೋ ಎಂಬ ಬಗ್ಗೆ ಸಂದೇಹವುಂಟಾಗುತ್ತಿದೆ."

ಡೆಭಿನಟನು ಅದಕ್ಕೆ:-ಬ್ಲೇಕರೇ, ನಿಮ್ಮ ಈ ಅನುಮಾನಕ್ಕೆ ನಾನು ಒಪ್ಪಲಾರೆನು. ಮೇಲಾಗಿ ನಿಮ್ಮ ಈ ಆಶಂಕೆಯಿಂದ ಆ ಮೇರಿಯ ಉದ್ಧಾರಕ್ಕೆ ಅದಾವ ಸಹಾಯವೂ ಆಗಲಾರದು.

"ನಿಜ; ಆ ಆಶೆಯಿರುವದಿಲ್ಲ. ಇನ್ನು ಅವಳ ಉದ್ಧಾರಕ್ಕಾಗಿ ಒಮ್ಮೆಲೆ ಪ್ರಯತ್ನಿಸುವದೂ ತಕ್ಕದ್ದಾಗಿರುವದಿಲ್ಲ. ಎಲ್ಲಕ್ಕೂ ಮೊದಲು ನಾವು ಹೇಗಾದರೂ ಮಾಡಿ ಈ ಚಾಯನಾ ಫೀಲ್ಡಿನ ಸಿಂಹನ ಹೆಸರನ್ನೂ ಆತನ ವಾಸಸ್ಥಳವನ್ನೂ ಗೊತ್ತುಹಚ್ಚಬೇಕು"

ಬ್ಲೇಕನ ಈ ನುಡಿಯನ್ನು ಕೇಳಿ ಸಹಿಸಲಾರದೆ, ರಿಚರ್ಡನು:-"ಬೇಡ; ಇನ್ನು ಹೀಗೆ ಸಾವಕಾಶವಾಗಿಯೂ ಆಗಾಗ್ಗೆ ಯೋಚಿಸುತ್ತಲೂ ಕೆಲಸ ಮಾಡಲಿಕ್ಕೆ ಸಮಯವಿಲ್ಲ. ಯಾವನ ಮನೆಗೆ ಬೆಂಕಿ ಹತ್ತಿದೆಯೋ, ಅವನು ತ್ವರಿತ ಉಪಾಯಗಳಿಂದ ಆ ಬೆಂಕಿಯನ್ನು ನಂದಿಸುವ ಕೆಲಸಕ್ಕೆ ಹತ್ತಬೇಕೋ ಇಲ್ಲವೆ ಬೆಂಕಿ ಹಚ್ಚಿದವನ ಪತ್ತೆಯನ್ನು ಸಪ್ರಮಾಣವಾಗಿ ಹಚ್ಚಿ, ಆತನನ್ನು ದಂಡಿಸುವ ಕಾರ್ಯಕ್ಕೆ ತೊಡಗಬೇಕೋ? ಆ ದುಷ್ಟರ ಸೆರೆಯಲ್ಲಿ ಸಿಕ್ಕಿರುವ ಮೇರಿಯು ಎಂಥ ಅವಮಾನವನ್ನು ಸಹಿಸುತ್ತಿರುವಳಾದೀತು? ಕಾರಣ ಸ್ವಲ್ಪವೂ

ತಡಮಾಡದೆ ಎಲ್ಲಕ್ಕೂ ಮೊದಲು ನಾವು ಆಕೆಯ ಬಂಧಮುಕ್ತತೆಗೆ ತೊಡಗ ಬೇಕು."

"ನನಗಂತೂ ಹಾಗೆನಿಸುವದಿಲ್ಲ. ಈ ಪತ್ರದಲ್ಲಿ ಲೇಖಕನು ತನ್ನ ಉದ್ದೇಶವನ್ನು ಸ್ಪಷ್ಟವಾಗಿಯೇ ಬರೆದಿರುತ್ತಾನೆ. ಈ ಲೇಖನದಲ್ಲಿ ಕಾಪ ಟ್ಯದ ಲವಲೇಶವೂ ಅನುಮಾನವಾಗುವಂತಿಲ್ಲ. ಅವನು ಹೀಗೆ ಸುಳ್ಳು ಬರೆದಿ ರುವನೆಂದೂ ಅನಿಸುವದಿಲ್ಲ."

"ಆದರೆ ಆತನು ಯಾವ ಕರಾರಿನಿಂದ ಮೇರಿಯು ಕೂದಲಿಗೆ ಧಕ್ಕೆ ಹಚ್ಚ ಲಿಕ್ಕಿಲ್ಲೆಂದು ತಿಳಿಸಿರುವನೋ-ಆದರಂತೆ ನಡೆಯುಕ್ಕೆ ನಾವು ಒಪ್ಪಬೇಕೇನು? ಆತನನ್ನು ಹಿಡಿಯುವದನ್ನು ಬಿಟ್ಟುಬಿಡುವದೂ, ಅವನು ಹೇಳಿದಂತೆ ಚಾ-ಚೂ ಎನ್ನದೆ ನಡೆಯುವದೂ ನಮಗೆ ಸಮ್ಮತವಾದೀತೇನು? ತಾವಾದರೂ ಆತ ನನ್ನು ದಂಡಿಸುವ ಕೃತಕಾರ್ಯವನ್ನು ಬಿಟ್ಟು, ಉದಾಸೀನ ಭಾವದಿಂದ ಸುಮ್ಮ ನಿರುವದು ವಿಹಿತವೇ?"

"ನಾನು ಆ ಬಗ್ಗೆ ಖಂಡಿತವಾಗಿಯೂ ಔದಾಸೀನ್ಯ ತಾಳಲಾರೆನು."

ಅದಕ್ಕೆ ಡೆಭೆನಟನು:—"ಆದರೆ ತಮಗೆ ನಮ್ಮಗಳ ಸಹಾಯದ ಅವಶ್ಯ ವಿದೆಯಷ್ಟೆ?"

"ಬಹಿರಂಗದಲ್ಲಿ ನೀವು ನನಗೆ ಸಹಾಯ ಮಾಡದಿದ್ದರೂ ಚಿಂತೆಯಿಲ್ಲ. ಡೆಭೆನಟರೇ, ಠಕ್ಕರ ಕೂಡ ಠಕ್ಕತನದಿಂದ ನಡೆಯದಿದ್ದರೆ ಎಷ್ಟೋ ಪ್ರಸಂಗ ಗಳಲ್ಲಿ ಮೋಸಹೋಗಬೇಕಾಗುವದು. ನೀವೂ ನಿಮ್ಮ ಅನುಚರರೂ ಬಹಿ ರಂಗದಲ್ಲಿ ಸಂಪೂರ್ಣ ನಿರ್ಲಿಪ್ತರಾಗಿರತಕ್ಕದ್ದು: ಅಂದರೆ ನೀವು ಆ ಪುಂಡರ ಅನುಸಂಧಾನವನ್ನು ಬಿಟ್ಟಂತಾಗುವದು. ಅವರನ್ನು ಹಿಡಿಯುವ ಬಗ್ಗೆ ಏನೇನು ಮಾಡಬೇಕಾಗುವದೋ ಅದೆಲ್ಲವನ್ನೂ ನಾನೊಬ್ಬನೇ ಮಾಡುವೆನು. ಎಲ್ಲಿಯ ವರೆಗೆ ನೀವು ಬಹಿರಂಗವಾಗಿ ನನಗೆ ಸಹಾಯಮಾಡಲೆತ್ನಿಸುವದಿಲ್ಲವೋ, ಅಲ್ಲಿಯ ವರೆಗೆ ಮೇರಿಯು ತೊಂದರೆಗೆ ಆಸ್ಪದವಿರುವದಿಲ್ಲವು.

ಡೆಭೆನಟ:—ಮೇರಿಯು ಈ ದುಷ್ಟರ ಕೈಸೇರಿ ಸೆರೆಯಾಳಾಗಿರುವಳೆಂಬ ದನ್ನು ನಾವು ನಮ್ಮ ರಿಪೋರ್ಟ-ಅಹವಾಲುಗಳಲ್ಲಿ ಉಲ್ಲೇಖಿಸಕೂಡದೇನು?

ಬ್ಲೇಕ:-ಬೇಡ. ಖಂಡಿತವಾಗಿಯೂ ಅದನ್ನು ಉಲ್ಲೇಖಿಸುವ ಕಾರಣವಿಲ್ಲ.

ಡೆಭೆ:—ನೀವು ಯಾವ ಬಗೆಯಿಂದ ಈ ಕೆಲಸವನ್ನು ಪೂರೈಸುವಿರೆಂಬ ದನ್ನು ತಿಳಿಯಲಪೇಕ್ಷೆಯಿದೆ.

ಬ್ಲೇಕ:—ನಾಳೆ ಸಾಯಂಕಾಲಕ್ಕೆ ನಿಮ್ಮನ್ನು ಮತ್ತೆ ಕಂಡು ಈ ವಿಷ

ಯವಾಗಿ ಮಾತನಾಡುವೆನು. ಇನ್ನು ನಾವು ಹೊರಡುವೆವು. ಸ್ಮಿತ್ಥಾ, ಹೊರಡು.

ಹೀಗೆಂದು ನುಡಿದು ಬ್ಲೇಕನು ಸ್ಮಿತ್ಥನೊಡನೆ ಆ ಪಪ್ಪುಲಜೇಲಿನೊಳಗಿಂದ ಹೊರಬಿದ್ದನು. ದೊಡ್ಡ ದಾರಿಗೆ ಬಂದ ಒಳಿಕ ಅವರೊಂದು ಬಾಡಿಗೆಯ ಬಂಡಿಯನ್ನು ಗೊತ್ತು ಮಾಡಿಕೊಂಡು ಬೇಕಾರ ಸ್ಟ್ರೀಟಿನೊಳಗಿನ ತಮ್ಮ ಮನೆಗೆ ನಡೆದರು. ಆಗ ರಾತ್ರಿಯು ಹೆಚ್ಚಾಗಿದ್ದಿತು. ಊಟವಾದ ಬಳಿಕ ಬ್ಲೇಕನು ಕಾಗದ-ಮಸಿಗಳನ್ನು ತಕ್ಕೊಂಡು ಬಂದು ಪತ್ರ ಬರೆಯತೊಡಗಿದನು.

ಆಗ ಸ್ಮಿತ್ಥನು:—ಧಣಿಯರೇ, ಈ ಪತ್ರವನ್ನಾರಿಗೆ ಬರೆಯುವದು?

ಬ್ಲೇಕ:—ಚಾಊ-ಇಯಾಂಗನಿಗೆ.

ಬ್ಲೇಕನಿಗೂ ಚಾಊ-ಇಯಾಂಗನಿಗೂ ಪುರಾಣಾನುಬಂಧುತ್ವವಿದ್ದಿತು. ಆತನು ಒಳ್ಳೇ ಧೂರ್ತನೂ, ಕಾರ್ಯದಕ್ಷನೂ ಆಗಿದ್ದನು. ಅವನು ಪೇಕೀನ ಪಟ್ಟಣದೊಳಗಿನ ಯಾವನೊಬ್ಬ ಶ್ರೇಷ್ಠ ರಾಜಾಧಿಕಾರಿಯ ಮಗನು. ಸ್ವದೇಶದಲ್ಲಿ ರಾಜದ್ರೋಹದ ಪೇಚಿನಲ್ಲಿ ಸಿಕ್ಕದ್ದರಿಂದ ಚೀನದೇಶದ ಪೋಲೀಸರು ಆತನನ್ನು ಹಿಡಿದು ಶಿಕ್ಷಿಸುವ ಪ್ರಯತ್ನಕ್ಕೆ ತೊಡಗಲು, ಅವನು ಜೀವಭಯದಿಂದ ಇಂಗ್ಲಂಡಕ್ಕೆ ಓಡಿ ಬಂದಿದ್ದನು. ಲಂಡನ್ನಿಗೆ ಬಂದು ಅಲ್ಲಿಯ ಪೋಲೀಸ ಕಮಿಶನರರ ಕೈಕೆಳಗೆ ಗುಪ್ತಪೋಲೀಸನ ಕೆಲಸ ಮಾಡಹತ್ತಿದ್ದನು. ಇಂಗ್ಲಿಷರ ಪಕ್ಷವಹಿಸಿ ಲಂಡನ್ನಿಗೆ ಬಂದ ಇಂಗ್ಲಿಷರ ಶತ್ರುಗಳಾದ ಚೀನೀಗರ ಅನಿಷ್ಟ ಬಗೆಯಲಿಕ್ಕೆ ಅವನು ಹಿಂದು ಮುಂದೆ ನೋಡುತ್ತಿರಲಿಲ್ಲ. ಅದಕ್ಕಾಗಿ ಚಾಯ್ನಾಫೀಲ್ಡಿನೊಳಗಿನ ಸಮಸ್ತ ಚೀನಿಗರೂ ಆತನನ್ನು ಸ್ವಜನದ್ರೋಹಿಯೆಂದು ಭಾವಿಸಿದ್ದರು; ಆದರೆ ಬ್ಲೇಕನಂತಹ ಸುಪ್ರಸಿದ್ಧ ಪತ್ತೇದಾರನೂ ಲಂಡನ್ನಿನ ಬೇರೆ ಎಲ್ಲ ಪೋಲೀಸರೂ ಆ ಚಾಊ-ಇಯಾಂಗನನ್ನು ಚೀನದ ವಿಭೀಷಣನೆಂದು ತಿಳಿದು, ಅವನಲ್ಲಿ ಹೆಚ್ಚಾಗಿ ವಿಶ್ವಾಸವಿಟ್ಟು, ಆತನನ್ನು ಚೆನ್ನಾಗಿ ಸನ್ಮಾನಿಸುತ್ತಿದ್ದರು.



೯ನೇ ತೆರೆ.

## ಪತ್ತೆದಾರ ಚಾಲೂ-ಇಯಾಂಗ.



ಮರುದಿನ ಬೆಳಗಿನ ೧೧ ಗಂಟೆಗೆ ಬ್ಲೇಕನ ಮನೆಯ ಮುಂಬಾಗಿಲಿನ ಒಳಿಯ ಗಂಟೆಯು 'ಥಣಣಣಣ'' ಬಾರಿಸಹತ್ತಿತು. ಕೂಡಲೆ ಮನೆಗೆಲಸಗಳಲ್ಲಿ ತೊಡಗಿದ್ದ ಬ್ಲೇಕನ ಮನೆಯ ಅಡುಗೆಯವಳು ಬಾಗಿಲ ತೆರೆದು ನೋಡುತ್ತಾಳೆ, ಒಬ್ಬ ಸೊಟಗಿದ ಗಿಡ್ಡ ವಿದೇಶೀಯ ಮನುಷ್ಯನು ಇಂಗ್ಲಿಷ ಪದ್ಧತಿಯ ವೇಷ ಭೂಷಣಗಳಿಂದ ಸಜ್ಜಾಗಿ ಒಂದು ಬಾಗಿಲ್ಲಿ ನಿಂತಿರುತ್ತಾನೆ. ಆ ಆಗಂತುಕನ ಅಚ್ಚ ಹಳದೀ ಮೈಬಣ್ಣ ಮತ್ತು ಮೊಂಡ ಮೂಗು ಇವುಗಳ ನಿರೀಕ್ಷಣದಿಂದ ಈತನು ಚೀನೀ ಮನುಷ್ಯನೇ ಎಂಬದನ್ನು ಆ ಪಾಕಕೋವಿದಳು ಕೂಡಲೆ ತಿಳಿದಳು. ಜೊಂಡಿಗಗಳನ್ನು ಪಟಪಟನೆ ಮುಕ್ಕುವ ಆ ಚೀನಿಗರನ್ನು ಅವಳು ಹೆಚ್ಚಾಗಿ ತಿರಸ್ಕರಿಸುತ್ತಿದ್ದಳು; ಆದರಿಂದ ಸಂದಿಗ್ಧಭಾವದಿಂದ ಆತನ ಕಡೆಗೆ ನೋಡುತ್ತ ಅವನನ್ನುದ್ದೇಶಿಸಿ:—ನೀನು ಇಲ್ಲಿಗೇಕೆ ಬಂದಿರುತ್ತೀ? ಎಂದು ಕೇಳಿದಳು.

''ಬ್ಲೇಕಮಹಾಶಯರನ್ನು ಕಾಣಬಂದಿದ್ದೇನೆ'' ಎಂದು ಆತನು ನುಡಿದನು.

''ನಿನ್ನ ಜೊಕ್ಕಣದಲ್ಲಿ ಚೂರಿಯಿಡೆಯಲ್ಲವೆ?''

''ಚೂರಿಯೇತಕ್ಕೆ?''

''ಬ್ಲೇಕರ ಕುತ್ತಿಗೆಕೊಯ್ಯಲಿಕ್ಕೆ. ನಿಮ್ಮ ಜನಗಳ ಉದ್ಯೋಗವೇ ಅದು!''

ಅದನ್ನು ಕೇಳಿ ಆ ಚೀನಿಗನು ಗಹಗಹಿಸಿ ನಕ್ಕು:-ಅಲ್ಲ; ನಾನು ಅಂಥ ಮನುಷ್ಯನಾಗಿಲ್ಲ. ಬ್ಲೇಕರು ನನ್ನ ಜೀವದ ಗೆಳೆಯರು. ಅವರು ನನಗೆ ಬರಬೇಕೆಂದು ಬರೆದಿದ್ದರು. ಅಂತೆಯೇ ನಾನಿಲ್ಲಿಗೆ ಬಂದಿರುತ್ತೇನೆ. ಚಾಲೂ-ಇಯಾಂಗನು ಹೊರಗೆ ಬಂದಿರುತ್ತಾನೆಂದು ಅವರಿಗೆ ಹೇಳಿರಿ. ಅವರ ಅಪ್ಪಣೆಯೇನೆಂಬದನ್ನು ಕೇಳಿಕೊಳ್ಳುವ ಸಲುವಾಗಿಯೇ ಬಂದಿರುತ್ತೇನೆ, ಎಂದು ಹೇಳಿದನು.

ಕೂಡಲೆ ಆಕೆಯು ತಮ್ಮ ಒಡೆಯನಿಗೆ ಈ ಸಂಗತಿ ತಿಳಿಸಲಿಕ್ಕೆ ಒಳಗೆ ನಡೆದಳು. ಚಾಲೂ-ಇಯಾಂಗನು ಆಕೆಯು ಮರಳಿ ಬರುವ ವರೆಗೆ ಬಾಗಿಲ ಬಳಿಯಲ್ಲೇ ನಿಂತುಕೊಳ್ಳದೆ, ಅವಳ ಹಿಂದಿನಿಂದ ಅವಳನ್ನನುಸರಿಸಿಯೇ ಸಾಗಿದನು. ಅಡಿಗೆಯವಳು ಹಿಂದೆ ಹೊರಳಿ ನೋಡಿ, ಭಯಕಂಪಿತಳಾಗಿ, ಓಡುತ್ತೋಡುತ್ತ ಬ್ಲೇಕನ ಒಳಗೆ ಹೋಗಿ, ಗದ್ಗದ ದನಿಯಿಂದ:—''ಒಬ್ಬ ಚೀನಿಗನು ನಿಮ್ಮನ್ನು ಕಾಣಬಂದಿದ್ದಾನೆ. ಹಾಲೂ-ಮಾಲೂವೋ ಚಾಲೂ-

ಮಾಹೂಪೊ: ಯಾವುದೋ ಬಾದು ಹೆಸರು ಹೇಳಿದ. ಅಂಥ ಅಸಡ್ಡಾಳಾದ ಹೆಸರು ನನ್ನ ನೆನಪಿನಲ್ಲಿ ಕೂಡ ಉಳಿಯಲಿಲ್ಲ.

ಆ ಅಡಿಗೆಯವಳ ಮಾತು ಮುಗಿಯುವಷ್ಟರಲ್ಲಿಯೇ ಚಾಊ ಇಯಾಂಗನು ಬ್ಲೇಕನ ಬೈಠಕ ಕೋಣೆಯನ್ನು ಪ್ರವೇಶಿಸಿದನು. ಕೂಡಲೆ ಬ್ಲೇಕನು ತನ್ನ ಆಸನದಿಂದ ಎದ್ದು ಬಂದು ಸಾದರದಿಂದ ಅವನನ್ನು ಅಪ್ಪಿಕೊಂಡು:— ನೀವು ಇಷ್ಟು ಬೇಗನೆ ಬರಬಹುದೆಂಬದನ್ನು ನಾನು ಅನುಮಾನಿಸಿರಲಿಲ್ಲ.

ಅದಕ್ಕೆ ಚಾಊ ಇಯಾಂಗನು:—ಮಹಾನುಭಾವರ ಅಪ್ಪಣೆ ಪಾಲಿಸುವದಕ್ಕೆ ತಡಮಾಡಲು ಶಕ್ಯವೇ? ಪತ್ರವು ಕೈಸೇರಿದೊಡನೆ ಹೊರಟೇ ಬಂದೆನು. ಈಗ ನನ್ನಿಂದೇನಾಗಬೇಕೆಂಬ ಅಪ್ಪಣೆಯಾಗಲಿ.

ಬ್ಲೇಕನು ಅವನಿಗೆ ಹೇಳತಕ್ಕದ್ದನ್ನು ಒಮ್ಮೆಲೆ ಹೇಳಿಬಿಡಲಿಲ್ಲ. ಎದುರಿಗಿನ ಸಿಗರೇಟಿನ ಡಬ್ಬಿಯನ್ನು ಆತನೆದುರಿಗಿಟ್ಟು:—ಎಷ್ಟೋ ತಿಂಗಳುಗಳಿಂದ ನಿಮ್ಮ ಭೇಟಿಯೇ ಆಗಿರಲಿಲ್ಲ. ನೀವು ಯಾವ ಹೋಟಲ್ಲನ್ನು ಪ್ರಾರಂಭಿಸಿರುವಿರೋ ಅದರ ಕಾರ್ಯ-ಕಲಾಪಗಳೆಂತು ನಡೆದಿರುತ್ತವೆ?

"ಅದರ ಶೋಚನೀಯ ವರ್ತಮಾನವನ್ನೆಂತು ಉಸುರಲಿ? ಆ ಹೋಟಲ್ಲಿನ ಅವಸ್ಥೆಯು ತೀರ ಕೆಟ್ಟಿದೆ. ನನ್ನ ದುರ್ಭಾಗ್ಯದಿಂದ ಅಲ್ಲೊಂದು ದೊಡ್ಡ ಗೊಂದಲವೆದ್ದುದರಿಂದ ನನ್ನ ಹಲವು ಜನ ಗಿರಾಕಿಗಳು ಬಿಟ್ಟು ಹೋದರು."

"ಹಾಗೆಯೇನು! ಅದಾವ ಅಂಥ ಗೊಂದಲವು?"

ಅದಕ್ಕೆ ಚಾಊಇಯಾಂಗನು ಹೇಳಿದನು:"ಆ ಗೊಂದಲಕ್ಕೆ ನಮ್ಮ ಅಡಿಗೆಯ ಪೋರನೇ ಕಾರಣನು. ನಾನು ಆತನನ್ನು ಆಗಲೆ ಹೊರಹೊರಡಿಸಿರುವೆನು. ಆತನು ಪಾಪಿ ನಾಯಿಯ ಮಾಂಸದ ಪಲ್ಲೆಯನ್ನು ಮಾಡಿ, ನನ್ನ ಹೋಟಲಿನಲ್ಲುಣ್ಣುವವರ ಎಲೆಗಳಲ್ಲಿ ಬಡಿಸಿದ್ದನು; ಅದರ ಆ ಮೂರ್ಖನು ಅದರ ಬಾಲವನ್ನು ಕೂಡ ತೆಗೆದೊಗೆದಿರಲಿಲ್ಲ."

ಆ ಚೀನಿಗನ ನುಡಿಯನ್ನು ಕೇಳಿ ಸ್ಮಿತ್ಥನು ಖೊಕ್ಕೆಂದು ನಕ್ಕನು. ಬ್ಲೇಕನು ಅನ್ನುತ್ತಾನೆ:—ಆ ಪಾಪಿ ನಾಯಿಯು ನಿಮ್ಮ ಮಡಮ್ಮ ಸಾಹೇಬರ ಬಹು ಪ್ರೀತಿಯ ಪ್ರಾಣಿಯಲ್ಲವೇ? ಅವರು ಅದನ್ನು ಸಾಕಿ ಸಲಹುತ್ತಿಲ್ಲಿಲ್ಲವೆ? ಅದನ್ನಾರಾದರೂ ತಿನ್ನುವರೇ!

"ಅದಕ್ಕಾಗಿಯೇ ನಾನು ನಮ್ಮ ಹೊಸ ಅಡಿಗೆಯವನಿಗೆ ಆ ಬಗ್ಗೆ ಬಲು ಎಚ್ಚರದಿಂದಿರಬೇಕೆಂದು ತಿಳಿಸಿರುತ್ತೇನೆ: ಅವನು ಇನ್ನು ಹಾಗೆ ಮಾಡಲಾರನೆಂಬ ನಂಬಿಕೆಯಿದೆ; ಆದರೆ ನಮ್ಮ ಹೋಟಲ್ಲಿಗೆ ಬಂದ ಕೆಟ್ಟ ಹೆಸರು ಮಾತ್ರ ಇನ್ನೂ ಸರಿ ಹೋಗಲೊಲ್ಲದಾಗಿದೆ."

"ಚಾಊ ಇಯಾಂಗ, ಅದಿರಲಿ. ಈಗ ನಾನು ನಿನ್ನನ್ನಿಲ್ಲಿಗೆ ಕರೆಯಿಸಿದ ಕಾರಣವನ್ನು ಕೇಳಿಕೋ ಒಂದು ವಿಶಿಷ್ಟ ಕಾರ್ಯದಲ್ಲಿ ನನಗೆ ನಿನ್ನ ಸಹಾಯವು ದೊರಕದ ಹೊರತು ನಡೆಯುವಂತಿಲ್ಲ. ಈ ಲಂಡನ್ನ ಪಟ್ಟಣದ ಆಚೆಯ ಕೊನೆಯಲ್ಲಿರುವ ಚಾಯ್ನಾ ಫೀಲ್ಡಿನಲ್ಲಿ ಎಷ್ಟೋ ಚೀನೀ ವಿದ್ರೋಹಿಗಳ ತಂಡಗಳಿರುತ್ತವೆಂಬದು ನಿನಗರಿಯದ ವಿಷಯವಾಗಿಲ್ಲ. ಅವರು ಗುಂಪುಗಟ್ಟಿಕೊಂಡು ಗೌಪ್ಯವಾಗಿ ಅಫೀಮಿನ ವ್ಯವಹಾರ ನಡಿಸುತ್ತಿರುವರು; ಜೂಜಿನ ಅಡ್ಡೆಗಳನ್ನು ಸ್ಥಾಪಿಸಿ, ಬಹು ಜನ ನಗರವಾಸಿಗಳ ಸರ್ವ ನಾಶಗೊಳಿಸುವರು; ಇದಲ್ಲದೆ ಅವರ ಕಳವು-ದರವಡೆಗಳ ವಿಷಯವೂ ಮಿತಿಮೀರಿದೆ. ಚೀನದೇಶದಲ್ಲಿ ಈ ವಿದ್ರೋಹಿ ಸಮಿತಿಯ ಪ್ರಾಮುಖ್ಯ ಸ್ಥಳವಿದ್ದರೂ, ಇಂಗ್ಲಂಡದಲ್ಲಿಯೂ ಬೇರೆ ದೇಶ-ವಿದೇಶಗಳಲ್ಲಿಯೂ ಆ ಸಮಿತಿಯ ಶಾಖೆ ಪ್ರತಿಶಾಖೆಗಳು ಹಬ್ಬಿಕೊಂಡಿರುತ್ತವೆ."

"ಅಹುದು, ಅವರ ಆ ಸಮಿತಿಯ ಹಲಕೆಲವು ಸಂಗತಿಗಳು ಕರ್ಣಗೋಚರವಾಗಿರುತ್ತವೆ."

"ಈ ಲಂಡನ್ನಿನಲ್ಲಿ ಅವರ ಯಾವ ಶಾಖೆಯಿರುತ್ತದೆಯೋ ಅದರ ಮುಖ್ಯಸ್ಥನು ಎಷ್ಟು ಧೂರ್ತನಾಗಿರುವನೋ ಅಷ್ಟೇ ಶಕ್ತಿವಂತನಾಗಿರುತ್ತಾನೆ. ಆದರೆ ಆತನ ಹೆಸರೇನು? ವಾಸಸ್ಥಳವೆಲ್ಲಿ? ಉದ್ಯೋಗವೇನು? ಮುಂತಾದವುಗಳಾವವೂ ಇದು ವರೆಗೆ ಯಾರಿಗೂ ತಿಳಿದಿರುವದಿಲ್ಲವು. ಚಾಊಇಯಾಂಗ, ನಿನಗೆ ಆತನ ಹೆಸರು-ದೆಸೆಗಳು ಅವಗತವಾಗಿರುವವೇನು? ಸುಳ್ಳು ಹೇಳಬೇಡ; ಹಾಗು ಆ ನೀಚರ ಹಸ್ತಕನಾಗಬೇಡ."

"ಬ್ಲೀಕರೇ, ನನಗೆ ಆತನ ಹೆಸರು-ದೆಸೆಗಳಾವವೂ ಗೊತ್ತಿಲ್ಲ. ನಾನು ಶಪಥಪೂರ್ವಕವಾಗಿ ಹೇಳುವದೇನಂದರೆ, ಆ ವಿದ್ರೋಹೀ ಸೈತಾನರಿಗೂ ನನಗೂ ಯಾವ ಸಂಬಂಧವೂ ಇರುವದಿಲ್ಲ. ನಾನು ಮಂಚೂರಿಯನ್ನರ ವಂಶಜನು; ಸುಳ್ಳು-ಸೊಳಕುಗಳು ನಮ್ಮ ಜಾತಿಯಲ್ಲೇ ಇಲ್ಲ. ಇದು ಮೊದಲು ಎಷ್ಟೋ ಪ್ರಸಂಗಗಳಲ್ಲಿ ನಾನು ನಿಮಗೆ ಸಹಾಯ ಮಾಡಿರುತ್ತೇನೆ ಅದಕ್ಕೊಂದೇ ನಮ್ಮ ಕಡೆಯ ಜನರೆಲ್ಲ ನನ್ನನ್ನು ಸ್ವಜಾತಿದ್ರೋಹಿಯೆಂದು ಹಿಯ್ಯಾಳಿಸುತ್ತಿರುವರು. ನೀವು ಕೂಡ ನನ್ನಲ್ಲಿ ಸಂಶಯ ತಾಳಿದರೆ, ನನ್ನ ವಿಷಯದ ಆಕ್ಷೇಪಣೆಗೆ ಮೇರೆಯೇ ಉಳಿಯಲಿಕ್ಕಿಲ್ಲ."

"ಇಲ್ಲ, ಚಾಊ-ಇಯಾಂಗ, ನಾನು ನಿನ್ನಲ್ಲಿ ಸಂಶಯಗೊಳ್ಳುವದಿಲ್ಲ; ನಿನ್ನಲ್ಲಿ ವಿಶ್ವಾಸವಿರುವದಂತೇ ನಿನ್ನನ್ನಿಲ್ಲಿಗೆ ಕರೆದಿರುತ್ತೇನೆ. ಆ ಪುಂಡರ ತಂಡವನ್ನು ವಿಚ್ಛೇದಗೊಳಿಸಿ, ಅವರ ಹಲ್ಲುಗಳನ್ನು ಚೆನ್ನಾಗಿ ಮುರಿಯದಿದ್ದರೆ,

ಈ ವಿಶಾಲವಾದ ಪಟ್ಟಣದಲ್ಲಿ ಶಾಂತಿಸ್ಥಾಪಿಸುವದು ಕಠಿಣವಾದೀತು. ಪ್ರಸ್ತುತದಲ್ಲಿ ಪೋಲೀಸ ಕಮಿಶನರರು ಈ ಕಾರ್ಯಕ್ಕಾಗಿ ನನ್ನ ಸಹಾಯವನ್ನು ಯಾಚಿಸಿರುತ್ತಾರೆ; ಆದರೆ ಮೊದಲು ನೀನು ನನಗೆ ಸಹಾಯಕನಾಗದ ಹೊರತು ನಾನು ಅವರ ಇಷ್ಟೆಯನ್ನು ಈಡೇರಿಸಲಾರದವನಾಗಿದ್ದೇನೆ.''

“ಮಹಾನುಭಾವರೇ, ತಾವು ಬಹು ದೊಡ್ಡ ಹಗ್ಗವನ್ನು ಚೆಲ್ಲಿದಿರಿ. ನಾನು ನಿಮಗೆ ಏನು ಸಹಾಯ ಮಾಡಬೇಕು?''

“ನೀನು ಆ ಚಾಯ್ನಾ ಫೀಲ್ಡನ್ನು ಸುತ್ತಿ ಆ ವಿದ್ರೋಹಿಗಳ ಮುಖ್ಯಸ್ಥನ ಹೆಸರು-ದೆಸೆಗಳನ್ನೂ-ವಾಸಸ್ಥಳವನ್ನೂ ತಿಳಿಯಬೇಕು. ಅದನ್ನು ತಿಳಿದ ಬಳಿಕ ನಾನು ಮಿಕ್ಕ ಕಾರ್ಯಕ್ಕೆ ತೊಡಗುವೆನು. ಪತ್ತೆದಾರನ ಆದ್ಯಕರ್ತವ್ಯವನ್ನು ನೀನೇ ವಹಿಸಬೇಕಾಗುವದು. ತದನಂತರ ನಾನು ಆತನನ್ನು ಕೈಸೆರೆ ಹಿಡಿಯುವ ಕೆಲಸ ಮಾಡುವೆನು.''

ಚಾಲೂ-ಇಯಾಂಗನು ಕೆಲಕ್ಷಣಗಳ ವರೆಗೆ ಯೋಚಿಸಿ, ಬಳಿಕ:—

“ಬ್ಲೇಕರೇ, ನಾನು ಈಗಲೆನಿಮಗೆ ಯಾವ ಬಗೆಯ ಭರವಸೆಯನ್ನು ಕೊಡಲಿಕ್ಕೂ ಶಕ್ಯವಿಲ್ಲ. ನಿಮಗೆ ನಾನು ಎಲ್ಲವನ್ನೂ ಬಿಚ್ಚಿ ಹೇಳುತ್ತೇನೆ; ನನ್ನ ಹೋಟಲಿಗೆ ನಮ್ಮ ಸ್ವದೇಶೀಯರನೇಕ ಜನರು ಆಗಾಗ್ಗೆ ಊಟಕ್ಕೆ ಬರುತ್ತಿರುತ್ತಾರೆ. ಅವರಲ್ಲಿಯ ನಾಲ್ಕಾರು ಜನರು ಆ ಪುಂಡರ ತಂಡದವರೇ ಇರಬೇಕೆಂದು ನನ್ನ ಅನುಮಾನವಿದೆ, ಆದರೆ ಅವರಾರ ಬಾಯಿಂದಲೂ ಆ ತಂಡದ ಬಗ್ಗೆ ಯಾವ ಸಂಗತಿಯೂ ಹೊರಟಿಲ್ಲ. ಆದ್ದರಿಂದ ನಾನು ಒಮ್ಮೆಲೆ ಆ ಬಗ್ಗೆ ಯಾವುದನ್ನೂ ಕೇಳಲಾರೆನು, ಮೇಲಾಗಿ ಅವರಾರೂ ನನ್ನನ್ನು ನಂಬುವದಿಲ್ಲ. ನೀವು ಈ ಮೊದಲೆಂದೂ ಇಂಥ ಕಠಿಣಪ್ರಸಂಗವನ್ನು ನನ್ನ ಮೇಲೆ ದೂಡಿರಲಿಲ್ಲ.''

“ನೀನು ಯಾರಿಗೂ ಏನೊಂದೂ ಕೇಳಬೇಡ, ಮತ್ತು ಹಾಗೆ ಕೇಳುವದರಿಂದ ಯಾವ ಪ್ರಯೋಜನವೂ ಆಗುವಂತಿಲ್ಲ. ನೀನು ಎಲ್ಲ ಕಡೆಗೂ ಸೂಕ್ಷ್ಮದೃಷ್ಟಿಯನ್ನಿಡು. ಆ ಪುಂಡರ ಮುಖ್ಯಸ್ಥನ ಹೆಸರು-ದೆಸೆ-ವಾಸಸ್ಥಳಗಳನ್ನು ತಿಳಿಯುವ ಬಗ್ಗೆ ಗೌಪ್ಯವಾಗಿಯೇ ಪ್ರಯತ್ನಿಸುತ್ತಿರು.''

“ಆದರೆ ಆ ದಸ್ಯುಗಳು ನನ್ನನ್ನು ತಮ್ಮ ಹಗೆಯೆಂದೇ ತಿಳಿದಿರುತ್ತಾರೆ; ಅದರಿಂದ ನಾನು ಯಾವ ಬಗೆಯಿಂದಾದರೂ ಪ್ರಯತ್ನಿಸಹತ್ತುತ್ತಲೆ ಸಂಕಟಕ್ಕೀಡಾಗಬೇಕಾಗುವದು. ಒಂದುವೇಳೆ ಅವರು ನನ್ನನ್ನು ಕೊಲ್ಲಲಿಕ್ಕೆ ಕೂಡ ಹಿಂದೆಗೆಯಲಾರರು. ಆದುದರಿಂದ ನಾನು ಈ ಪ್ರಸಂಗದಲ್ಲಿ ನಿಮಗೆ ನೆರವಾದೇನೆಂಬ ಆಶೆಯಿರುವದಿಲ್ಲ.''

“ಚಾಲೂ-ಇಯಾಂಗಾ, ಕೆಲಸಕ್ಕೆ ತೊಡಗುವ ಮೊದಲೇ ಹತಾಶ

ನಾದರೆ ಸಾಗುವ ಬಗೆ ಹೇಗೆ? ಪೋಲೀಸರು ಈ ಬಗ್ಗೆ ಬೇಕಾದಷ್ಟು ಹಣ ಖರ್ಚು ಮಾಡಲಿಕ್ಕೆ ಸಿದ್ಧರಾಗಿರುವರೆಂಬದನ್ನು ನಾನು ಕೇಳಬಲ್ಲೆನು. ಮೊಟ್ಟ ಗಟ್ಟಲೆ ಹಣ ಸಿಗುವದಾದರೆ, ಅದಕ್ಕಾಗಿ ಪ್ರಯತ್ನಿಸುವದು ತಪ್ಪೇನು?''

ಅದನ್ನು ಕೇಳಿ ಆ ಚೀನಿಗನು ಮತ್ತೆ ಕೆಲ ಹೊತ್ತು ಯೋಚಿಸಿ:—''ಅದು ನಿರರ್ಥಕ ಕೆಲಸವಾಗಿರುವದಿಲ್ಲ. ದುಗ್ಗಿಗಾಗಿ ಮನುಷ್ಯನು ಬೇಕಾದದ್ದನ್ನು ಮಾಡುವನು; ಆದರೆ ಮಹಾಶಯರೇ, ಈ ಕೆಲಸವು ಕೇವಲ ೪೦-೫೦ ಪೌಂಡು ಗಳ ಕೆಲಸವಲ್ಲ. ಈ ನಿಮ್ಮ ಕೆಲಸವನ್ನು ಮಾಡಿಕೊಟ್ಟರೆ ಎಷ್ಟು ಹಣ ಸಿಗುವ ದೆಂಬದನ್ನಾದರೂ ತಿಳಿಸಿರಿ ನೋಡೋಣ.''

''ಅದನ್ನೆಲ್ಲ ನಾನು ಈಗಲೆ ಹೇಳಲಾರೆನು; ಆದರೆ ಈಗ ತಿಳಿಸಿಡುವದಿಷ್ಟೇ, ಈ ಕೆಲಸಕ್ಕಾಗಿ ಸಿಗಬಹುದಾದ ಹಣವನ್ನು ನೀನು ಇದು ಮೊದಲು ಪೋಲೀಸರಿಂ ದಾಗಲಿ ಬೇರೆ ಯಾರಿಂದಾಗಲಿ ಪಡೆದಿರಲಾರೆಯೆಂದು ಭರವಸೆ ಕೊಡುತ್ತೇನೆ.''

''ಸಾಕಷ್ಟು ಹಣ ಸಿಗುವದಾದರೆ ಚಾಯನಾ ಫೀಲ್ಡಿನ ಕೊಟೆನಲ್ಲೊಂದು ದೊಡ್ಡ ಹೋಟಲ್ಲನ್ನು ಸ್ಥಾಪಿಸಿ ಈ ಬಗ್ಗೆ ಪ್ರಯತ್ನಪಡಬೇಕೆಂದಿರುತ್ತೇನೆ.''

''ಪೋಲೀಸರ ಮುಖ್ಯಸ್ಥನನ್ನು ಸಮಕ್ಷಮ ಕಂಡು ಮಾತನಾಡದ ಹೊರತು ನಾನು ನಿನಗೆ ಹಣದ ಪರಿಮಾಣವನ್ನು ತಿಳಿಸಲಾರೆನು; ಆದರೂ ನಿನ್ನ ಕೆಲಸದ ಬಗ್ಗೆ ನಿನ್ನನ್ನು ಸಂತೋಷಪಡಿಸದಿರಲಾರೆನು.''

''ನೀವು ನನ್ನನ್ನು ಸಂತೋಷಗೊಳಿಸಿದರೆ ನಾನೂ ನಿಮ್ಮನ್ನು ಸಂತೋಷ ಪಡಿಸಲಿಕ್ಕೆ ಪ್ರಯತ್ನಿಸುತ್ತೇನೆ. ಕಾಪಟ್ಯ ವೇಷದಿಂದ ಕೆಲ ದಿನಗಳ ವರೆಗೆ ನಾನು ಆ ಚಾಯನ್ನಾ ಫೀಲ್ಡಿನಲ್ಲಿ ವಾಸಿಸುವೆನು. ಹಾಗೆ ಮಾಡುವದರಿಂದ ಆ ಫುಂಡರ ಸಮಿತಿಯ ಮುಖ್ಯಸ್ತನ ಹೆಸರನ್ನೂ ವಾಸಸ್ಥಳವನ್ನೂ ತಿಳಿಯಬಹು ದಾಗಿದೆ.''

''ಚಾಲೂ ಇಯಾಂಗಾ, ನಿನಗೆ ನನ್ನ ಮನೋಗತವು ಈಗ ತಿಳಿಯಿತೆನ್ನ ಬಹುದು. ಹಾಗೆ ಮಾಡಿದರೆ ನಿನ್ನ ಪ್ರಯತ್ನಕ್ಕೆ ಬೇಗನೆ ಫಲವುಂಟಾಗುವದು. ನೀನು ಆ ಮುಖ್ಯಸ್ತನ ಹೆಸರು-ದೆಸೆಗಳನ್ನು ತಿಳಿದು ನನಗೆ ತಿಳಿಸಿದ ಕೂಡಲೆ ನಿನ್ನ ಕೆಲಸವು ಪೂರೈಸಿದಂತಾಗುವದು; ಹಾಗು ಆ ಕೂಡಲೆ ನೀನು ನಿನ್ನ ಪ್ರತಿ ಫಲರೂಪವಾದ ಅಗಣ್ಯ ಹಣವನ್ನು ಹೊಂದುವೆ. ನಿನಗೆ ಇನ್ನೊಂದು ಮಾತು ತಿಳಿಸುವದೇನಂದರೆ, ನೀನು ಇದನ್ನು ಬಹು ಗೌಪ್ಯವಾಗಿಡತಕ್ಕದ್ದು. ಆ ಮುಖ್ಯಸ್ತನು ನನ್ನ ಪರಿಚಯದವರ ಮನೆಯ ಹೆಣ್ಣುಮಗಳೊಬ್ಬಳನ್ನು ಸೆರೆ ಹಿಡಿದು ಪ್ರತಿಬಂಧದಲ್ಲಿಟ್ಟಿರುತ್ತಾನೆ. ನೀನು ಆಕೆಯ ಸಂಧಾನವನ್ನೂ ಹಚ್ಚ ತಕ್ಕದ್ದು.''

“ಮಹನೀಯರೇ, ತಮ್ಮ ಆದೇಶಗಳನ್ನೆಲ್ಲ ಕೇಳಿಕೊಂಡಿರುತ್ತೇನೆ. ಇಂದು ರಾತ್ರಿಯೇ ನಾನು ನನ್ನ ಹೋಟಲಿನ ಭಾರವನ್ನೆಲ್ಲ ನನ್ನ ಮ್ಯಾನೇಜರನಿಗೆ ಒಪ್ಪಿಸಿ, ಬೆಳಗಾಗುವಷ್ಟರಲ್ಲಿ ಚಾಯ್ನಾ ಫೀಲ್ಡಿನಲ್ಲೇ ವಾಸಿಸುವೆನು. ಅಲ್ಲಿ ಆಗಲೆ ಲಂಡನ್ನಿಗೆ ಬಂದಿಳಿದಿರುವ ಹೊಸ ಚೀನಿಗನಂತೆ ಕಾಗದದ ಚೆಂಡುಗಳನ್ನು ತೂರುತ್ತ, ಚಿತ್ರ-ವಿಚಿತ್ರ ಬಣ್ಣದ ಕಾಗದಗಳ ಹೂ, ಒಳ್ಳೆ, ಬೀಸಣಿಕೆಗಳನ್ನು ಮೂಡುತ್ತ ಎಲ್ಲಾ ಓಣಿಗಳಲ್ಲಿ ಅಡ್ಡಾಡುವೆನು. ಕೆಲ ದಿನಗಳ ವರೆಗೆ ನಾನು ಏನನ್ನೂ ಮಾಡದೆ, ಕಿವಿಗೆ ಬಿದ್ದದ್ದನ್ನು ಕೇಳುತ್ತ, ಕಣ್ಣಿಗೆ ಕಂಡದ್ದನ್ನು ನೋಡುತ್ತ ಸಂಚರಿಸುತ್ತಿರುತ್ತೇನೆ. ವಿಶೇಷ ಸಂಗತಿಯು ತಿಳಿದ ಕೂಡಲೆ ಹಾಗು ಭೆಟ್ಟಿಯಾಗುವ ಅವಶ್ಯಕತೆ ತೋರುತ್ತಲೆ ನಿಮ್ಮನ್ನು ಕಾಣುವೆನು.

ಬಳಿಕ ಬ್ಲೇಕನು ತನ್ನ ತಿಜೋರಿಯೊಳಗಿಂದ ಕೆಲ ನೂರು ಪೌಂಡುಗಳ ನೋಟುಗಳನ್ನು ತೆಗೆದು, ಆ ಚಾಲೂ ಇಯಾಂಗನಿಗೆ ಆ ಕೆಲಸದ ಸಂಚುಗಾರವೆಂದು ಕೊಟ್ಟು ಕಳಿಸಿದನು. ಆ ಚೀನಿಗನಿಂದ ತನಗೆ ಬೇಕಾದ ಸಂಗತಿಯು ತಿಳಿದ ಕೂಡಲೆ ತಾನು ಸ್ಮಿತ್ಥನೊಡನೆ ಮುಂದಿನ ಕೆಲಸಕ್ಕೆ ಪ್ರಾರಂಭಿಸಬೇಕೆಂಬದೇ ಆತನ ಇಚ್ಛೆಯಾಗಿದ್ದಿತು. ಯಾವುದನ್ನೂ ತಿಳಿಯದ, ಕಗ್ಗತ್ತಲೆಯಲ್ಲಿ ತಡವರಿಸುತ್ತ ಕಾಲಹರಣ ಮಾಡುವದು ಬ್ಲೇಕನಿಗೆ ಸೇರುತ್ತಿರಲಿಲ್ಲ. ಆ ಪುಂಡರ ಮುಖ್ಯಸ್ಥನ ಹೆಸರು-ದೆಸೆಗಳು ತಿಳಿದ ನಂತರ ಪೋಲೀಸರ ಸಹಾಯದಿಂದ ಅವನನ್ನೂ ಆತನ ಮುಖ್ಯ-ಮುಖ್ಯ ಹಸ್ತಕರನ್ನೂ ಸೆರೆಹಿಡಿದು, ಅವರ ವಿದ್ರೋಹತೆಯ ಪ್ರಮಾಣಗಳನ್ನೆಲ್ಲ ಸಂಗ್ರಹಿಸಿ, ಅವರನ್ನು ನ್ಯಾಯಾಸ್ಥಾನದ ಮುಂದೆ ಎಳೆದು, ಚೆನ್ನಾಗಿ ದಂಡಿಸಬೇಕೆಂಬುದೇ ಬ್ಲೇಕನ ಸಂಕಲ್ಪವಿದ್ದಿತು.

---

## ೫ನೇ ತೆರೆ.

## ಸಂಕಲ್ಪ.




ಯ್ನಾ ಫೀಲ್ಡಿನ ಬಳಿಯ ಪಿಕಾಡೇಲಿ ಸರ್ಕಲ್ಲಿನ ಕೂಟದಲ್ಲಿ ಚಾಲೂಇಯಾಂಗನು ಮರುದಿನವೇ ಒಂದು ದೊಡ್ಡ ಹೋಟಲ್ಲನ್ನು ಪ್ರಾರಂಭಿಸಿದನು. ಲಂಡನ್ನಿನಂಥ ವಿಶಾಲವಾದ ನಾನಾ ಬಗೆಯ ವ್ಯವಸಾಯದಿಂದ ಪರಿಪೂರ್ಣವಾದ ಪಟ್ಟಣದಲ್ಲಿ ಚಾಲೂ ಇಯಾಂಗನು ಬೇರೆ ಉದ್ಯೋಗಕ್ಕೆ ತೊಡಗದೆ, ಆ ಹೋಟಲಿನ ವ್ಯವಸಾಯವನ್ನೇ ಏಕೆ ಕೈಕೊಂಡನೆಂಬದನ್ನು ತಿಳಿಯುವ ಬಗ್ಗೆ ನಮ್ಮ ವಾಚಕವೃಂದವು ಕುತೂಹಲಪಡುತ್ತಿರಬಹುದು. ಚೀನೀ ಜನರು ಪಾಕಶಾಸ್ತ್ರದಲ್ಲಿ ನಿಪುಣರೆಂದು ಯುರೋಪಖಂಡದಲ್ಲೆಲ್ಲ ಪ್ರಸಿದ್ಧಿಯಿರುವದು.

ಉದ್ದರಿಂದ ಚೀನಿಗರಿಂದ ನಡಿಸಲ್ಪಡುವ ಹೋಟಲ್ಲುಗಳು ಬೇಗನೆ ಪ್ರಸಿದ್ಧಿಗೊಂಡು, ಅಲ್ಪಾವಕಾಶದಲ್ಲಿಯೇ ಸಾಕಷ್ಟು ಹಣ ಸಂಪಾದಿಸಬಹುದೆಂಬ ಹೇತುವಿನಿಂದಲೇ ಆತನು ಆ ವ್ಯವಸಾಯಕ್ಕೆ ಪ್ರವೃತ್ತನಾಗಿದ್ದನು.

ಬ್ಲೇಕನ ಸಂದೇಶದ ಮೇರೆಗೆ ಹೊಸ ಕಾರ್ಯಕ್ಕೆ ತೊಡಗಿದ ಬಳಿಕ ಆತನು ತನ್ನ ಹೋಟಲಿನಲ್ಲಿರುವದೇ ವಿರಳವಾಯಿತು. ಛದ್ಮವೇಷದಿಂದ ಅವನು ಚಾಯ್ನಾ ಫೀಲ್ಡಿನಲ್ಲಿಯೇ ಸುತ್ತುವರಿಯುತ್ತಿದ್ದನು. ಅಲ್ಲಿ ಅವನು ಏನೇನು ಮಾಡುತ್ತಿದ್ದನೆಂಬದು ಬ್ಲೇಕನಿಗೆ ಕೂಡ ತಿಳಿಯದಾಯಿತು.

ಇತ್ತೀಚೆಗೆ ಮೇರಿಯ ಸಂಬಂಧದ ಯಾವ ವರ್ತಮಾನವೂ ತಿಳಿಯದಾಯಿತು. ಪಪ್ಪಲಿನ ಜೇಲಿಗೆ ಚಾಯ್ನಾ ಫೀಲ್ಡಿನ ಸಿಂಹನ ಕೈಬರಹದ ಮತ್ತೆ ಯಾವ ಪತ್ರ-ಪಾನುಗಳೂ ಬರಲಿಲ್ಲ. ಇನ್ಸಪೆಕ್ಟರ ಡೆಭೆನಟನು ಬ್ಲೇಕನ ಸಲಹೆಯ ಮೇರೆಗೆ ಚಾಯ್ನಾ ಫೀಲ್ಡಿನೊಳಗಿನ ಚೀನೀ ಪುಂಡರ ಸಂಧಾನದ ಬಗ್ಗೆ ಯಾವ ಪ್ರಯತ್ನವನ್ನೂ ಮಾಡದಾದನು. ಅವನು ತನ್ನ ಕೈಕೆಳಗಿನ ಪೋಲೀಸ ಶಿಪಾಯಿಗಳನ್ನೂ ಅತ್ತಕಡೆಗೆ ಹೋಗಗೊಡದಾದನು; ಹಾಗು ತಾನೂ ಸುಳಿಯದಾದನು. ಆತನ ಕೈಕೆಳಗಿನ ಯಾವ ಗುಪ್ತ ಪೋಲೀಸನೂ ಕಾಪಟ್ಯವೇಷದಿಂದ ಚಾಯ್ನಾ ಫೀಲ್ಡಿನ ಕಡೆಗೆ ಸುಳಿಯಲಿಲ್ಲ. ಡೆಭೆನಟನ ಮಗನಾದ ರಿಚರ್ಡನು ಮೇರಿಯ ಯಾವ ಸಂಧಾನವನ್ನೂ ಹೊಂದದೆ, ಬ್ಲೇಕನ ಉಪದೇಶದ ಮೇರೆಗೆ ನಿಶ್ಚೇಷ್ಟಿತನಾಗಿದ್ದು, ನಿಷ್ಫಲ ಆಕ್ರೋಶದಿಂದ ಬೆಂದು ಬೆಂಡಾಗುತ್ತಿದ್ದನು!

ಎಷ್ಟೋ ದಿನಗಳ ನಂತರ ಒಂದು ದಿನ ಭೋಜನೋತ್ತರದಲ್ಲಿ ಸ್ಮಿತ್ಥನು ಬ್ಲೇಕನನ್ನು ಕುರಿತು:—ದುಡ್ಡಿನ ಆಶೆಯಿಂದ ಚಾಲೂ ಇಯಾಂಗನು ಪತ್ತೆದಾರಿ ಮಾಡಹೋಗಿರುವನು; ಆದರೆ ಬಹು ದಿನಗಳಿಂದ ಆತನ ಕಡೆಯ ಸುದ್ದಿಯೇ ಇರುವದಿಲ್ಲ. ಆ ಚೀನಿಯ ಪುಂಡರ ಕೈಯಿಂದ ಬಳ್ಳೀಯ ಪೆಟ್ಟು ತಿಂದನೋ ಹೇಗೆಂಬದು ತಿಳಿಯದಾಗಿದೆಯಲ್ಲ? ಎಂದು ಅಂದನು.

"ಸ್ಮಿತ್ಥಾ, ಅವನು ಆ ಒಗೆಯ ಮೂರ್ಖನಾಗಿಲ್ಲ. ದುಡ್ಡಿನ ಲೋಭದಿಂದಾದರೂ ಅವನು ಸ್ವಜಾತಿದ್ರೋಹಬಗೆಯುವನೆಂದೇ ನಾವು ಅವನನ್ನು ನಮ್ಮ ಬಂಧುವೆಂದು ತಿಳಿಯುತ್ತಿದ್ದರೂ, ಆತನ ಜ್ಞಾತಿಗಳು ಅವನನ್ನು ಎಷ್ಟು ತಿರಸ್ಕರಿಸುತ್ತಿರುವರೆಂಬದನ್ನು ಯೋಚಿಸಿದರೆ, ಆ ಚಾಲೂ ಇಯಾಂಗನ ರುಂಡವು ದಿಂಡದಿಂದ ಯಾವ ಕಾಲಕ್ಕೆ ವಿಂಗಡಿಸಲ್ಪಟ್ಟೀತೆಂಬದನ್ನು ಊಹಿಸುವಂತಿಲ್ಲ. ತಾನು ಪ್ರಾಣಾಂತಿಕ ಸಂಕಟದಲ್ಲಿರುವೆನೆಂದು ತಿಳಿದ ಆತನು, ಯಾವಾಗಲೂ ಬಹು ಎಚ್ಚರಿಕೆಯಿಂದ ನಡೆಯಬೇಕಾಗುವದು. ಆವನಿಗೆ ಇದುವರೆಗೆ ಏನೂ ತಿಳಿದಿರಲಿಕ್ಕಿಲ್ಲವಷ್ಟೇ"

ಇನ್ನು ಹೀಗೆ ನಿಸ್ತಬ್ಧವಾಗಿ ಕುಳಿತುಕೊಳ್ಳುವದು ನನಗಂತೂ ಸರಿದೋರು ವದಿಲ್ಲ. ಚಾಯ್ನಾಫೀಲ್ಡಿನ ಆ ಭಾಗದಲ್ಲಿ ೨-೩ ದಿನಗಳವರೆಗೆ ಗುಪ್ತವಾಗಿ ಸಂಚರಿಸಿ ಪ್ರಯತ್ನಿಸಬೇಕೆಂದು ನನ್ನಭಿಲಾಷೆಯಿದೆ. ಹೆರವರ ಮೇಲೆ ಕೆಲಸದ ಭಾರವನ್ನು ಹಾಕಿ ನಿಶ್ಚಿಂತತೆಯಿಂದಿರುವದು ನನಗೆ ಅಸಹ್ಯವೆನಿಸುವದು.

ಸ್ಮಿತ್ಥನ ಈ ಮಾತುಗಳನ್ನು ಕೇಳಿ ಬ್ಲೇಕನು;—"ತಮ್ಮಾ, ಸ್ಮಿತ್ಥಾ, ಹೊತ್ತು ಬಂದಂತೆ ಕೊಡ ಹಿಡಿಯಬೇಕಾಗುವದು. ಈ ಪ್ರಸಂಗದಲ್ಲಿ ಇಷ್ಟು ಅಧೀರವಾದರೆ ನಡೆಯಲಾರದು. ಕಡೆಗೆ ಆ ಚಾಲೂ ಇಯಾಂಗನು ಏನು ಮಾಡುವನೆಂಬದನ್ನು ತಿಳಿಯುವ ವರೆಗೂ................"

ಬ್ಲೇಕನ ವಾಕ್ಯವು ಕಡಪೂರಯಿಸುವ ಮೊದಲೇ ಸಮೀಪದಲ್ಲಿಯ ಟೆಲಿಫೋನಿನ ಗಂಟೆಯು 'ಝಣಣಣಣಣ' ಎಂಬ ಸಪ್ಪಳಗೈಯ್ದಿತು. ಕೂಡಲೆ ಬ್ಲೇಕನು ಆಸನದಿಂದೆದ್ದು ಹೋಗಿ ಆ ಯಂತ್ರದ ಬಳಿಯಲ್ಲಿ ನಿಂತುಕೊಂಡನು. ಆ ಯಂತ್ರದ ಮೂಲಕ ಬ್ಲೇಕನು ಯಾರೊಡನೆ ಏನು ಮಾತಾಡಿದನೆಂಬದು ಅನ್ಯರಾರಿಗೂ ತಿಳಿಯಲಿಲ್ಲ. ಕೆಲಕ್ಷಣಗಳ ಮೇಲೆ ಆತನು ಮರಳಿ ಬಂದು ತನ್ನ ಆಸನವನ್ನು ಮಂಡಿಸಲು, ಸ್ಮಿತ್ಥನು ಕುತೂಹಲ ದೃಷ್ಟಿಯಿಂದ ಅವನ ಮೋರೆಯ ಕಡೆಗೆ ನೋಡಲಾರಂಭಿಸಿದನು.

ಕೂಡಲೆ ಬ್ಲೇಕನು:—ಇನ್ಸಪೆಕ್ಟರ ಡೆಭೆನಟನ ಕೂಡ ಸಂಭಾಷಣ ವಾಯಿತು, ಎಂದಂದನು.

ಸ್ಮಿತ್ಥಾ:—ಅವರು ಏನೆಂದರು?

"ಅವನು ನನ್ನನ್ನು ಕರೆದಿರುತ್ತಾನೆ. ಯಾವುದೋ ಮಹತ್ವದ ಕೆಲಸ ಏದೆಯಂತೆ. ಟೆಲಿಫೋನಿನಲ್ಲಿ ಅದನ್ನು ಕೇಳಿಕೊಳ್ಳುವದು ತಕ್ಕದ್ದಲ್ಲೆಂದು ತಿಳಿದು ನಾನು ಈಗಲೆ ಅಲ್ಲಿಗೆ ಹೊರಡತಕ್ಕವನಿರುತ್ತೇನೆ, ಆದರೆ ಆತನು ಇದೀಗ ಯಾವ ಸಂಗತಿಯನ್ನು ತಿಳಿಸಿದನೋ ಅದು ಬಹು ಭಯಾನಕವಾಗಿರುತ್ತದೆ. ಥೇಮ್ಸನದಿಯ ಬತ್ತಿನಲ್ಲಿ ಚಾಯನಾಫೀಲ್ಡನ ಹತ್ತಿರ ಒಂದು ಶವವು ತೇಲುತ್ತಿದ್ದು, ಅದು ಚೀನೀಯ ಮನುಷ್ಯನದಿರುವಂತೆ ತೋರುತ್ತಿದೆಯಂತೆ; ಅದನ್ನು ಅವರು ಹೊರಗೆ ತೆಗೆಯಿಸಿ, ಪೋಲೀಸ ಠಾಣೆಗೆ ತಂದಿರುವರಂತೆ!"

ಸ್ಮಿತ್ಥನು ತನ್ನ ದೃಷ್ಟಿಯನ್ನು ಮೇಲಕ್ಕೇರಿಸಿಕೊಂಡು ಏನನ್ನೋ ಯೋಚಿಸುತ್ತ:—ಅನಿಷ್ಟವು! ಚೀನಗನ ಹೆಣವೇ! ಪಾಪ! ಆ ಚಾಲೂ............

"ಸ್ಮಿತ್ಥಾ, ನೀನು ಯಾವ ವಿಷಯಕ್ಕೆ ಯೋಚಿಸುತ್ತಿರುವೆಯೋ, ಬಹುಶಃ ಹಾಗೆಯೇ ಆಗಿರಬಹುದಾಗಿದೆ. ಅದು ಆ ಚಾಲೂ-ಇಯಾಂಗನ ದೇಹವೇ ಆದೀತೇನು? ಅಥವಾ ಬೇರೆ ಯಾವನೊಬ್ಬ ಚೀನಗನ ಹೆಣವು ಆಗಿರಲಿಕ್ಕಿಲ್ಲೆಂದು

ಅದಾರು ಹೇಳಬೇಕು?''

ಸ್ಮಿತ್ಥನು ಹೇಳುತ್ತಾನೆ:—ಪಾಪ! ಆ ಬಡವನನ್ನು ಯಾರಾದರೂ ಹೇಗಾದರೂ ಕೊಲೆಗೆಯ್ದಿರಲಿಕ್ಕಿಲ್ಲವಷ್ಟೇ?

ಬ್ಲೇಕ:—ಅದು ಇನ್ನೂ ಗೊತ್ತಾಗಿಲ್ಲ. ಡೆಭೆನಟನು ಆ ಸಂಬಂಧದ ಒಂದು ಪತ್ರವನ್ನು ತನ್ನ ಒಬ್ಬ ಶಿಪಾಯಿಯ ಮುಖಾಂತರ ಹೊಂದಿದ್ದು, ಆ ಬಗ್ಗೆ ಆಲೋಚಿಸುವದಕ್ಕಂತಲೇ ನನ್ನನ್ನು ಕರೆದಿರಬಹುದಾದಾಗಿದೆ. ನಾನು ತಡಮಾಡದೆ ಅಲ್ಲಿಗೆ ತೆರಳಲೇ ಬೇಕು. ಸ್ಮಿತ್ಥಾ, ನೀನೂ ನನ್ನೊಡನೆ ನಡೆ.

ಕೂಡಲೆ ಅವರಿಬ್ಬರೂ ಒಂದು ಬಾಡಿಗೆಯ ಮೋಟಾರ ಕಾರಿನ್ನೇರಿ ಪಪ್ಪಲಿನ ಜೇಲಿಗೆ ನಡೆದರು. ಆ ಒಳಗಾಗಿ ಮುಗಿಲು ಮೋಡಗಳಿಂದ ತುಂಬಿತ್ತು. ಅವರ ಗಾಡಿಯು ತುಸ ದೂರ ಹೋಗುವಷ್ಟರಲ್ಲೇ ದೊಡ್ಡ ಮಳೆಯು ಸುರಿಯ ಹತ್ತಿತು. ಅವರೀರ್ವರೂ ಪಪ್ಪಲಿನ ಜೇಲಖಾನೆಗೆ ಹೋಗಿ ಇನ್ಸಪೆಕ್ಟರ ಡೆಭೆನಟನನ್ನು ಸಂದರ್ಶಿಸಿದರು. ಚಾಲೂ-ಇಯಾಂಗನು ಬ್ಲೇಕನ ಸಲಹೆಯ ಮೇರೆಗೆ ಚಾಯ್ನಾ ಫೀಲ್ಡನಲ್ಲಿ ಪತ್ತೇದಾರಿಯು ನಡೆಸುತ್ತಿದ್ದುದು ಡಭೆನಟನಿಗೆ ಗೊತ್ತಿರಲಿಲ್ಲ. ಅದರಿಂದ ಆ ಚೀನಿಗನ ದುರ್ಮರಣದ ವಾರ್ತೆಯಿಂದ ಸತ್ತವನು ಆ ಚಾಲೂ-ಇಯಾಂಗನ ಹೊರತು ಅನ್ಯನಲ್ಲೆಂಬುದು ಅವನಿಗೂ ಅನುಮಾನವಾಯಿತು.

ಬಳಿಕ ಇನ್ಸಪೆಕ್ಟರನು ಬ್ಲೇಕ-ಸ್ಮಿತ್ಥರನ್ನು ಸಂಗಡ ಕರಕೊಂಡು ಅದೇ ಬಾಡಿಗೆಯ ಮೋಟಾರಿನಿಂದ ಚಾಯ್ನಾ ಫೀಲ್ಡನ ಕೂಟಿನ ಕಡೆಗೆ ಶೀಘ್ರವಾಗಿ ನಡೆದನು. ಆಗ ರಾತ್ರಿಯು ಹತ್ತು ಗಂಟೆಯಾಗಿರಬಹುದು. ಚಾಯ್ನಾ ಕೂಟಿಗೆ ಹತ್ತಿರವೇ ಇದ್ದ ಪೋಲೀಸ ಸ್ಟೇಶನ್ನಿನಲ್ಲಿ ಆ ದುರ್ಮರಣದ ಚೀನಿಗನ ಹೆಣವು ಇಡಲ್ಪಟ್ಟಿತ್ತು. ಇವರೆಲ್ಲರೂ ಆ ಸ್ಟೇಶನ್ನಿನ ಬಳಿಯಲ್ಲಿಳಿದು ಒಳಗೆ ಪ್ರವೇಶಿಸಲು, ಬಾಗಿಲಲ್ಲೊಬ್ಬ ಕಾನ್ಸಟೇಬಲ್ಲನು ನಿಂತುಕೊಂಡಿದ್ದು, ಸಮೀಪದಲ್ಲೇ ನೂರಾರು ಜನ ಚೀನಿಗರು ನಿಂತುಕೊಂಡು ಆ ಶವವನ್ನು ತೋರಿಸುವ ಸಲುವಾಗಿ ಆತನನ್ನು ಕೇಳಿಕೊಳ್ಳುತ್ತಿದ್ದರು.

ಆಗ ಇನ್ಸಪೆಕ್ಟರ ಡೆಭೆನಟನು ಪೋಲಿಸನನ್ನು ಕುರಿತು:—ಎಲೋ, ಯಾವ ಚೀನಿಗನ ಮೃತದೇಹವು ಸಮುದ್ರದ ಬತ್ತಿನಲ್ಲಿ ಸಿಕ್ಕಿರುವದೋ, ಅದನ್ನಾರಾದರೂ ಕೊಂದು ಚೆಲ್ಲಿದ್ದರೇನು? ಎಂದು ಪ್ರಶ್ನ ಮಾಡಿದನು.

“ಒಡೆಯರೇ, ಅಹುದು. ಅದು ಬಹುಶಃ ಹಾಗೆಯೇ ಆಗಿರಬಹುದೆಂದು ತೋರುತ್ತಿದೆ. ಆತನನ್ನು ಬಹು ಕಠೋರ ರೀತಿಯಿಂದ ಕೊಂದಿರುವರೆಂಬದು ಸ್ಪಷ್ಟವಾಗಿ ಕಾಣುತ್ತಿದೆ.''

“ಹಾಗಲ್ಲವೇ? ನನ್ನೊಡನೆ ಬಂದಿರುವ ಈ ನನ್ನಿಬ್ಬ ಬಂಧುಗಳು ಆ

ಹೆಣವನ್ನು ನೋಡಬೇಕೆನ್ನುತ್ತಾರೆ. ಅದೆಲ್ಲಿದೆ?"

"ಅದನ್ನು ಅಕೋ, ಆ ಒಳಗಿನ ಚಿಕ್ಕದೋಟದಲ್ಲಿರಿಸಿದೆ. ಅದರ ಬಳಿಯಲ್ಲೂ ಬೇರೊಬ್ಬ ಪಹರೆಯ ಶಿಪಾಯಿ ಇರುವನು; ನನ್ನೊಡನೆ ಬಂದರೆ ನಾನು ಅದನ್ನು ತಮಗೆ ತೋರಿಸಿಕೊಂಡು ಬರುತ್ತೇನೆ."

ಅದಕ್ಕೆ ಡೆಭೆನಟನು ಅನ್ನುತ್ತಾನೆ:—ಎಲೋ, ನೀನು ಅಲ್ಲಿಯವರೆಗೆ ಬರಲವಶ್ಯಕತೆಯಿಲ್ಲ. ಇಲ್ಲಿಯೇ ಇದ್ದು, ಈ ಜನರನ್ನು ಮುಂದಕ್ಕೆ ಬರದಂತೆ ನೋಡಿಕೊಳ್ಳು. ನಾವೇ ಹೋಗಿ ನೋಡಿಕೊಂಡು ಬರುವೆವು.

ಕೂಡಲೆ ಬ್ಲೇಕನು ಆ ಬಸ್ಸಿನ ಡ್ರಾಯವ್ಹರನಿಗೆ ಅಲ್ಲಿಯೇ ಇರಲು ತಿಳಿಸಿ, ತಾನು ಡೆಭೆನಟ ಮತ್ತು ಸ್ಮಿಥ್‌ರೊಡನೆ ಭರದಿಂದ ಆ ಚಿಕ್ಕದೋಟವನ್ನು ಹೊಕ್ಕನು. ಆ ಉದ್ಯಾನದ ಬಾಗಿಲ ಒಳಿಯ ಬೆಂಚಿನ ಮೇಲೆ ಕುಳಿತಿದ್ದ ಶಿಪಾಯಿಯು ಧೂಮ್ರಪಾನದಲ್ಲಿ ಮಗ್ನನಾಗಿದ್ದನು. ಬ್ಲೇಕ ಮತ್ತು ಸ್ಮಿಥ್‌ರ ಗುರುತು ಅವನಿಗಿರಲಿಲ್ಲ. ಮೇಲಾಗಿ ಅದು ಮಧ್ಯರಾತ್ರಿಯ ಸಮಯವು. ಅದರಿಂದಲೂ ಅವನಿಗೆ ಅವರ ಗುರ್ತು ಹತ್ತುವ ಸಂಭವವಿರಲಿಲ್ಲ. ಆ ಹೆಣಕ್ಕೆ ಸಮೀಪದಲ್ಲಿಯೇ ಒಂದು ದೀಪವು ಉರಿಯುತಲಿತ್ತು. ಒಂದು ದೊಡ್ಡ ಮೇಜಿನ ಮೇಲೆ ಆ ಹೆಣವು ಇಡಲ್ಪಟ್ಟಿದ್ದು, ಅದರ ಮೇಲೊಂದು ಮಗ್ಗಲಾಸಿಗೆಯು ಹೊಚ್ಚಲ್ಪಟ್ಟಿತ್ತು.

ಬ್ಲೇಕನ ಅಪ್ಪಣೆಯ ಮೇರೆಗೆ ಸ್ಮಿಥ್‌ನು ಆ ದೀಪವನ್ನು ಮತ್ತಿಷ್ಟು ಏರಿಸಿ ಪ್ರಕಾಶವನ್ನು ಹೆಚ್ಚಿಸಿದನು. ಬಳಿಕ ಬ್ಲೇಕನು ಹೆಣದ ಮೈಮೇಲಿನ ವಸ್ತ್ರವನ್ನು ತೆಗೆದನು. ಆ ಹೆಣವು ಸರ್ವಸಾಧಾರಣವಾಗಿ ಬರೇಬತ್ತಲವಾಗಿತ್ತು! ಅದರ ಅಂಗಪ್ರತ್ಯಂಗಗಳೆಲ್ಲ ಒಡೆದು ಕಾಣಿಸುತ್ತಿದ್ದವು. ಅದರಿಂದ ಅದನ್ನು ಗುತಿಸಲಿಕ್ಕೆ ತಡ ಹಿಡಿಯಲಿಲ್ಲ. ಆ ಹೆಣದ ಕಣ್ಣುಗಳು ಕಾಜಿನ ಗೊಂಬೆಯಂತೆ ಸ್ಥಿರವಾಗಿದ್ದವು. ಶರೀರದ ಹಲವು ಕಡೆಗಳಲ್ಲಿ ಸಣ್ಣದೊಡ್ಡ ಗಾಯಗಳಾಗಿದ್ದವು. ಅವುಗಳು ಚೂರಿ-ಕತ್ತಿಗಳಿಂದ ಆಗಿರಬಹುದೆಂದು ಸಹಜವಾಗಿ ತೋರುತ್ತಿತ್ತು. ಆ ಹೆಣದ ಎರಡೂ ಗಲ್ಲಗಳ ಮೇಲೂ ಎದೆಯ ಮೇಲೂ ಬಹು ದೊಡ್ಡವಾದ ಆರೇಳು ಗಾಯಗಳಿದ್ದವು.

ಇನ್ಸಪೆಕ್ಟರ ಡೆಭೆನಟನು ಆ ಹೆಣವನ್ನು ಆಪಾದ ಮಸ್ತಕದವರೆಗೆ ಚೆನ್ನಾಗಿ ನಿರೀಕ್ಷಿಸಿ ಬ್ಲೇಕನನ್ನುದ್ದೇಶಿಸಿ:—ತಾವು ಯಾವ ಚೀನೀಯ ಮನುಷ್ಯನ ಮೇಲೆ ತಮ್ಮ ಕಾರ್ಯಭಾರವನ್ನು ವಹಿಸಿದ್ದಿರೋ ಅವನ ಗುರುತು ನನಗಿಲ್ಲ. ಬ್ಲೇಕರೇ, ಈ ಹೆಣವು ಆ ವ್ಯಕ್ತಿಯದೇ ಏನು? ಈತನ ಮುಖಚರ್ಯೆಯು ವಿಕೃತವಾಗಿರುವದರಿಂದ ಒಮ್ಮೆಲೆ ಗುರುತು ಹತ್ತದಂತಾಗಿದೆ. ಚೆನ್ನಾಗಿ ಪರೀಕ್ಷಿಸಿ ನೋಡಿರಿ, ಎಂದನು.

ಬ್ಲೇಕ:—ಈ ಹೆಣದ ಮೈಕಟ್ಟನ್ನು ನೋಡಿದರೆ, ಚಾಉೂ-ಇಯಾಂಗನ ಹೆಣವೇ ಇದೆಂದೆನ್ನಬಹುದು; ಆದರೆ ಇದರ ಮೋರೆಯನ್ನು ನೋಡಿದರೆ ಅವನೇ ಇವನೆಂದು ಹೇಳಲಾಗುವದಿಲ್ಲ.

ಸ್ಮಿತ್ಥ:—ನನಗಂತೂ ಇದು ಆ ಚಾಉೂ-ಇಯಾಂಗನ ಹೆಣವೇ ಎಂದೆನಿಸುತ್ತಿದೆ.

ಬಳಿಕ ಬ್ಲೇಕನು ಆ ಹೆಣದ ಎಡಗೈಯನ್ನು ಚೆನ್ನಾಗಿ ನಿರೀಕ್ಷಿಸಿ, ಅದನ್ನು ತನ್ನ ಕೈಯಿಂದ ಎತ್ತಿ ಹಿಡಿದನು. ಆ ಕೈಯ ಬೆರಳೊಳಗಿನ ಒಂದು ವಜ್ರದುಂಗುರವು ಆ ಉಜ್ವಲವಾದ ದೀಪದ ಬೆಳಕಿನಲ್ಲಿ ಲಕಲಕವೆಂದು ಹೊಳೆಯಹತ್ತಿತು. ಆ ಉಂಗುರದಲ್ಲಿ ಒಂದು ಚಿತ್ರವು ಕೊರೆಯಲ್ಪಟ್ಟಿತ್ತು. ಅದನ್ನು ನೋಡಿ ಬ್ಲೇಕನು: ಚಾಉೂ-ಇಯಾಂಗನ ಕೈಬೆರಳಲ್ಲಿ ಈ ಉಂಗುರವಿದ್ದದ್ದನ್ನು ನಾನು ಹಲವು ಸಾರೆ ನೋಡಿರುತ್ತೇನೆ. ಇದು ಆತನದೇ ಆಗಿದೆ. ಒಂದು ದಿನ ಮಾತನಾಡುವಾಗ್ಗೆ ಆತನು: "ಈ ಉಂಗುರವು ತನಗೆ ತನ್ನ ಗಂಡುವಂಶಜರಿಂದ ಬಂದಿದೆಯೆಂದೂ ಮಾಂಚೀರಿಯಾ ವಂಶದ ಮೂಲಪುರುಷನೇ ಈ ಉಂಗುರವನ್ನು ಮಾಡಿಸಿದ್ದನೆಂದೂ ಇದು ತನ್ನಲ್ಲಿರುವದು ತನ್ನ ವಂಶ ಗೌರವಕ್ಕೆ ಕಾರಣವೆಂದೂ" ಹೇಳಿದ್ದನು.

ಇನ್ಸಪೆಕ್ಟರ ಡೆಭೆನಟನು ಅದಕ್ಕೆ:—ಹಾಗಾದರೆ ಈ ಉಂಗುರವಿದ್ದ ಈ ಹೆಣವು ಆ ಚಾಉೂ-ಈಯಾಂಗನದೇ ಎಂದು ಖಾತ್ರಿಯಾದಂತಾಯಿತು

ಬ್ಲೇಕನು ಸಮ್ಮತಿಪಟ್ಟು:—ಅಹುದು. ಆ ಬಗ್ಗೆ ಇನ್ನು ಅನುಮಾನವೇ ಉಳಿಯಲಿಲ್ಲ. ಈತನನ್ನು ಈ ಚಾಯ್ನಾ ಫೀಲ್ಡಿನ ಆ ಸಿಂಹನೇ ಕೊಲ್ಲಿಸಿರಬೇಕು. ಯಾಕಂದರೆ, ಈತನು ಗುಪ್ತವೇಷದಿಂದ ಇಲ್ಲಿ ವಾಸಿಸುತ್ತಿದ್ದನು. ಇದನ್ನು ಆ ಸಿಂಹನು ಹೇಗೆಯೋ ತಿಳಿದು, ಇವನ ಮೋರೆಯ ಗುತುರ ಹತ್ತದ ಹಾಗೆ ಹೀಗೆ ಕ್ರೂರತನದಿಂದ ಕೊಲ್ಲಿಸಿ ಹೊಳೆಯಲ್ಲಿ ಚೆಲ್ಲಿಸಿರುತ್ತಾನೆ.

ಇನ್ಸ:— ಈ ಹೆಣವು ನೀರಲ್ಲೆಷ್ಟು ದಿನ ಬಿದ್ದಿರಬಹುದೆಂಬದನ್ನು ನೀವು ಅನುಮಾನಿಸಲಾರಿರಾ?

ಬ್ಲೇಕ:—ಎರಡು-ಮೂರು ದಿನಗಳ ವರೆಗೆ ಬಿದ್ದಿರಬಹುದಾಗಿದೆ.

ಬಳಿಕ ಬ್ಲೇಕನು ಆ ಹೆಣದ ಕೈಬೆರಳೊಳಗಿನ ಆ ಉಂಗುರವನ್ನು ಯುಕ್ತಿ-ಪ್ರಯುಕ್ತಿಗಳಿಂದ ತಕ್ಕೊಂಡು ಜೇಬಿನಲ್ಲಿರಿಸಿದನು, ತದನಂತರ ಆ ಹೆಣದ ಮೇಲೆ ಬಟ್ಟೆಯನ್ನು ಹೊಚ್ಚಿ ಸಂಗಡಿಗರೊಡನೆ ಅಲ್ಲಿಂದ ಹೊರಟು ಹೋದನು.

ಹೊರಬದಿಯ ಶಿಪಾಯಿಯು ಆದುವರೆಗೂ ಬಾಗಿಲ ಬಳಿಯಲ್ಲೇ ನಿಂತುಕೊಂಡಿದ್ದನು. ಅವನು ಇನ್ಸಪೆಕ್ಟರನನ್ನು ಕುರಿತು:—ತಾವು ಆ ಚೀನಿಗನ

ಹೆಣವನ್ನು ಗುರ್ತಿಸಿದರೇನು?

ಬ್ಲೇಕನು ಏನೊಂದನ್ನೂ ಹೇಳಲಿಲ್ಲ. ಇನ್ಸಪೆಕ್ಟರನು ಬ್ಲೇಕನ ಮೋರೆಯ ಕಡೆಗೆ ನೋಡಿ ಆತನ ಇಂಗಿತವನ್ನು ತಿಳಿದು, ಆ ಶಿಪಾಯಿಯನ್ನು ಕುರಿತು:– ನಮಗೆ ಆ ಹೆಣದ ಗುರುತು ಹತ್ತುವ ಬಗೆ ಹೇಗೆ? ಆ ಹೆಣದ ಮೋರೆಯು ತೀರ ವಿಕೃತವಾಗಿದ್ದರಿಂದ ಅದನ್ನು ನೋಡಿ ಆ ಹೆಣವು ಇಂಥವರದೇ ಎಂಬದು ತಿಳಿಯುವಂತಿಲ್ಲ. ಏನೇ ಇರಲಿ, ನಾವುಗಳು ಈ ಹೆಣವನ್ನು ನೋಡಬಂದಿದ್ದೆವೆಂಬದನ್ನು ಯಾರ ಮುಂದೂ ಹೇಳದಿದ್ದರೆ, ನೀನು ಸುಖಿಯಾಗುವೆ.

ಆ ಮೇಲೆ ಇನ್ಸಪೆಕ್ಟರನು ಬ್ಲೇಕ-ಸ್ಮಿತ್ಥರೊಡನೆ ಮತ್ತೆ ಆ ಬಾಡಿಗೆಯ ಮೋಟಾರವನ್ನೇರಿದನು. ಕೆಲ ನಿಮಿಷಗಳಲ್ಲಿಯೇ ಅವರೆಲ್ಲರ ಮನಸ್ಸೂ ನಾನಾ ಬಗೆಯ ದುಶ್ಚಿಂತೆಯಿಂದ ಆವರಿಸಿತು. ಯಾರ ಬಾಯಿಂದಲೂ ಯಾವ ಸುದ್ದಿಯೂ ಹೊರಹೊರಡಲಿಲ್ಲ. ಕಟಕಡೆಗೆ ಡೆಭೆನಟನೇ ಬ್ಲೇಕನನ್ನು ಕುರಿತು: ಚೀನೀ ಪುಂಡರ ಮುಖ್ಯಸ್ತನೇ ಆ ಚಾಲೂ ಇಯಾಂಗನನ್ನು ಕೊಲ್ಲಿಸಿರುತ್ತಾನಲ್ಲವೆ? ಆ ಮುಖ್ಯಸ್ತನು ಎಂಥ ನೀಚನಿರುವನಲ್ಲ! ಆತನ ನೀಚತನವನ್ನು ಕಂಡೂ ಕಂಡು ಅವನನ್ನು ಹಿಡಿಯದೆ ಬಿಡಬಹುದೇ?

ಬ್ಲೇಕ:—ಆ ಸಂಕಲ್ಪವನ್ನು ಬಿಡುವದುಂಟೇ? ನೀವು ನನ್ನನ್ನು ಅಂಥ ಹೇಡಿಯೆಂದು ತಿಳಿಯುತ್ತೀರೇನು? ಹೇಗಾದರೂ ಮಾಡಿ ನಾನು ಆತನನ್ನು ಕೈಸೆರೆ ಹಿಡಿದು ಶಿಕ್ಷೆಗೆ ಗುರಿಪಡಿಸುವ ವ್ಯವಸ್ಥೆ ಮಾಡುವೆನು. ಚಾಲೂ ಇಯಾಂಗನು ನನ್ನ ಅಪ್ಪಣೆಯಿಂದಲೇ ಆತನ ಸಂಧಾನ ಹಚ್ಚಲಿಕ್ಕೆಂದು ಹೋದವನು; ಅದರಿಂದ ಆತನ ಅಪಮೃತ್ಯುವಿಗೆ ನಾನೇ ಕಾರಣನು; ನಾನೇ ಜವಾಬುದಾರನು. ನಾನು ಆ ಚೀನಿಗರ ಮುಖ್ಯಸ್ತನಿಗೆ ಈ ಅತ್ಯಾಚಾರದ ಪ್ರತಿಫಲವನ್ನುಣಿಸದೆ ಕೈ ಬಿಡುವವನಲ್ಲ.

ಇನ್ಸ:—ನಾನು ನಿಮ್ಮ ಸಾಹಸಕ್ಕೆ ಧನ್ಯವಾದಗಳನ್ನರ್ಪಿಸುತ್ತೇನೆ. ಈ ವಿಚಿತ್ರ ಘಟನೆಯ ನಂತರ ನೀವು ಆತನನ್ನು ಹಿಡಿಯುವ ಸಂಕಲ್ಪವನ್ನು ಪರಿತ್ಯಜಿಸಿ ಬಿಟ್ಟಿದ್ದರೂ ನಾನು ಆ ಬಗ್ಗೆ ವಿಸ್ಮಯಗೊಳ್ಳುತ್ತಿರಲಿಲ್ಲ; ಮನುಷ್ಯ ಸ್ವಭಾವವೇ ಅದೆಂದು ಸುಮ್ಮನಿರುತ್ತಿದ್ದೆನು. ಏನೇ ಆಗಲಿ, ನಾನು ನಿಮ್ಮನ್ನು ನಿಮ್ಮ ಸಂಕಲ್ಪದಿಂದ ಪರಾವೃತ್ತಗೊಳಿಸಲಿಚ್ಛಿಸುವದಿಲ್ಲ; ಆದರೆ ನೀವು ಇನ್ನು ಮುಂದೆ ಕೆಲಸಕ್ಕೆ ತೊಡಗುವ ಮೊದಲು ಎಷ್ಟು ಹೆಚ್ಚು ಎಚ್ಚರದಿಂದ ಕಾರ್ಯ ಪ್ರವೃತ್ತವಾಗಬೇಕಾಗುವದೆಂಬದನ್ನು ಚೆನ್ನಾಗಿ ಆಲೋಚಿಸಿರಿ. 'ತಾನು ಚಾಯ್ನಾ ಫೀಲ್ಡಿನ ಸಿಂಹ' ನೆಂದು ಯಾವನು ಹೇಳಿಕೊಂಡಿರುವನೋ, ಅವನು ಬಹು ಬಲಿಷ್ಠ ದಸ್ಯುದಲಪತಿಯಾಗಿರುವನು. ಆತನ ಅನುಚರರು ಯಾವಾಗ ಹಾಗು

ಹೇಗೆ ನಿಮ್ಮನ್ನು ಗತಿಗಾಣಿಸ ಪ್ರಯತ್ನಿಸುತ್ತಿರುವರೆಂಬದರ ನಿಯಮವಿಲ್ಲ.

ಬ್ಲೇಕ:—ನೀವೆನ್ನುವ ಮಾತು ಸುಳ್ಳಲ್ಲ. ಈ ಪುಂಡರೇ ಚಾಲೂ ಇಯಾಂಗನ ಉದ್ದೇಶವನ್ನು ತಿಳಿದು ಅವನನ್ನು ಕೊಂದಿರುತ್ತಾರೆ. ಅವನು ನನ್ನ ಅಪ್ಪಣೆಯಿಂದಲೇ ಆ ಕೆಲಸಕ್ಕೆ ತೊಡಗಿದ್ದನೆಂಬದನ್ನು ಇವರು ತಿಳಿದಿರಲಿಕ್ಕಿಲ್ಲೆಂದು ಅದಾರು ಹೇಳಬೇಕು? ಚಾಲೂ ಇಯಾಂಗನ ಮರಣದ ನಂತರ ನಾನು ಆತನ ಪತ್ತೆಗೆ ತೊಡಗುವವನೇ ಎಂಬ ಸಿದ್ಧಾಂತವನ್ನು ಕೂಡ ಮಾಡಿಕೊಂಡು ಆ ದುರ್ವೃತ್ತರು ಈಗ ನನ್ನ ನಿರೀಕ್ಷಣೆಯಲ್ಲಿರಬಹುದಾಗಿದೆ.

ಅನ್ನ:—ಹಾಗಾದರೆ ನೀವಿನ್ನು ಯಾವ ಬಗೆಯಿಂದ ಕಾರ್ಯಪ್ರವೃತ್ತರಾಗುವದೆಂಬದನ್ನು ಗೊತ್ತುಮಾಡಿಕೊಂಡಿರುತ್ತೀರೇನು?

ಬ್ಲೇಕ:-ಕಾರ್ಯೋದ್ಧಾರಕ್ಕಾಗಿ ನಾನು ಯಾವ ಕೌಶಲ್ಯವನ್ನು ಪ್ರಯೋಗಿಸಬೇಕೆಂಬದನ್ನು ಇನ್ನೂ ನಿರ್ಧರಿಸಿಕೊಳ್ಳದಿದ್ದರೂ, ನಾನೂ ಸ್ಮಿತ್ಥನೂ ಛದ್ಮ ವೇಷದಿಂದ ಆ ಚಾಯ್ನಾ ಫೀಲ್ಡಿನೊಳಗೇ ವಾಸಿಸಬೇಕೆಂಬದನ್ನು ನಿಶ್ಚಯಿಸಿಕೊಂಡಿರುತ್ತೇನೆ. ಪರದೇಶದ ನಾವಿಕರ ಛದ್ಮವೇಷದಿಂದ ಆ ಚಾಯ್ನಾ ಫೀಲ್ಡಿನೊಳಗೆ ಹಗಲು-ರಾತ್ರಿ ಅಡ್ಡಾಡಿ, ಅವರ ಸಂಧಾನ ಹಚ್ಚುವೆವು; ಹಾಗು ತಕ್ಕ ಸಮಯದಲ್ಲಿ ನಿಮ್ಮ ಸಹಾಯವನ್ನು ಪಡೆದು ಮುಂದಿನ ಉದ್ಯೋಗಕ್ಕೆ ಹತ್ತುವೆವು. ಇಂದು ರಾತ್ರಿ ನಾನು ನಿಮ್ಮ ಜೇಲಿಗೆ ಬಂದು ನಿಮ್ಮ ಮಗನನ್ನು ಕಾಣುವೆನು. ಈ ಪ್ರಸಂಗದಲ್ಲಿ ಅವನಿಗೆ ಆಶೆಯನ್ನೂ ಭರವಸೆಯನ್ನೂ ತೋರುವದು ಅತ್ಯವಶ್ಯವಾಗಿದೆ. ಅವನು ಬಹು ನಿರಾಶೆಪಟ್ಟಿರುತ್ತಾನೆ; ಆದರೆ ಮೋರಿಗೆ ಯಾವ ಅನಿಷ್ಟವೂ ಆಗಿಲ್ಲವೆಂದು ನನಗನಿಸುತ್ತಿದೆ. ಆ ಚೀನೀ ಪುಂಡರ ಮುಖ್ಯಸ್ಥನು ಚಾಲೂ ಇಯಾಂಗನನ್ನು ನಿಮ್ಮ ಗುಪ್ತ ಚಾರನೆಂದು ಖಂಡಿತವಾಗಿಯೂ ಅನುಮಾನಿಸಿಲ್ಲ. ಆದುದರಿಂದಲೇ ಮೋರಿಯನ್ನು ನಾನು ಬಂಧಮುಕ್ತಗೊಳಿಸುವೆನೆಂದು ನನಗೆ ಭರವಸೆ ಎನಿಸುತ್ತಿದೆ. ಇನ್ನು ಮುಂದೆ ನಾನು ನಿಮಗೆ ಹಾಗು ನಿಮ್ಮ ಮಗನಿಗೆ ಯಾವಾಗ ಭೆಟ್ಟಿಯಾದೇನೆಂಬದನ್ನು ಈಗಲೆ ಹೇಳಲಾರೆನು. ನಾನೂ ಸ್ಮಿತ್ಥನೂ ಬೇಗನೆ ಅದೃಶ್ಯರಾಗುವೆವು. ಆದರೂ ನಿಮಗೆ ತಿಳಿಸಬೇಕಾದ ಅವಶ್ಯಕತೆ ಕಂಡಾಗ ತತ್ಕ್ಷಣವೇ ತಿಳಿಸುತ್ತೇವೆ.



## ೬ನೇ ತೆರೆ.

## ಸ್ಮಿತ್ಥನ ಪ್ರೇಮಪಾತ್ರ.



ಪ ಪ್ಪಲಿನೊಳಗಿನ ಹಾಯ್‌ಸ್ಟ್ರೀಟಿನಲ್ಲಿ ಸರ್ವ ಸಾಮಾನ್ಯರಿಗೂ ಉಪಯುಕ್ತವಾದಂಥ ಒಂದು ಉತ್ತಮ ಹೋಟಲಿದ್ದಿತು. ಒಂದು ರಾತ್ರಿಯಲ್ಲಿ ಆ ಹೋಟಲಿನ ಎದುರಿಗಿನ ಮನೆಯೊಳಗಿನ ಒದರಾಟ-ಚೀರಾಟವನ್ನೂ ಹೊಡೆದಾಟ-ಬಡಿದಾಟವನ್ನೂ ಕೇಳಿ, ಅದೇ ದಾರಿಯಿಂದ ನಡೆದಿದ್ದ ಒಬ್ಬ ದೀರ್ಘ ಕಾಯದ ಕೃಷ್ಣವರ್ಣದ ನಾವಿಕನು ಅಲ್ಲಿ ನಿಂತುಬಿಟ್ಟನು, ಹಾಗು ಆ ಮನೆಯ ತೆರೆದಿದ್ದ ಕಿಟಕಿಯೊಳಗಿಂದ ಒಳಗಿನ ದೀಪದ ಬೆಳಕಿನಲ್ಲಿ ನೋಡುತ್ತಾನೆ, ಒಳಗೆ ಇಬ್ಬರು ಕೈಗೆ ಕೈ ಹತ್ತಿ ಜಗಳಾಡುತ್ತಿದ್ದು, ಸಮೀಪದಲ್ಲಿ ಎಷ್ಟೋ ಜನರು ನಿಂತುಕೊಂಡು ಮೋಜು ನೋಡುತ್ತಿರುವರು.

ಹೊಡೆದಾಟವು ವಿಕೋಪಕ್ಕೆ ಹೋಗಲು, ಅವರೊಳಗಿನೊಬ್ಬನು ತನ್ನ ಬಗಲೊಳಗಿನ ಚೂರಿಯನ್ನು ತೆಗೆದು ಪ್ರತಿಪಕ್ಷಿಯನ್ನು ಇರಿದನು. ಗಾಯಗೊಂಡವನು ಚೀರಿಕೊಳ್ಳಲಾರಂಭಿಸಿದನು. ಮೋಜು ನೋಡುತ್ತಿದ್ದವರು "ಖೂನಿ! ಖೂನಿ!" ಎಂದು ಒದರುತ್ತ ಚೂರಿಯಿಂದ ತಿವಿದವನನ್ನು ಹಿಡಿಯಲುದ್ಯುಕ್ತರಾದರು. ಅಷ್ಟರಲ್ಲಿ ಆತನು ಓಡಿ ಹೋಗಿ ಕತ್ತಲಲ್ಲಿ ಅದೃಶ್ಯನಾದನು. ಯಾವನು ಗಾಯಗೊಂಡಿದ್ದನೋ, ಅವನ ಶುಶ್ರೂಷೆಗೆ ಕೆಲ ಜನರು ತೊಡಗಿದರು. ಆತನ ಎಡಗೈಯ ರಟ್ಟೆಯೊಳಗೆ ಆ ಚೂರಿಯು ಹಿಡಿಯ ಮಟ್ಟ ನಟ್ಟಿತ್ತು; ಆ ಗಾಯದೊಳಗಿಂದ ನೆತ್ತರವು ಕಾರಂಜಿಯಂತೆ ಹರಿಯುತ್ತಿತ್ತು! ಮೋಜು ನೋಡುವವರು ಆ ಗಾಯಗೊಂಡವನನ್ನೆತ್ತಿಕೊಂಡು ಆ ಹೋಟಲಿಗೆ ಒಯ್ದರು. ಈ ಕೃತ್ಯವು ವಿಶೇಷವಾದದೆಂದು ಯಾರಿಗೂ ಅನಿಸಲಿಲ್ಲ. ಅದೊಂದು ಅವರ ದಿನಚರಿಯ ಕಾರ್ಯದಂತಿತ್ತು, ಆದ್ದರಿಂದ ಅವರಲ್ಲಿಯು ಯಾರೂ ಆ ದುಷ್ಕೃತ್ಯದ ಬಗ್ಗೆ ಪೃಚ್ಛಾಪೃಚ್ಛೆ ಮಾಡಲಿಲ್ಲ.

ಈ ಮೊದಲಿನ ಆ ಕಪ್ಪುಬಣ್ಣದ ನಾವಿಕನೂ ಆ ಹೋಟಲಿನೊಳಗಿನ ಒಂದು ಭಾಗವನ್ನು ಹೊಕ್ಕನು; ಹಾಗು ಜೇಬಿನೊಳಗಿನ ಬಹು ದೊಡ್ಡ ಚಿಲುಮೆಯನ್ನು ತೆಗೆದು ಸಜ್ಜು ಮಾಡುತ್ತ:—

"ನಮ್ಮ ಆ ಹುಡುಗನು ಎತ್ತ ಹೋಗಿರಬಹುದು? ಇಲ್ಲಿಗ ಬರಲಿಕ್ಕೆ ಅವನಿಗೆ ಇಷ್ಟೇಕೆ ತಡವಾಯಿತೋ ತಿಳಿಯದಾಗಿದೆ." ಎಂದು ಸಮೀಪದಲ್ಲಿ

ಕುಳಿತವರಿಗೆ ಸಹಜವಾಗಿ ಕೇಳಿಸುವಂತೆ ನುಡಿದನು.

ಈ ಭದ್ರ ವೇಷದ ನಾವಿಕನು ಯಾರಾಗಿರಬಹುದೆಂಬದನ್ನು ನಮ್ಮ ಚಾಣಾಕ್ಷ ವಾಚಕರು ಈಗಾಗಲೇ ತರ್ಕಿಸಿರಬಹುದು. ಈತನೇ ಬ್ಲೇಕನು. ಸ್ಮಿತ್ಥನು ಜಪಾನದೇಶದ ಹಡಗುಪಡೆಯ ಶಿಪಾಯಿಯ ಭದ್ರ ವೇಷವನ್ನು ಧರಿಸಿ ಬ್ಲೇಕನೊಡನೆ ಆ ಹೋಟಲಿನಲ್ಲಿರಹತ್ತಿದ್ದನು. ಅವರು ಕೆಲ ದಿನಗಳ ಹಿಂದೆಯೇ ಆ ಹೋಟಲ್ಲಿನ ಮೇಲಂತಸ್ತಿನೊಳಗಿನದೊಂದು ಕೋಣೆಯನ್ನು ಬಾಡಿಗೆಯಿಂದ ಹಿಡಿದು, ಅಲ್ಲಿ ವಾಸಿಸ ಹತ್ತಿದ್ದರು.

ಆ ಚಾಯ್ನಾ ಫೀಲ್ಡಿನ ಓಣಿ-ಬಟ್ಟೆಗಳನ್ನೆಲ್ಲ ಕಂಡುಕೊಂಡ ಬಳಿಕ, ಹಗಲು ರಾತ್ರಿಯನ್ನದೆ ಅವರೀರ್ವರೂ ಅಲ್ಲಿಯ ಪ್ರತಿಯೊಂದು ಸಂದಿ ಮೂಲೆಗಳನ್ನು ಸುತ್ತಲಾರಂಭಿಸಿದರು. ಹಾಗೆ ತಿರುಗುವ ಅವರ ಉದ್ದೇಶವು ಆ ಚೀನೀ ಪುಂಡರ ಗುಪ್ತ ಸಂಗತಿಗಳನ್ನು ತಿಳಿಯುವದೇ ಆಗಿತ್ತು. ಆ ಚಾಯ್ನಾಫೀಲ್ಡನೊಳಗಿನ ಪ್ರತಿಯೊಂದು ಉಪಾಹಾರ ಗೃಹ-ಹೋಟಲುಗಳಲ್ಲಿ ಜೂಜಿನ ಅಡ್ಡೆಗಳೂ, ಇಸ್ಪೇಟನಾಟದ ರಂಗುಗಳೂ ಇದ್ದವು. ಬ್ಲೇಕನು ಅಲ್ಲಲ್ಲಿ ಸುತ್ತುವರಿದು ಅವನ್ನೆಲ್ಲ ನೋಡಿಕೊಂಡರೂ, ಅದರಿಂದ ಆತನ ಸ್ವೀಕೃತಕಾರ್ಯಕ್ಕೆ ಇದುವರೆಗೂ ವಿಶೇಷ ಪ್ರಯೋಜನವಾಗಿರಲಿಲ್ಲ. ಚಾಯ್ನಾ ಫೀಲ್ಡಿನ ಸಿಂಹನ ಅಥವಾ ಆತನ ಪ್ರಮುಖ ಅನುಯಾಯಿಗಳ ಯಾವ ವರ್ತಮಾನವೂ ಅವನಿಗೆ ಹತ್ತಿರಲಿಲ್ಲ.

ನಾವು ಯಾವ ದಿನದ ಸಂಗತಿಯನ್ನು ಹೇಳಲಿರುವೆವೊ, ಆ ದಿನ ಅಪರಾಹ್ಣ ಕಾಲದಲ್ಲಿ ಅವರಿಬ್ಬರೂ ತಮ್ಮ ಬಿಡಾರದಿಂದ ಒಮ್ಮೆಲೆ ಹೊರಬಿದ್ದರು; ಆದರೆ ಎಲ್ಲಿಯೂ ಯಾವ ಸಂಧಾನವೂ ಹತ್ತದ್ದರಿಂದ ಬ್ಲೇಕನು ಸಂಜೆಯ ನಂತರ ಮನೆಗೆ ಹಿಂದಿರುಗಿದನು. ಅದೇ ಕಾಲಕ್ಕೆ ಅವನಿಗೆ ಮೇಲೆ ವರ್ಣಿಸಿದ ಖೂನಿನ ಘಟನೆಯು ದೃಗ್ಗೋಚರವಾಯಿತು. ಸ್ಮಿತ್ಥನು ಈ ಮೊದಲೇ ಮನೆಗೆ ಬಂದಿರಬಹುದೆಂದು ಆತನು ಊಹಿಸಿದ್ದನು; ಆದರೆ ಮನೆಗೆ ಬಂದು ನೋಡುತ್ತಾನೆ, ಸ್ಮಿತ್ಥನ ಪತ್ತೆಯೇ ಇರಲಿಲ್ಲ. ಸ್ಮಿತ್ಥನು ತಾನು ಯಾವ ದಿಕ್ಕಿಗೆ ಹೋಗುತ್ತೇನೆಂಬದನ್ನು ಕೂಡ ತಿಳಿಸಿ ಹೋಗಿರಲಿಲ್ಲ. ರಾತ್ರಿಯ ಎಂಟುಗಂಟೆಯಾದರೂ ಸ್ಮಿತ್ಥನು ಮನೆಗೆ ಹಿಂದಿರುಗದ್ದನ್ನು ಕಂಡು ಬ್ಲೇಕನು ಉತ್ಕಂಠಿತನಾದನು. ಸ್ಮಿತ್ಥನು ಬಹುಶಃ ಆ ಸಿಂಹನ ಅನುಚರರ ಜಾಲದಲ್ಲಿ ಸಿಕ್ಕಿರಬೇಕೆಂದು ಅವನಿಗೆ ಸಂಶಯವುಂಟಾಯಿತು. ಆ ಪುಂಡರು ಚಾಲೂ-ಇಯಾಂಗನನ್ನು ಸಂಹರಿಸಿದ ನಂತರ ನಾಲ್ಕೂ ಕಡೆಗೆ ದೃಷ್ಟಿಯನ್ನಿರಿಸಿ, ಬಳ್ಳೇ ಎಚ್ಚರಿಕೆಯಿಂದಿರುವರೆಂಬದು ಕಳೆದ ಕೆಲದಿನಗಳ ಅನುಭವದಿಂದ ಬ್ಲೇಕನ ಸದರ್ಶನಕ್ಕೆ ಬಂದಿತ್ತು.

ಮುಂದೆ ಹತ್ತು-ಹದಿನೈದು ನಿಮಿಷಗಳಲ್ಲೇ ಸ್ಮಿತ್ಥನು ಸಾವಕಾಶವಾಗಿ ಆ ಮನೆಯನ್ನು ಪ್ರವೇಶಿಸಿದನು. ಆತನ ಆ ಛದ್ಮವೇಷದಲ್ಲಿ ಯತ್ಕಿಂಚಿತ್ತೂ ಕೊರತೆಯಿರಲಿಲ್ಲ. ಈತನು ಜಪಾನದವನಲ್ಲೆಂಬುದನ್ನು ಯಾವ ಚತುರ ಜಪಾನಿಯೂ ತಿಳಿಯುವಂತಿರಲಿಲ್ಲ. ಸ್ಮಿತ್ಥನಿಗೆ ಜಪಾನೀ ಭಾಷೆಯು ಬಹು ಚೆನ್ನಾಗಿ ಬರುತ್ತಿತ್ತು. ನಿಷ್ಣಾತ ಪತ್ತೇದಾರನಾಗಬೇಕಾದರೆ ಬರಿಯ ಛದ್ಮವೇಷ ಧರಿಸ ಬಂದರಾಗಲಿಲ್ಲ. ಆತನಿಗೆ ಅನೇಕ ದೇಶಗಳ ನಾನಾ ಭಾಷೆಗಳು ಬಹು ಚೆನ್ನಾಗಿ ಬರಬೇಕಾಗುತ್ತದೆ.

ಸ್ಮಿತ್ಥನನ್ನು ಕಂಡು ಬ್ಲೇಕನು ಸಿಟ್ಟಿನಿಂದ:—ತಿರುಗಿ ಬರಲಿಕ್ಕೆ ಇಷ್ಟು ತಡವೇಕಾಯಿತು? ಎಲ್ಲಿಗೆ ಹೋಗಿದ್ದೆ? ನಿನಗೆ ಮರಳಿ ಬರಲಿಕ್ಕೆ ತಡವಾದದ್ದನ್ನು ಕಂಡು ನಾನು ಬಹು ಚಿಂತೆಗೊಳಗಾಗಿದ್ದೆನು.

ಸ್ಮಿತ್ಥ:- ಕಮಲಾಲಯ ಎಂಬ ಹೆಸರಿನ ಯಾವ ಉಪಹಾರಗೃಹಕ್ಕೆ ನಿನ್ನೆ ನಾವಿ ಬ್ಬರೂ ಹೋಗಿದ್ದೆವೋ, ಈ ದಿನವೂ ನಾನು ಅಲ್ಲಿಗೆ ಹೋಗಿದ್ದೆನು.

ಬ್ಲೇಕ:—ಮೂರ್ಖಾ, ಆ ಸ್ಥಳವು ಬಹು ವಿಪಜ್ಜನಕವಾದದ್ದೆಂಬದನ್ನು ನಿನಗೆ ಹೇಳಿರಲಿಲ್ಲವೇ? ಹೀಗಿದ್ದೂ ನೀನು ಅಲ್ಲಿಗೆ ಮತ್ತೆ ಹೋದ ಕಾರಣ ವೇನು?

ಸ್ಮಿತ್ಥ:—ಅಲ್ಲಿಯ ಒಬ್ಬ ತರುಣಿಯನ್ನು ನೋಡಹೋಗಿದ್ದೆನು. ಆಕಸ್ಮಿಕವಾಗಿ ಆಕೆಯ ನೆನಪು ಆದ್ದರಿಂದ ಮತ್ತೆ ಹೋಗಿದ್ದೆ............

ಬ್ಲೇಕ:—ಸ್ಮಿತ್ಥಾ, ನೀನು ಆ ವಾರವನಿತೆಯರ ಹಿಂದಿಂದೆ ಅಡ್ಡಾಡಿ, ನನ್ನ ಆ ಗುಪ್ತಕೆಲಸದಲ್ಲಿ ನನಗೆ ಹೀಗೆಯೇ ಸಹಾಯ ಮಾಡುವವನೋ? ಭಲೆ! ಭಲೆ!!

ಸ್ಮಿತ್ಥ: ಆ ತರುಣಿಯ ಹೆಸರನ್ನೆತ್ತಿದ ಕೂಡಲೆ ನಿಮ್ಮ ಸಿಟ್ಟು ತಲೆಗೇರಿ ಹೋಗಿದೆ. ಹಾಗೆ ಸಿಟ್ಟಾಗುವ ಮೊದಲು ನನ್ನ ಅಂಬೋಣವನ್ನೆಲ್ಲ ಸಾವಧಾನದಿಂದ ಕೇಳಿಕೊಳ್ಳಿರಿ. ಕಮಲಾಲಯದ ಒಡೆಯನಾದ ವೃದ್ಧ ಲಿಕೊಯಾಂಗನ ಆ ತರುಣ ಹುಡುಗಿಯನ್ನು ನೀವು ನೋಡಿರುವಿರಷ್ಟೇ? ಅವಳು ಒಳ್ಳೇ ಚಲುವೆಯಾಗಿಲ್ಲವೆ?

ಬ್ಲೇಕ: -ಅಹುದು. ಅವಳೊಳ್ಳೇ ಸುಂದರಿಯಾಗಿರುತ್ತಾಳೆ. ನೀನು ಅವಳನ್ನು ಈ ದಿನ ಮತ್ತೆ ಕಾಣುವ ಅವಶ್ಯಕತೆಯೇನಿದ್ದಿತು.?

ಸ್ಮಿತ್ಥ:—ನಾನು ಅದನ್ನೇ ವಿವರಿಸುವೆನು. ಆಕೆಯು ನಿಮಗೂ ನನಗೂ ಹೇಗೆಯೇ ಕಾಣಿಸಿಕೊಳ್ಳಲಿ, ಹಲವು ಜನ ಚೀನಿ ತರುಣರ ಕಣ್ಣಿಗೆ ಮಾತ್ರ ಅವಳು ಸ್ವರ್ಗದ ಅಪ್ಸರೆಯಾಗಿರುವಳು! ಆ ಅಪ್ಸರೆಯು ಮಿಷ್ಟಭಾಷಣವನ್ನು ಲಾಲಿಸ

ಲಿಕ್ಕೂ, ಆಕೆಯ ಪ್ರೇಮಕಟಾಕ್ಷಗಳನ್ನು ಹೊಂದಲಿಕ್ಕೂ ಹಲವು ಜನ ಚೀನೀಯ ತರುಣರು ಭೃಂಗಿಗಳಂತೆ ಅಲ್ಲಿ ಅಡ್ಡಾಡುವರು. ಅವರು ಅವಳೊಡನೆ ಹಲಕೆಲವು ಪ್ರೇಮಾಲಾಪಗಳನ್ನು ಕೂಡ ನಡಿಸುವರು. ಅಂಥ ಆ ಅಪ್ಸರೆಯು ನಿನ್ನಿನ ದಿವಸ ತನ್ನ ನಯನಬಾಣಗಳಿಂದ ನನ್ನನ್ನು ಗಾಯಗೊಳಿಸಲಿಕ್ಕೆ ಪ್ರಯತ್ನಿಸುತ್ತಿದ್ದಳು; ಆದಕ್ಕಾಗಿಯೇ ನಾನು ಈ ದಿನವೂ ಅಲ್ಲಿಗೆ ಹೋದದ್ದು.

ಬ್ಲೇಕ:—ಮೂರ್ಖ ನನ ಮಗನೇ! ಬೇಟೆಯ ಹಿಡಿಯ ಹೋದವನು ತಾನೇ ಬೇಟೆಯಾದಂತಾದೀತು.

ಸ್ಮಿತ್ಥ:—ಧಣಿಯರೇ, ಹಾಗಾಗಲಾರದು. ನಾನು ನಮ್ಮ ಬೇಟೆಯನ್ನು ಹಿಡಿಯುವ ಸಲುವಾಗಿ ಆ ಲಲನೆಯ ಕೂಡ ಸ್ನೇಹಬೆಳಿಸಬೇಕೆಂದಿರುವೆನೇ ಹೊರತು, ಆಕೆಯ ಪ್ರೇಮಕಟಾಕ್ಷಗಳಿಗೆ ಮನಸೋತು ಹೋಗಿಲ್ಲ. ಆ ಹರಿಣಾಕ್ಷಿಯ ಸ್ನೇಹವುಂಟಾದರೆ, ಈ ಚಾಯ್ನಾಫೀಲ್ಡನ ಸಿಂಹನ ಸಂಧಾನವು ಸಹಜವಾಗಿ ಹತ್ತಬಹುದಾಗಿದೆ ಇಂದು ನನ್ನ ಮನದಿಚ್ಛೆಯು ಈಡೇರದಿದ್ದರೂ ಒಮ್ಮೆಲೆ ಹತಾಶನಾಗಿ ಹಿಂದಿರುಗಿರುವದಿಲ್ಲ.

ಬ್ಲೇಕ:—ಹಾಗಿದೆಯಲ್ಲವೆ! ಅದರ ಸ್ಮಿತ್ಥಾ, ಆ ಸಿಂಹನ ಸಂಧಾನಕ್ಕಾಗಿ ನೀನು ಮತ್ತೆ ಆ ಕಮಲಾಲಯಕ್ಕೆ ಹೋಗುವ ಅವಶ್ಯಕತೆಯಿಲ್ಲ. ಇಲ್ಲದ ಪೇಚಿನಲ್ಲಿ ಸಿಕ್ಕು ಕಡೆಗೆ ನೀನು ಪ್ರಾಣಕ್ಕೆ ಕೂಡ ಎರವಾದೀಯೆ.

ಸ್ಮಿತ್ಥ:—ಒಡೆಯರೇ, ಒಮ್ಮೆಲೆ ತಾವಿಷ್ಟು ಅಂಜಿಕೊಂಡರೆ ನಡೆಯಲಾರದು. ಮೊದಲು ನನ್ನ ಸಂಗತಿಯನ್ನು ಕೇಳಿಕೊಳ್ಳಿರಿ. ನಾನು ಆ ಕಮಲಾಲಯಕ್ಕೆ ಹೋಗಿ ಅಲ್ಲಿಯ ಹೋಟಲಿನಲ್ಲಿ ಒಂದು ಗ್ಲಾಸ ಸೆರೆಯನ್ನು ಕೊಂಡುಕೊಂಡು ಅದರಲ್ಲಿಯ ಒಂದೊಂದೇ ಹನಿಯನ್ನು ಕುಡಿಯುತ್ತ, ಬಿಸ್ಕೀಟುಗಳನ್ನು ತಿನ್ನುತ್ತ ಕುಳಿತುಕೊಂಡೆನು. ನಾನು ಯಾವ ಕೋಣೆಯಲ್ಲಿ ಕುಳಿತಿದ್ದೆನೋ ಅದರ ಹಿಂಬದಿಯ ಒಂದು ಬಾಗಿಲದೆದುರಿಗೆ ಪರದೆಯನ್ನು ಇಳಿಬಿಟ್ಟಿದ್ದರು. ಅಲ್ಪಾವಧಿಯಲ್ಲೇ ಆ ಕಮಲಾಲಯದ ಮಾಲಕನಾದ ಲೀ ಕೊಯಾಂಗನು ಆ ಪರದೆಯ ಬಳಿಗೆ ಹೋಗಿ, ಆ ಪರದೆಯ ಮರೆಗೆ ನಿಂತುಕೊಂಡಿದ್ದ ಯಾವುದೊಂದು ವ್ಯಕ್ತಿಯ ಕೈಯೊಳಗಿನ ತೊಗಲಿನ ಚೀಲವನ್ನು ಇಸಕೊಂಡನು. ಆ ತೊಗಲಿನ ಚೀಲವು ಬಹು ಭಾರವುಳ್ಳದ್ದೆಂಬದು ಗೊತ್ತಾಗಲು, ನನ್ನ ಕುತೂಹಲವು ಹೆಚ್ಚಿತು. ಲೀ ಕೊಯಾಂಗನು ಬಹು ಕಷ್ಟದಿಂದ ಆ ಚೀಲವನ್ನು ತಕ್ಕೊಂಡು ಸಾಗಲು, ಬಹು ಎಚ್ಚರದಿಂದ ನಾನೂ ಅವನನ್ನು ಅನುಸರಿಸಿದೆನು. ಹಾಗೆಯೇ ಹೋಗಿ ನೋಡುತ್ತೇನೆ, ಅವನು ಬ್ಯಾಕಿಂಗಹಾಮ್ ರೋಡಿನೊಳಗಿನ ಹಾಂಗಕಾಂಗ ಬ್ಯಾಂಕಿನ ಕಟ್ಟಡವನ್ನು ಹೊಕ್ಕನು,

ಅವನು ಆ ಬ್ಯಾಂಕನ್ನು ಹೊಕ್ಕ ಬಳಿಕ ನಾನು ಮರಳಿ ಆ ಕಮಲಾಲಯಕ್ಕೆ ಬಂದೆನು. ಅಲ್ಲಿಗೆ ಬಂದವನೇ ಆ ಹುಡುಗಿಯ ಕೈಯ ಒಂದು ಕಪ್ಪು ಚಹಾ ಕುಡಿದೆನು. ಆಗಲವಳು ಎಷ್ಟೋ ನಯನ ಬಾಣಗಳನ್ನೆರಚಿದಳು; ಆದರೆ ಬಾಯಿಂದ ಯಾವ ಶಬ್ದವನ್ನೂ ನುಡಿಯಲಿಲ್ಲ. ಆಕೆಯೊಡನೆ ಮಾತ ನಾಡಲಿಕ್ಕೆ ನನಗೂ ಆಗ ಸಮಯದೊರೆಯಲಿಲ್ಲ. ಯಾಕಂದರೆ ಅವಳ ತಂದೆಯು ಅಷ್ಟರಲ್ಲೇ ಹಿಂದಿರುಗಿ ಬಂದು, ಸಿಟ್ಟಿನಿಂದ ಆಕೆಗೆ ಏನೇನೋ ಅನ್ನಲು, ಅವಳು ಆ ಪರದೆಯನ್ನು ಜಗ್ಗಿ ಆಚೆಗೆ ಹೊರಟು ಹೋದಳು. ನಾನು ಆಕೆಯ ಕೈಯ ಆ ಚಹವನ್ನು ಪೂರೈಸಿ, ಆ ಕಮಲಾಲಯವನ್ನು ಬಿಟ್ಟು ಹೊರಹೊರ ಟೆನು. ಒಂದು ದಾರಿ ಹಿಡಿದು ಮನೆಯ ಕಡೆಗೆ ಬರುತ್ತಿರಲು, ಯಾರೋ ಒಬ್ಬರ ಆರ್ತನಾದವು ಕರ್ಣಗೋಚರವಾಯಿತು, "ಕೊಲ್ಲಬೇಡಿರಿ-ಬಿಟ್ಟುಬಿಡಿರಿ." ಎಂದು ಯಾವದೋ ಒಂದು ವ್ಯಕ್ತಿಯು ಚೀರಿಕೊಂಡಿತು. ಧ್ವನಿಬಂದ ದಿಕ್ಕಿನ ಕಡೆಗೆ ಓಡಿ ಹೋಗಿ ನೋಡಲು, ಆ ಲೀ ಕೊಯಾಂಗನ ಆ ಸುಂದರ ಕನ್ಯೆಯು ಯಾವನೊಬ್ಬ ದಸ್ಯುಸದೃಶ ನಿಗ್ರೋವಿನ ಬಾಹುಪಾಶದಲ್ಲಿ ಸಿಲುಕಿದ್ದು, ಅವನ ಕೈಯೊಳಗಿಂದ ಪಾರಾಗಲಿಕ್ಕೆಂದು ಹಾಗೆ ಒದರುತ್ತಿದ್ದಳು. ನಾನು ಆ ನಿಗ್ರೋ ನನ್ನು ಚೆನ್ನಾಗಿ ತಿರಸ್ಕರಿಸಿ ನುಡಿಯಲು, ಅವನು ಅವಳನ್ನು ಬಿಟ್ಟುಬಿಟ್ಟು ನನ್ನನ್ನು ಆಕ್ರಮಿಸಲಿಕ್ಕೆಂದು ಮುಂದುವರಿದನು. ಅವನು ತನ್ನ ಬಗಲೊಳಗಿನ ಚೂರಿಯನ್ನು ಹೊರ ಹೊರಡಿಸುತ್ತಿರಲು, ನಾನು ಒಮ್ಮೆಲೆ ಆತನ ಕೆನ್ನೆಗೊಮ್ಮೆ ಚೆನ್ನಾಗಿ ಏಟು ಕೊಟ್ಟೆನು. ನನ್ನ ಆ ಬಲವಾದ ಹೊಡತದಿಂದ ಅವನಿಗೆ ಬವಳಿ ಬರಲು, ಅವನು ನೆಲಕ್ಕುರುಳಿದನು; ಪರಕ್ಷಣದಲ್ಲಿಯೇ ಅವನು ನಿಸ್ತರಿಸಿ ಕೊಂಡು ಮತ್ತೆ ಎದ್ದು ನಿಂತನು. ಅಷ್ಟರಲ್ಲಿ ನಾನು ನನ್ನ ಜೇಬಿನೊಳಗಿಂ ಪಿಸ್ತೂಲು ತೆಗೆಯುತ್ತಿರುವದನ್ನು ನೋಡಿ, ಅವನು ಮತ್ತೆ ನನ್ನ ಉಸಾಬರಿಗೆ ಬರುವದನ್ನು ರಹಿತ ಮಾಡಿದನು. ಬಳಿಕ ನಾನು ಆ ಯುವತಿಗೆ ಆ ನಿಗ್ರೋವು ನಿನ್ನ ಮೇಲೇರಿ ಬಂದ ಕಾರಣವೇನೆಂಬದನ್ನು ಕೇಳಿದೆನು "ತನ್ನ ತಂದೆಯು ತನಗೆ ಕೆಲ ಪೌಂಡುಗಳನ್ನು ಕೊಟ್ಟು ಪೇಟೆಯಿಂದ ಕೆಲ ಜೀನಸುಗಳನ್ನು ಕೊಂಡುಕೊಂಡು ಬರಹೇಳಿದ್ದನೆಂದೂ, ಈ ನಿಗ್ರೋವು ನನ್ನ ಬಳಿಯ ಆ ಪೌಂಡು ಗಳನ್ನು ಕಸಕೊಳ್ಳುವ ಸಲುವಾಗಿ ತನ್ನನ್ನು ಆಕ್ರಮಿಸಿದನೆಂದೂ" ಅವಳು ಹೇಳಿ ದಳು. ತದನಂತರ ಆ ಯುವತಿಯು ನನ್ನ ಆಕಸ್ಮಿಕ ಸಹಾಯದ ಬಗ್ಗೆ ನನ್ನಲ್ಲಿ ಕೃತಜ್ಞತೆಯನ್ನು ತೋರಿದಳಲ್ಲದೆ, ನನಗೆ ತನ್ನ ಹೆಸರನ್ನು ಕೂಡ ತಿಳಿಸಿದಳು. ಅವಳ ಹೆಸರು ಮಾತ್ರ ಒಮ್ಮೆಲೆ ಹೇಳಬರುವಂತಿಲ್ಲ. ಆ ಕಠಿಣ ಚೀನೀ ಶಬ್ದದ ಅರ್ಥವು ಮಲ್ಲಿಗೆಯ ಹೂವು' ಎಂದಿದೆ.

ಬ್ಲೇಕ:—ಸ್ಮಿತ್ಮಾ, ಇದಂತೂ ಯುವತಿಯರ ಪ್ರಣಯ ಕಥೆಯು. ಇದನ್ನೆಲ್ಲ ಇಲ್ಲಿ ಹೇಳ-ಕೇಳುವದರಿಂದ ಪ್ರಯೋಜನವೇನು?

ಸ್ಮಿತ್ಥ:—ಒಡೆಯರೇ, ಅಷ್ಟೊಂದು ನಿರಾಶೆಪಡಲಾಗದು. ನನ್ನ ಮಾತು ಇನ್ನೂ ಮುಗಿದಿಲ್ಲ ಆ ಮಲ್ಲಿಗೆಯ ಹೂವು ಚೀನೀಯರ ಮಗಳಾಗಿದ್ದರೂ ಆಕೆಗೆ ಇಂಗ್ಲಿಷ ಭಾಷೆಯು ಬಹು ಚೆನ್ನಾಗಿ ಬರುತ್ತಿದೆ. ನನ್ನನ್ನು ಅವಳು ಬಹು ಪ್ರೀತಿಸುತ್ತಿರುವಳಂತೆ. ಅದ ಂದ ನನನ್ನು ಅವಳು ತಮ್ಮ ಆ ಕಮಲಾಲಯಕ್ಕೆ ಆಗಾಗ್ಗೆ ಬರಹೇಳಿರುತ್ತಾಳೆ ಇಂದು ರಾತ್ರಿಯೇ ಮತ್ತೆ ಬರುತ್ತೇನೆಂದು ಆಕೆಗೆ ಹೇಳಿ, ಇಲ್ಲಿಗೆ ಈಗ ತಿರುಗಿ ಬಂದಿರುತ್ತೇನೆ ಅವಳೊಡನೆ ಮಾತಾಡಿ ಏನಾದರೂ ಗುಪ್ತಸಂಗತಿ ಹೊರಬೀಳುವದೇನೆಂಬದನ್ನು ನೋಡುವ ಇಚ್ಛೆಯಿದೆ. ಇದೇ ನನ್ನ ಮಾತಿನ ಸಾರವು.

ಬ್ಲೇಕ:-ನಿನಗೆ ಅಲ್ಲಿಗೆ ಹೋಗಬೇಕೆಂದೇ ಅನಿಸುತ್ತಿದ್ದರೆ ನಾಲ್ಕೂ ಕಡೆಗೆ ದೃಷ್ಟಿಯನ್ನಿರಿಸಿ ಒಳ್ಳೇ ಎಚ್ಚರಿಕೆಯಿಂದ ಹೋಗಿ ಬಾ. ಆ ಲಿ ಕೋಯಾಂಗನು ಆ ಚರ್ಮದ ಭಾರೀ ಚೀಲದಲ್ಲಿ ಏನನ್ನು ಬ್ಯಾಂಕಿಗೆ ತಕ್ಕೊಂಡು ಹೋದನೆಂಬದು ತಿಳಿದರೆ ಒಳ್ಳೇದಾಗುವದು ಅದು ಈ ಚಾಂಪ್ಯಾಫೀಲ್ಡನ ಸಿಂಹನ ಸುಲಿಗೆಯ ಸೊತ್ತಾಗಿರಲಿಕ್ಕಿಲ್ಲವಷ್ಟೇ? ಲೀ ಕೋಯಾಂಗನು ಚೀನೀಯ ವಿದ್ರೋಹಿಗಳ ಅನುಚರನಾಗಿರಬೇಕು.

ಸ್ಮಿತ್ಥ:—ನನಗದಾವದೂ ತಿಳಿಯದು; ಆದರೆ ಯಾವ ಮನುಷ್ಯನು ಲೀ ಕೊಯಾಂಗನಿಗೆ ಆ ಚರ್ಮದ ಭಾರೀ ಚೀಲವನ್ನು ಕೊಟ್ಟನೋ, ಅವನು ಆ ಪಳದಿಯ ಮರೆಗೆ ಹಾಗೆ ಅಡಗಿ ನಿಂತಿದ್ದರ ಕಾರಣವು ತಿಳಿಯಲಶಕ್ಯವಾಗಿದೆ. ಒಟ್ಟಿನಲ್ಲಿ ಈ ಸಂಗತಿಯು ರಹಸ್ಯಮಯವಾದುದೇನೋ ನಿಜವು.

ಬ್ಲೇಕ:—ಲಿ ಕೊಯಾಂಗನ ಮಗಳ ಕಡೆಯಿಂದ ಏನಾದರೂ ಅಲ್ಪಸ್ವಲ್ಪ ತಿಳಿಯುವಂತಿದ್ದರೆ ಆ ಬಗ್ಗೆ ಪ್ರಯತ್ನಿಸು. ಅದರಿಂದ ನನ್ನ ಅನುಮಾನವು ಸತ್ಯವಾಗಬಹುದಾಗಿದೆ. ಆದರೂ ನೀನು ಆಕೆಯ ಬಳಿಯಲ್ಲಿ ಯಾವ ಆಗ್ರಹವನ್ನೂ ಪಡಬೇಡ. ತಿಳಿಯತಕ್ಕದ್ದನ್ನು ಒಳ್ಳೇ ಕೌಶಲ್ಯದಿಂದಲೇ ತಿಳಿಯಬೇಕು. ಇನ್ನು ನೀನು ಬೇಗನೆ ಹೊರಡು. ಅವಶ್ಯಕಂಡರೆ ನಾನೂ ಬರುವೆನು. ಆದರೆ ನನ್ನ ನೂತನ ವೇಷವು ನಿನಗೆ ಕೂಡ ಗುರ್ತಿಸಲಶಕ್ಯವಾದೀತು.



## ೭ನೇ ತೆರೆ.

## ಮಲ್ಲಿಗೆಯ ಕರ್ಮಕಥೆ.



ಕಮಲಾಲಯವೆಂಬ ಹೋಟಲು ಚಾಯ್ನಾ ಫೀಲ್ಡಿನ ಪ್ರಸಿದ್ಧ ಕೂಟಿನ ಸ್ಥಳದಲ್ಲಿದ್ದು, ಅಲ್ಲಿ ಗ್ರಾಹಕರ ರಹದಾರಿಯು ವಿಪರೀತವಾಗಿತ್ತು. ಅಲ್ಲಿಗೆ ಉಪಾಹಾರ ಊಟಗಳಿಗೆ ಬರುತ್ತಿದ್ದವರೆಲ್ಲರೂ ಪ್ರಾಯಶಃ ಚೀನೀ ಜನರೇ; ಆದರೂ ಲಂಡನ್ನ ನಿವಾಸಿಗಳಾದ ಇಂಗ್ಲಿಷರು ಹಾಗು ಬೇರೆ ದೇಶದ ಜನರು ಚೀನಿಯ ಅಡಿಗೆಯನ್ನುಂಡು ರಸನಾಸ್ವಾದವನ್ನು ಬದಲು ಮಾಡಿಕೊಳ್ಳಲಿಕ್ಕೆಂದು ಆಗಾಗ್ಗೆ ಅಲ್ಲಿಯ ಊಟಕ್ಕೆ ಬರುತ್ತಿದ್ದರು. ಅಂಥವರ ಸಂಖ್ಯೆಯು ಹೆಚ್ಚಾಗಿರಲಿಲ್ಲ. ಆ ಹೋಟಲಿನ ಒಳಮಗ್ಗಲಿಗೇ ಆಫೀಸ ರೂಮು ಒತ್ತಟ್ಟಿಗೆ ಅಡಿಗೆಯ ಮನೆಯು. ಪರದೆಯ ಮರೆಯಲ್ಲೊಂದು ಮೇಲಟ್ಟದ ಪಾವಟಿಗೆಗಳ ದಾರಿಯಿದ್ದು, ಮೇಲಟ್ಟದ ಮೇಲೆ ಹಲವು ಕೋಣೆಗಳಿದ್ದವು; ಆದರೆ ಮೇಲಟ್ಟವು ಆ ಹೋಟಲಿನ ಅಧೀನಕ್ಕೊಳಪಟ್ಟದ್ದಾಗಿರಲಿಲ್ಲ.

ಸ್ಮಿತ್ಥನು ಆ ರಾತ್ರಿ ಮತ್ತೆ ಯಾವಾಗ ಆ ಕಮಲಾಲಯವನ್ನು ಪ್ರವೇಶಿಸಿದನೋ, ಆಗ ಒಂಬತ್ತು ಗಂಟೆಯಾಗಿರಬಹುದು. ಅದರಿಂದ ಭೋಜನ ಶಾಲೆಯಲ್ಲಿ ಭೋಕ್ತಾರರು ತುಂಬಿ ತುಳುಕಿದ್ದರು. ಅಲ್ಲಿಯ ಊಟದ ಟೇಬಲ್ಲುಗಳೆಲ್ಲವೂ ಅವರಿಂದ ಪ್ರಾಯಶಃ ಆಕ್ರಮಿಸಲ್ಪಟ್ಟಿದ್ದವು. ಅಲ್ಲಿ ಒಂದೂ ಸ್ಥಳವಿರಲಿಲ್ಲೆಂದು ಹೇಳುವಂತಿರದಿದ್ದರೂ, ಆ ಬಾಕಿ ಸ್ಥಳದಲ್ಲಿ ಯಾವನೂ ತಾನಾಗಿ ಹೋಗಿ ಕುಳಿತು ಊಟಮಾಡಲಿಕ್ಕೆ ರಾಜಿಯಿದ್ದಿಲ್ಲ. ಸ್ಮಿತ್ಥನು ಸ್ಥಳವನ್ನು ಹುಡುಕುತ್ತ ನಡೆದಿರಲು, ಆ ಮೇಲಂತಸ್ತಿನ ಪಾವಟಿಗೆಗೆ ಹೊಂದಿದ ಸ್ಥಳವೊಂದು ಖಾಲಿ ಇದ್ದದ್ದು ಕಂಡಿತು. ಬೇರೆ ಸ್ಥಳವೇ ದೊರೆಯದ್ದರಿಂದ ನಿರುಪಾಯದಿಂದ ಅವನು ಅಲ್ಲಿ ಕುಳಿತುಕೊಂಡನು. ಆಗ ಲಿ ಕೊಯಾಂಗನು ತನ್ನ ಡೆಸ್ಕಿನ ಬಳಿಯಲ್ಲಿ ಕುಳಿತು ಏನನ್ನೋ ಬರೆಯುವದರಲ್ಲಿ ತೊಡಗಿದ್ದನು; ಆದರೆ ತನ್ನ ಮಗಳಾದ 'ಮಲ್ಲಿಗೆಯ ಹೂವು' ಅವನಿಗೆಲ್ಲಿಯೂ ಕಾಣಿಸಲಿಲ್ಲವು.

ಸ್ಮಿತ್ಥನು ಟೇಬಲ್ಲಿನ ಬಳಿಗೆ ಕುಳಿತವನೇ ಎಲ್ಲಕ್ಕೂ ಮೊದಲು ಒಂದು ಸಿಗರೇಟನ್ನು ಹೊತ್ತಿಸಿ ಸೇದತೊಡಗಿದನು. ಬಳಿಕ ಊಟವನ್ನು ತರಲಿಕ್ಕೆ ಅಡಿಗೆಯವನಿಗೆ ಅಪ್ಪಣೆ ಮಾಡಿದನು. ಚೀನಿಗರ ಆ ಊಟವು ಛದ್ಮ ವೇಷದ ಆ ಸ್ಮಿತ್ಥನಿಗೆ ಎಷ್ಟರ ಮಟ್ಟಿಗೆ ರುಚಿಸುತ್ತಿತ್ತೆಂಬದನ್ನು ಆತನ ಆಗಿನ ಮುಖಲಕ್ಷಣದಿಂದ ತಿಳಿಯುವಂತಿರಲಿಲ್ಲ. ಅವನು ಊಟಕ್ಕೇನೋ ಪ್ರಾರಂಭಿಸಿದನು;

ಆದರೆ ಆತನ ಲಕ್ಷ್ಯವು ತನ್ನ ಊಟದ ಕಡೆಗಿರದೆ, ಅಲ್ಲಿ ಊಟ ಮಾಡುತ್ತಿದ್ದ ಬೇರೆ ಜನರ ಸಂಭಾಷಣದ ಕಡೆಗಿದ್ದಿತು. ಅವನು ನಡುನಡುವೆ ವಕ್ರದೃಷ್ಟಿಯಿಂದ ಅವರ ಮುಖಗಳನ್ನು ನೋಡುತ್ತಿದ್ದನು; ಆದರೆ ಸ್ಮಿತ್ಥನ ಕಡೆಗೆ ಮಾತ್ರ ಅದಾರ ಲಕ್ಷ್ಯವೂ ಇರಲಿಲ್ಲ. ಆ ಸಂಭಾಷಣದಿಂದ ಆವನಿಗಿಷ್ಟವಾದ ಯಾವ ಹೊಸ ಸುದ್ದಿಯೂ ತಿಳಿಯಲಿಲ್ಲ. ಅದರಿಂದ ಅವನು ಆಗ ಬಹು ಹತಾಶನಾದನು.

ಕೆಲ ಕ್ಷಣಗಳ ನಂತರ ಹೊಲಸು ಉಡುಪುಗಳ ಒಬ್ಬ ಕರೀ ಟೊಣಪನು ಸ್ಮಿತ್ಥನಿಂದ ತುಸ ದೂರದಲ್ಲಿ ಬಂದು ಕುಳಿತು ಊಟಮಾಡಲಾರಂಭಿಸಿದನು. ಅವನನ್ನು ನೋಡಿದ ಕೂಡಲೆ ಆತನು ಆ ಪುಂಡತಂಡದವನೇ ಎಂದು ಅನುಮಾನವಾಗುವಂತಿತ್ತು. ಅವನು ತನ್ನ ಟೊಪ್ಪಿಗೆಯನ್ನು ಹುಬ್ಬಿನ ತನಕ ಜಗ್ಗಿಕೊಂಡಿದ್ದರಿಂದ, ಅವನ ಮೋರೆಯು ಪ್ರಾಯಶಃ ಮುಚ್ಚಿಯೇ ಹೋಗಿತ್ತು. ಸ್ಮಿತ್ಥನು ಒಂದೆರಡು ಸಾರೆ ಆತನ ಕಡೆಗೆ ನೋಡಿದನು. ಅಷ್ಟರಲ್ಲಿ ಮಲ್ಲಿಗೆಯ ಹೂವು ಆ ಭೋಜನಶಾಲೆಯನ್ನು ಪ್ರವೇಶಿಸಿದಳು.

ಆಕೆಯು ಬೇರೆ ಬೇರೆ ಮೇಜುಗಳ ಮುಂದೆ ಹೋಗಿ, ತನ್ನ ಒಂದೆರಡು ಮಿಷ್ಟ ಭಾಷಣದಿಂದ ಅವರನ್ನು ಸಂತುಷ್ಟಗೊಳಿಸಿದಳು. ಬಳಿಕಲವಳು ಸ್ಮಿತ್ಥನೆಡೆಗೆ ಬಂದು ಕುರ್ಚಿಯ ಮೇಲೆ ಕುಳಿತು, ಅವನೊಡನೆ ಹರಟೆಗೆ ಪ್ರಾರಂಭ ಮಾಡಿದಳು.

ಆ ಮಲ್ಲಿಗೆಯ ಹೂವು ಮುಗುಳು ನಗೆಯನ್ನು ನಕ್ಕು: "ನಾನು ಜಪಾನೀಯರನ್ನು ಹೆಚ್ಚಾಗಿ ಪ್ರೀತಿಸುತ್ತೇನೆ. ಅದಕ್ಕೆಂಗೇ ನಾನು ನಿಮ್ಮ ಕಡೆಗೆ ಒಲವಿರುತ್ತೇನೆ; ಅಲ್ಲದೆ ನೀವು ಇಂದು ನನ್ನ ಮೇಲೆ ಯಾವ ಉಪಕಾರವನ್ನು ಮಾಡಿರುವಿರೋ, ಆ ಬಗ್ಗೆ ನಾನು ನಿಮ್ಮನ್ನು ಪ್ರೀತಿಸದಿದ್ದರೆ ನಡೆಯುವಂತಿಲ್ಲ." ಎಂದು ನುಡಿದಳು.

ಸ್ಮಿತ್ಥ:—ನಿನ್ನಂತಹ ಪರಮ ಸುಂದರಿಯನ್ನು ಅದಾರು ಪ್ರೀತಿಸಲಿಕ್ಕಿಲ್ಲ?

ಮಲ್ಲಿಗೆಯ ಹೂವು. ಇಲ್ಲಿಯವರೆಲ್ಲರೂ ಹೀಗೆಯೇ ನುಡಿದು ನನ್ನನ್ನು ಪ್ರಸನ್ನೀಕರಿಸಲೆತ್ನಿಸುತ್ತಾರೆ. ನೀವಾದರೂ ಅವರ ಮಾತನ್ನೇ ಪ್ರತಿಧ್ವನಿಗೊಡುತ್ತಿರುವಿರಿ. ನಿಮ್ಮೊಡನೆ ತುಸ ಗುಪ್ತ ಸಂಭಾಷಣಮಾಡಬೇಕೆಂಬ ಲವಲವಿಕೆಯಿದೆ. ಆದರೆ ನನಗೆ ಜಪಾನೀ ಭಾಷೆಯು ಚೆನ್ನಾಗಿ ಅವಗತವಾಗಿಲ್ಲ. ನಿಮಗೆ ಇಂಗ್ಲಿಷ ಭಾಷೆಯು ತಿಳಿಯುವದೊ?

ಸ್ಮಿತ್ಥ:—ಸರ್ವಸಾಧಾರಣವಾಗಿ ಬಲ್ಲೆನು; ನಾನು ಯಾವಾಗ ಟೋಕಿಯೋದಲ್ಲಿದ್ದೆನೋ, ಆಗಲೆ ಇಂಗ್ಲಿಷವನ್ನು ಅಭ್ಯಾಸಿಸಿರುತ್ತೇನೆ.

ಮಲ್ಲಿಗೆ:—ಹಾಗಾದರೆ ನಾವು ಇಂಗ್ಲಿಷಿನಲ್ಲೇ ಮಾತಾಡೋಣ. ಮಹನೀಯರೇ, ತಮ್ಮ ಹೆಸರೇನು?

ಸ್ಮಿತ್ಥ:—ನನ್ನನ್ನು 'ಸುಕು ಹಾರಾಮುಕ' ಎಂದು ಕರೆಯುತ್ತಾರೆ.

ಮಲ್ಲಿಗೆ: ದಂಡಾಳುಗಳಂತೆ ನಿಮ್ಮ ವೇಷವಿದೆಯಲ್ಲ? ನೀವು ಯಾವುದೊಂದು ಹಡುಗುಪಡೆಯ ದಂಡಾಳಾಗಿರುವಿರೇನು?

ಸ್ಮಿತ್ಥ:—ಇಲ್ಲ. ಟೋಕಿಯಾದಲ್ಲಿ ನನಗೊಬ್ಬ ಚಿಕ್ಕಪ್ಪನಿರುವನು. ಅವನಲ್ಲಿ ಹೆಚ್ಚಾಗಿ ಹಣವಿದೆ. ನನಗೆ ತಂದೆ-ತಾಯಿಗಳಿರುವದಿಲ್ಲ. ಇಂಗ್ಲಿಷ ಕಲಿಯಲಕ್ಕೆಂದು ಅವನು ನನ್ನನ್ನು ಈ ಲಂಡನ್ನಿಗೆ ಕಳಿಸಿರುತ್ತಾನೆ. ನಾನು ಮರಳಿ ದೇಶಕ್ಕೆ ಹೋದ ಬಳಿಕ ಚಿಕ್ಕಪ್ಪನ ಸಹಾಯದಿಂದ ಇಂಗ್ಲಿಷ ವ್ಯಾಪಾರಿಗಳ ಕೂಡ ವ್ಯವಸಾಯ ಮಾಡಬೇಕಂಎರುತ್ತೇನೆ.

ಮಲ್ಲಿಗೆ:—ಹಾಗಾದರೆ ನೀವು ಬಹು ಧನಾಢ್ಯರಂದಂತಾಯಿತು.

ಸ್ಮಿತ್ಥ:—ಅದಕ್ಕೆ ಸಂಶಯವೇನು? ಪ್ರಿಯ ಮಲ್ಲಿಗೆಯ ಹೂವೇ! ನಾನು ನಿನಗೆ ಕೆಲ ಕಾಣಿಕೆಯನ್ನರ್ಪಿಸಬೇಕೆಂದಿದ್ದೇನೆ.

ಮಲ್ಲಿಗೆ:—ಬೇಡ-ಬೇಡ. ನನಗಾವ ಕಾಣಿಕೆಯ ಅವಶ್ಯಕತೆಯೂ ಇಲ್ಲ. ನೀವು ಇಂದು ನನ್ನ ಮೇಲೆ ಯಾವ ಉಪಕಾರವನ್ನ್ಯದಿರುವಿರೋ, ಅದರಿಂದಲೇ ನಾನು ನಿಮಗೆ ಬಹು ಕೃತಜ್ಞಳಾಗಿದ್ದೇನೆ; ಮತ್ತು ಆಗಿನಿಂದಲೇ ನಾನು ನಿಮ್ಮನ್ನು ಮನಃಪೂರ್ವಕವಾಗಿ ಪ್ರೀತಿಸುತ್ತೇನೆ. ಅದಕ್ಕಾಗಿಯೇ ನಾನು ನಿಮಗೊಂದು ಒಳ್ಳೇ ಸುದ್ದಿಯನ್ನು ತಿಳಿಸುವೆನು. ನೀವು ನಿಮ್ಮಲ್ಲಿಯ ದುಡ್ಡನ್ನು ಜೂಜು-ರಂಗುಗಳಿಗೆ ಹಚ್ಚಿ ಮೋಜು ಮಾಡಬೇಕಂದಿದ್ದರ, ನೀವು ಈ ವಿಶಾಲವಾದ ಲಂಡನ್ನ ಪಟ್ಟಣದ ಬೇರ ಭಾಗಗಳಲ್ಲಿ ಹೋಗಿ ಹಾಗೆ ಮಾಡಬಹುದು. ಇಲ್ಲಿ ಅಂಥ ಯಾವ ಉದ್ಯೋಗಕ್ಕೂ ತೊಡಗಬೇಡಿರಿ. ಎಚ್ಚರ! ಎಚ್ಚರ!! ಬಹು ಎಚ್ಚರ!!!

ಸ್ಮಿತ್ಥ:—ಅದಕ್ಕೆ ಕಾರಣವೇನೆಂಬದನ್ನು ತಿಳಿಸಲಾರೆಯಾ?

ಮಲ್ಲಿಗೆ:—ನಾನು ನಿಮ್ಮನ್ನು ಹೆಚ್ಚಾಗಿ ಪ್ರೀತಿಸುತ್ತಿರುವದರಿಂದ ನಿಮಗೆ ಅನಿಷ್ಟವಾಗದಂತೆ ನೋಡಿಕೊಳ್ಳುವದು ನನ್ನ ಕರ್ತವ್ಯವಾಗಿದೆ.

ಸ್ಮಿತ್ಥ:—ನಾನು ಈ ಭಾಗದ ಜೂಜು-ರಂಗುಗಳ ಅಡ್ಡೆಗಳಲ್ಲಿ ಹೋದರೆ ನನಗೆ ಅನಿಷ್ಟಬಗೆಯುವವರಾರು?

ಮಲ್ಲಿಗೆ:—ಇರುವರು. ಹಾಗೆ ನಿಮ್ಮ ಅನಿಷ್ಟಬಗೆಯಲಿಕ್ಕೆ ಅಂಥ ಗುಪ್ತಕಾರಣವೂ ಇರುವದು, ಸುಕು! ನನ್ನ ಮಾತನ್ನು ನೀವು ಯಾರ ಮುಂದೂ ಹೇಳಲಿಕ್ಕಿಲ್ಲೆಂದು ವಚನಬದ್ಧರಾದರೆ ನಾನು ನಿಮಗಾ ಕಾರಣವನ್ನು

ತಿಳಿಸುತ್ತೇನೆ; ಆದರೆ ನನ್ನ ತಂದೆಗೆ ಅದು ತಿಳಿದರೆ ಅವನು ನನ್ನ ಮೇಲೆ ಸಿಟ್ಟಾಗುವನು, ಇಷ್ಟೇ ಅಲ್ಲ, ಆ ಬಗ್ಗೆ ಅವನು ನನ್ನ ಕೊಲೆಗೆಯ್ಯಲಿಕ್ಕೆ ಕೂಡ ಹಿಂದು ಮುಂದು ನೋಡಲಿಕ್ಕಿಲ್ಲ. ಸುಕು, ನೀವು ನಮ್ಮ ಭಾಗದ ಸಿಂಹನ ಹೆಸರನ್ನು ಕೇಳಬಲ್ಲಿರಾ?

ಸ್ಮಿತ್ಥ:—ಅಹುದು, ಆತನ ಹೆಸರನ್ನೇನೋ ಕೇಳಿರುತ್ತೇನೆ; ಆದರೆ ಆತನ ಸಂಬಂಧದ ಯಾವ ಸಂಗತಿಯನ್ನೂ ಕೇಳಿರುವದಿಲ್ಲ.

ಮಲ್ಲಿಗೆ:—ನನಗೂ ಅವನ ಬಗ್ಗೆ ವಿಶೇಷವೇನೂ ತಿಳಿಯದು. ಅವನು ಬಹು ಭಯಾನಕ ಪುರುಷನೆಂದು ಕೇಳಿರುತ್ತೇನೆ. ಆತನು ಅಸಾಧಾರಣ ಚತುರನಂತೆ; ಆತನಿಗೆ ಹಲವು ಜನ ಅನುಚರರುಇರುವರಂತೆ, ಆದರೆ ಅವರಾರ ಬಾಯಿಂದಲೂ ಆತನ ಸಂಬಂಧದ ಒಂದು ಅಕ್ಷರವೂ ಹೊರಹೊರಡದಂತೆ. ಅವರು ಆತನ ಪತ್ತೆ ಕೂಡ ಯಾರಿಗೂ ಹಚ್ಚಗೊಡರಂತೆ! ಅಂಥ ಆ ಸಿಂಹವು ಇಲ್ಲಿಗೆ ಸಮೀಪದಲ್ಲಿಯೇ ವಾಸಿಸುತ್ತದೆ. ನನ್ನ ತಂದೆಯನ್ನು ಬಿಟ್ಟರೆ ಮತ್ತಾರಿಗೂ ಆತನ ದರ್ಶನ ಕೂಡ ಆಗುವದಿಲ್ಲವಂತೆ. ಅವನು ಬಹು ದೊಡ್ಡ ಮನುಷ್ಯನಿರುವನು. ಈ ಭಾಗದ ಎಲ್ಲ ಹೋಟಲು, ಉಪಾಹಾರಗೃಹ, ಅಂಗಡಿ, ಜೂಜಿನ ಅಡ್ಡೆ, ಇಸ್ಪೇಟಿನ ರಂಗು ಇವುಗಳಿಗೆಲ್ಲ ಆತನೇ ಮಾಲಕನು. ಎಲ್ಲ ಅಡ್ಡೆಗಳಲ್ಲಿಯ ಆದಾಯವೂ ಅವನಿಗೇ ಸಲ್ಲುವದು. ಹಾಂಗಕಾಂಗ, ಶಾಂಘಾಯ ಮುಂತಾದ ಕಡೆಗಳಲ್ಲಿಯೂ ಆತನ ಈ ವ್ಯವಸಾಯವಿರುತ್ತದೆ. ಅವನು ಯಾವ ಯಾವ ಬಗೆಯಿಂದ ಹಣ ದೊರಕಿಸುವನೆಂಬದನ್ನು ನಿಮಗೆ ನಾನು ಅದೆಂತು ಹೇಳಲಿ? ಅವನ್ನೆಲ್ಲ ಬಾಯಿಂದ ಹೇಳುವದೂ ಸರಿಯಲ್ಲ. ನೀವು ಹಣದೊಂದಿಗೆ ಈ ಭಾಗಕ್ಕೆ ಬಂದರೆ, ಅದರೊಡನೆ ಮರಳಿ ಹೋದೀರೆಂಬದರ ಆಶೆಯನ್ನೇ ಹಿಡಿಯಲಾಗದು. ಒಂದೊಂದು ವೇಳೆ ಹಣಕ್ಕಾಗಿ ಹರಣವನ್ನೂ ಕಳಕೊಳ್ಳಬೇಕಾದೀತು. ಎಚ್ಚರಿಕೆ!

ಸ್ಮಿತ್ಥ:— ಮಲ್ಲಿಗೆ ಹೂವೇ, ನೀನು ಇದೆಲ್ಲ ಗುಪ್ತ ಸಂಗತಿಯನ್ನು ತಿಳಿಸಿ ನನ್ನ ಮೇಲೆ ದೊಡ್ಡ ಉಪಕಾರ ಮಾಡಿರುವೆ. ಇಂದಿನಿಂದ ನಾನು ಬಹು ಎಚ್ಚರಪಡುವನು.

ಮುಂತಮಾತಾಡುತ್ತ ಸ್ಮಿತ್ಥನು ಆ ಮಲ್ಲಿಗೆಯ ಬಳಿಯಿಂದ ಆ ಚಾಯಾಫೀಲ್ಡಿನ ಸಿಂಹನ ಗುಪ್ತ ಗೃಹವನ್ನೂ ತಿಳಿದುಕೊಂಡನು. ಆಗ ಮಲ್ಲಿಗೆಯು ತೀಕ್ಷ್ಣ ದೃಷ್ಟಿಯಿಂದ ನಾಲ್ಕೂ ಕಡೆಗೆ ನಿರೀಕ್ಷಿಸಲು, ಹತ್ತರ ಯಾರೂ ಇರಲ್ಲ. ಆಗಲವಳು ಸ್ಮಿತ್ಥನ ಕಿವಿಗೆ ತನ್ನ ತುಟಿಯನ್ನಾನಿಸಿ:—"ಪ್ರಿಯರೇ, ಇನ್ನೊಂದು ಗುಪ್ತ ಸಂಗತಿಯನ್ನು ನಿಮಗೆ ತಿಳಿಸದಿರಲಿಕ್ಕೆ ಮನಸ್ಸಾಗಲೊಲ್ಲದು,

ಈ ಚಾಯನ್ನಾಫೀಲ್ಡಿನ ಸಿಂಹನು ಒಬ್ಬ ಇಂಗ್ಲಿಷ ಯುವತಿಯನ್ನು ಹಿಡಿತಂದು ಸೆರೆಯಲ್ಲಿಟ್ಟಿರುತ್ತಾನೆ,'' ಎಂದು ಹೇಳಿದಳು.

ಸ್ಮಿಥನು ತನ್ನಲ್ಲುಂಟಾದ ವಿಸ್ಮಯವನ್ನು ಹೊರಗೆಡವದೆ:—ಇಂಗ್ಲಿಷ ಯುವತಿಯೇ! ನಿನಗೆ ಆ ಸಂಗತಿಯು ತಿಳಿದ ಬಗೆ ಹೇಗೆ?

ಮಲ್ಲಿಗೆ:—ಒಂದು ದಿನ ನನ್ನ ತಂದೆಯು ಬೇರೊಬ್ಬನಿಗೆ ಈ ಸಂಗತಿಯನ್ನು ಹೇಳುತ್ತಿದ್ದನು; ನಾನು ಮರೆಗೆ ನಿಂತು ಅದನ್ನು ಕೇಳಿರುವೆನು. ನನ್ನ ಕೋಣೆಯಲ್ಲಿ ಕುಳಿತರೆ, ಆ ಯುವತಿಯ ರೋದನವು ಎತ್ತ ಕಡೆಯಿಂದಲೋ ಆಗಾಗ್ಗೆ ಅಸ್ಪಷ್ಟವಾಗಿ ಕೇಳಿಸುತ್ತಿರುತ್ತದೆ.

ಸ್ಮಿಥ:—ನೀನು ಅವಳನ್ನು ಕಂಡಿರುವೆಯೇನು? ಸಿಂಹವು ಅವಳನ್ನೆಲ್ಲಿ ಅಡಗಿಸಿಟ್ಟಿದೆಯೆಂಬದನ್ನು ಬಲ್ಲೆಯಾ?

ಮಲ್ಲಿಗೆ:—ಇಲ್ಲ. ಕಂಡಿಲ್ಲ; ಆದರೂ ಅವಳನ್ನೆಲ್ಲಿ ಒಚ್ಚಿಟ್ಟಿರುವನೆಂಬದನ್ನು ಹೇಳಬಲ್ಲೆನು. ನನ್ನ ಕೋಣೆಯ ಕಿಟಕಿಯನ್ನು ತೆರೆದರ, ಆಚೇ ಬದಿಗೊಂದು ಮಾಳಿಗೆ ಕಾಣಿಸುವದು. ಅದಕ್ಕೆ ಮಗ್ಗಲಿನ ಮನೆಯೇ ಆ ಸಿಂಹನ ಗವಿಯು-ವಾಸಸ್ಥಳವು. ಆ ಮನೆಯ ಮೇಲಂತಸ್ತಿನ ಕೋಣೆಯೊಳಗಿಂದಲೇ ನಾನು ಆ ಯುವತಿಯ ರೋದನವನ್ನು ಕೇಳಿದ್ದು.

ಸ್ಮಿಥ:—ಆ ಬಡ ಇಂಗ್ಲಿಷ ಯುವತಿಯ ಮೇಲುಂಟಾದ ಪ್ರಸಂಗದಿಂದ ನಿನಗ ದುಃಖವಾಗುವದಿಲ್ಲವೇ?

ಮಲ್ಲಿಗೆ:—ಆಗದೇನು ಮಾಡೀತು? ಖಂಡಿತವಾಗಿಯೂ ದುಃಖವಾಗುತ್ತದೆ; ಆದರ ಹಾಗೆ ದುಃಖಿಸುವದರಿಂದ ಏನು ಪ್ರಯೋಜನ? ನಾನಂತೂ ಅವಳಿಗೆ ಯಾವ ಬಗೆಯ ಉಪಕಾರವನ್ನು ಮಾಡಲಿಕ್ಕೂ ಶಕ್ಯವಿಲ್ಲ. ನಾನು ನಿಮ್ಮೆದುರಿಗೆ ಈ ಸಂಗತಿಯನ್ನು ಹೇಳುತ್ತಿಲ್ಲಿಲ್ಲ, ಆದರ ನೀವು ಜಪಾನೀಯರು. ಅದರಿಂದ ನೀವು ಇದನ್ನು ಯಾರ ಮುಂದೂ ಹೇಳಿ, ನನ್ನನ್ನು ಸಂಕಟಕ್ಕೀಡು ಮಾಡಲಾರಿರೆಂದು ಭಾವಿಸಿಯೇ ನಿಮಗಿದನ್ನು ಹೇಳಿರುವನು. ಆ ಯುವತಿಯನ್ನು ಬಂಧಮುಕ್ತಗೊಳಿಸುವದು ಯಾರಿಂದಲೂ ಸಾಧ್ಯವಿಲ್ಲ ಅವಳು ಆ ಸಿಂಹನ ಬಾಯಿಯಲ್ಲಿ ಸಿಕ್ಕಿರುತ್ತಾಳೆ. ಪೋಲೀಸರಿಂದ ಅವಳಿಗಾವ ಸಹಾಯವೂ ಆಗುವಂತಿಲ್ಲ.

ಆ ಮಲ್ಲಿಗೆಯ ಹೂವು ಇನ್ನೂ ಏನೇನೋ ಹೇಳತೊಡಗಿದ್ದಳು; ಆದರೆ ಅವಳು ಆ ಜಪಾನೀ ಯುವಕನ ಬಳಿಯಲ್ಲಿ ಬಳ್ಳೇ ಭರದಿಂದ ಮಾತನಾಡುತ್ತ ಕುಳಿತದ್ದನ್ನು ತನ್ನ ಡೆಸ್ಕಿನ ಬಳಿಯಲ್ಲೇ ಕುಳಿತು ಲೆಕ್ಕ-ಪತ್ರಗಳಲ್ಲಿ ತೊಡಗಿದ್ದ ಅವಳ ತಂದೆಯು ಕಂಡು, ಒಮ್ಮೆಲೆ ಅವಳನ್ನು ಕೂಗಿದನು. ಅದರಿಂದ

ಅವಳು ತನ್ನ ಸಂಭಾಷಣವನ್ನು ಅಲ್ಲಿಗೇ ನಿಲ್ಲಿಸಿ, ತಂದೆಯ ಬಳಿಗೆ ಹೊರಟು ಹೋದಳು. ಮಲ್ಲಿಗೆಯು ಹೊರಟು ಹೋದ ಮೇಲೆ ಇನ್ನು ತಾನು ಏನು ಮಾಡಬೇಕೆಂಬದನ್ನು ಸ್ಮಿತ್ಥನು ತನ್ನಲ್ಲಿಯೇ ಯೋಚಿಸತೊಡಗಿದನು. ಇಷ್ಟರಲ್ಲಿ ಆವನಿಗೆ ತಾನು ಮನೆಯಿಂದ ಹೊರಡುವಾಗ ಬ್ಲೇಕನು ಬೇರೊಂದು ಗುಪ್ತ ವೇಷದಿಂದ ಇಲ್ಲಿಗೆ ಬರುತ್ತೇನೆಂದು ಹೇಳಿದ ಸಂಗತಿಯು ನೆನಪಾಯಿತು. ಅದ-ರಿಂದ ಅವನು ಬಂದಿರುವನೋ ಇಲ್ಲವೋ ಎಂಬದನ್ನು ನೋಡುವದಕ್ಕಾಗಿ ಸ್ಮಿತ್ಥನು ನಾಲ್ಕೂ ಕಡೆಗೆ ಸೂಕ್ಷ್ಮವಾಗಿ ನಿರೀಕ್ಷಿಸಿದನು; ಆದರೆ ಅಲ್ಲಿಯುವ ರಾರೂ ತನ್ನ ಒಡೆಯನಾದ ಬ್ಲೇಕನೆಂದು ಅವನಿಗನಿಸಲಿಲ್ಲ. ಕೆಲ ಕ್ಷಣಗಳ ಆಲೋಚನೆಯ ನಂತರ ಅವನು ಒಂದು ಬಹು ವಿಪಜ್ಜನಕವಾದ ಕಠಿಣ ಕೆಲಸಕ್ಕೆ ಸಂಕಲ್ಪ ಮಾಡಿದನು.

ಚಾಯ್ನಾ ಫೀಲ್ಡಿನ ಸಿಂಹನು ಮೇರಿ ವೆಭಾನಳನ್ನು ಎಲ್ಲಿ ಸೆರೆಯಿರಿಸಿರುವನೆಂಬದನ್ನು ಮಲ್ಲಿಗೆಯ ಬಳಿಯಿಂದ ಆತನು ತಿಳಿದೇ ಇದ್ದನು. ತನ್ನೊಬ್ಬನಿಂದಲೇ ಅವಳ ಬಿಡುಗಡೆ ಮಾಡಲಿಕ್ಕಾಗದಿದ್ದರೂ ಆಕೆಯನ್ನೊಮ್ಮೆ ಪ್ರತ್ಯಕ್ಷ ನೋಡಿ ಬರುವದು ಅಸಂಭವವಾಗಲಿಕ್ಕಿಲ್ಲೆಂದು ಅವನು ಭಾವಿಸಿಕೊಂಡನು. ತಾನು ಆ ಮನೆಯ ಅಟ್ಟವನ್ನು ಹತ್ತಿದರೆ ತನ್ನ ಕೆಲಸವು ಸಹಜವಾಗಿ ಸಾಧಿಸುವದೆಂದು ಆತನ ನಂಬಿಗೆಯಾಗಿತ್ತು.

ಸ್ಮಿತ್ಥನು ಮೆಲ್ಲ ಮೆಲ್ಲನೆ ತನ್ನ ಆಸನದಿಂದೆದ್ದು ಆ ಹೋಟಲ್ಲಿನ ಹೊರಗೆ ಹೋದನು; ಮತ್ತು ಅಡ್ಡಾಡುತ್ತ ಅಡ್ಡಾಡುತ್ತ ಈಸ್ಟ ಇಂಡಿಯಾ ಡಕ್ಕರೋಡಿನೊಳಗಿನ ಒಂದು ಅಂಗಡಿಯೊಳಗೆ ಹೋಗಿ ಕುಳಿತನು. ಆ ಅಂಗಡಿಯಲ್ಲಿ ನಾವಿಕ ಜನರಿಗೆ ಬೇಕಾಗುವ ಸಕಲ ಸಾಮಾನುಗಳೂ ದೊರೆಯುತ್ತಿದ್ದವು. ಅವನು ಆ ಅಂಗಡಿಯೊಳಗೆ ಕೆಲವು ಮೊಳ ಒಳ್ಳೇ ಭದ್ರವಾದ ನೂಲಿನ ಹಗ್ಗವನ್ನು ಕೊಂಡು ಕೊಂಡನು. ಅವನು ಆ ಎಲ್ಲಾ ಹಗ್ಗವನ್ನು ಟೊಂಕಕ್ಕೂ ಹೊಟ್ಟೆಗೂ ಸುತ್ತಿಕೊಂಡು, ಅದರ ಮೇಲೆ ಕೋಟನ್ನು ಹಾಕಿ, ಅದು ಮುಂದಗೆ ಕಾಣದಂತೆ ಮಾಡಿದನು. ಆ ಬಳಿಕ ಅವನು ಆ ಕಮಲಾಲಯವೆಂಬ ಹೋಟಲ್ಲಿಗೆ ಮತ್ತೆ ಬಂದನು.

ಸ್ಮಿತ್ಥನು ಭೋಜನಶಾಲೆಯಲ್ಲಿ ಪ್ರವೇಶಿಸಿ ನೋಡುತ್ತಾನೆ, ಅಲ್ಲಿ ಮತ್ತೆ ಎಷ್ಟೋ ಹೊಸ-ಹೊಸ ಜನರು ಕುಳಿತು ಊಟ ಮಾಡುತ್ತಿದ್ದರು. ಪುಂಡರ ತಂಡದವನೆಂದು ಸ್ಮಿತ್ಥನು ಯಾವನನ್ನು ಭಾವಿಸಿದ್ದನೋ, ಆ ಹೊಲಸು ಉಡುಪಿನ ಮನುಷ್ಯನು ಇನ್ನೂ ತನ್ನ ಊಟದ ಮೇಜಿನ ಬಳಿಯಲ್ಲೇ ಕುಳಿತು ಧೂಮ್ರಪಾನ ಮಾಡುತ್ತಿದ್ದನು. ಸ್ಮಿತ್ಥನನ್ನು ಕಂಡ ಕೂಡಲೆ ಅವನು ಮತ್ತೆ ಮತ್ತೆ

ಇವನ ಕಡೆಗೆ ಟಕಮಕವೆಂದು ನೋಡಲಾರಂಭಿಸಿದನು. ಸ್ಮಿತ್ಥನು ಮೊದಲು ಯಾವ ಸಂದಿಯೊಳಗಿನ ಮೇಜಿನ ಮೇಲೆ ಕುಳಿತು ಊಟ ಮಾಡಿದ್ದನೋ, ಈಗ ಅಲ್ಲಿ ಬೇರೆ ಯಾರೂ ಇರದ್ದರಿಂದ ಅದು ಖಾಲಿಯೇ ಇದ್ದಿತು. ಸ್ಮಿತ್ಥನು ಮತ್ತೆ ಅಲ್ಲಿಯೇ ಹೋಗಿ ಕುಳಿತು, ತನ್ನ ಅಭೀಷ್ಟ ಸಾಧನಕ್ಕೆ ಸುಯೋಗವನ್ನು ನಿರೀಕ್ಷಿಸ ತೊಡಗಿದನು.

ಮತ್ತೆ ಅರ್ಧ ತಾಸು ಕಳೆದು ಹೋಯಿತು. ಮಲ್ಲಿಗೆಯು ಸ್ಮಿತ್ಥನ ಬಳಿಗೆ ಬರಲೇ ಇಲ್ಲ. ತನಗೆ ಸ್ಮಿತ್ಥನ ಗುರ್ತೇ ಇಲ್ಲೆಂಬಂತೆ ಅವಳು ನಟಿಸ ಹತ್ತಿದಳು. ಅವಳು ಊಟ ಮಾಡುವವರಿಗೆ ಬೇಕಾದುದನ್ನು ಕೇಳಿ ಕೇಳಿ ಹಾಕಿಸುತ್ತ, ಅವರ ಯೋಗಕ್ಷೇಮ ನೋಡಿಕೊಳ್ಳುವ ಕೆಲಸದಲ್ಲಿ ನಿರತಳಾಗಿ ಬಿಟ್ಟಳು. ಇಷ್ಟರಲ್ಲಿ ಯಾವನೊಬ್ಬ ಜಪಾನಿಗೂ ಒಬ್ಬ ಸುದಾನ ದೇಶದವನಿಗೂ ಮಿರುಬಿನ ಮಾತಿಗಾರಂಭವಾಯಿತು. ಆ ವಾದಿಸ್ವಾಟದ ಕಾರಣವು ತೀರ ಕ್ಷುಲ್ಲಕವಾಗಿತ್ತು. ಜಪಾನಿಯ ಕೈಯು ತನ್ನ ಮೇಜಿನ ಮೇಲಿನ ನೀರು ತುಂಬಿದ ಗ್ಲಾಸಿಗೆ ಬಡಿಯಲು, ಅದರೊಳಗಿನ ತುಸ ನೀರು ಚೆಲ್ಲಿ, ಅದು ಪಕ್ಕದಲ್ಲಿ ಕುಳಿತಿದ್ದ ಸುದಾನಿಯು ಉಡುಪಿನ ಮೇಲೆ ಬಿದ್ದಿತು; ಆದರಿಂದ ಆ ಸುದಾನಿಯು ಒಮ್ಮೆಲೆ ಸಿಟ್ಟಿಗೆದ್ದು, ಜಪಾನಿಗೆ ಬೈದನು. ರಷ್ಯದವರನ್ನು ಗೆದ್ದೆವೆಂಬ ದಂಭಗಿಂದ ಮೆರೆಯುವ ಜಪಾನಿಗಳು ಆ ಅಪಮಾನವನ್ನು ಸಹಿಸುವರೇ? ಕೂಡಲೆ ಸುದಾನಿಗೆ ಮೊಜ್ಜೆಯಿಂದ ಹೊಡೆಯುವೆನೆಂದು ಹೇಳಿ ಬೆದರಿಸಿದನು. ಆ ಕೂಡಲೆ ಸುದಾನಿಯು ತನ್ನ ಸ್ಥಳದಿಂದೆದ್ದು ಬಂದು ಆ ಜಪಾನಿಯ ಕೆನ್ನೆಗೊಮ್ಮೆ ಚೆನ್ನಾಗಿ ಹೊಡೆದನು. ಸಿಟ್ಟಿಗೆ ಬೆಂಕಿಯಾದ ಜಪಾನಿಯು ತತ್‌ಕ್ಷಣವೇ ತನ್ನ ಜೇಬಿನೊಳಗಿನ ಚೂರಿಯನ್ನು ತೆಗೆದನು; ಮತ್ತು ಆ ಸುದಾನಿಯನ್ನು ಮುತ್ತಿದನು. ಮಿಕ್ಕ ಟೇಬಲ್ಲುಗಳ ಎದುರಿಗೆ ಕುಳಿತು ಊಟ ಮಾಡುತ್ತಿದ್ದವರು ಆ ರಣಕಂದನವನ್ನು ನಿಲ್ಲಿಸುವದಕ್ಕಾಗಿ ಅವರಿಬ್ಬರನ್ನೂ ತಡೆಯಹತ್ತಿದರು. ಸುದಾನಿಯು ಅವರಾರನ್ನೂ ಕೇಳದೆ, ಜಪಾನಿಯ ಆಕ್ರಮಣವನ್ನು ತಪ್ಪಿಸಿಕೊಳ್ಳುವದಕ್ಕಾಗಿ ತನ್ನ ಮೇಜಿನ ಮೇಲಿನ ನೀರು ತುಂಬಿದ ಗ್ಲಾಸನ್ನೆತ್ತಿ ಜಪಾನಿಯ ತಲೆಗೆ ಗುರಿಹಿಡಿದು ಎಸೆದನು; ಆದರೆ ಆ ಗ್ಲಾಸು ಜಪಾನಿಗೆ ಬಡಿಯದೆ, ಸಮೀಪದ ಕಾಜಿನ ದೀಪಕ್ಕೆ ತಾಕಿ ಅದು ಚೂರು ಚೂರಾಗಿಬಿಟ್ಟಿತು! ದೀಪವು ನಂದಿ ಹೋಯಿತು! ಸಮೀಪದಲ್ಲಿ ಬೇರೆ ದೀಪವೊಂದೂ ಇರದ್ದರಿಂದ ಆ ಪ್ರದೇಶದಲ್ಲೆಲ್ಲ ಕಾರ್ಗತ್ತಲೆಯು ಮುಸುಕಿಬಿಟ್ಟಿತು! ಸ್ಮಿತ್ಥನು ಆ ಸುಯೋಗವನ್ನು ಚೆನ್ನಾಗಿ ಉಪಯೋಗಿಸಿಕೊಂಡನು. ಅವನು ಆ ಕೂಡಲೆ ಬಳಿಯಲ್ಲಿದ್ದ ಪರದೆಯನ್ನು ಬದಿಗೆ ಸರಿಸಿ, ಆ ಮೇಲಟ್ಟವನ್ನು ಹತ್ತಿಬಿಟ್ಟನು. ದಾರಿಯಲ್ಲಿ ಅವನಿಗಾರೂ ಭೇಟಿಯಾಗ

ಲಿಲ್ಲ. ಕೆಳಗಡೆಯ ಕೋಲಾಹಲವು ಬರಬರುತ್ತ ಕಡಿಮೆಯಾಗಹತ್ತಿತು.

ಆ ಪಾವಟಿಗೆಗಳ ಮೇಲ್ಗಡೆಗೆ ಹೋದ ಕೂಡಲೆ ಸಮೀಪದ ಒಂದು ಕೋಣೆಯೊಳಗಿನ ಮಂದ ದೀಪದ ಪ್ರಕಾಶವು ಅವನಿಗೆ ಕಾಣಿಸಿತು. ಅವನು ಮೆಲ್ಲನೆ ಹೋಗಿ ಆ ಕೋಣೆಯ ಕದವನ್ನು ದೂಡುತ್ತಲೆ ಅದು ತೆರೆದೇಬಿಟ್ಟಿತು. ಅದೊಂದು ಶಯನಗೃಹವೆಂದು ಗೊತ್ತಾಯಿತು; ಆದರೆ ಅದು ಆ ಮಲ್ಲಿಗೆಯ ಹೂವಿನ ಶಯನಗೃಹವಹುದೋ ಅಲ್ಲವೋ ಎಂಬದು ಮಾತ್ರ ಅವನಿಗೆ ತಿಳಿಯ ಲಿಲ್ಲ. ಅವನು ಆ ಕೋಣೆಯೊಳಗಿನ ಕಿಟಿಕೆಯಿಂದ ಸಮೀಪದಲ್ಲಿಯ ಬೇರೊಂದು ಅಟ್ಟದ ಮಾಳಿಗೆಯನ್ನು ಕಂಡನು. ಕೂಡಲೆ ಅವನಿಗೆ ಆಕಸ್ಮಿಕವಾಗಿ ಒಳ್ಳೇ ಹುರುಪು ಉಂಟಾಗಲು, ಅವನು ಆ ಕಮಲಾಲಯದ ಮಾಳಿಗೆಯಿಂದ ಆ ಬೇರೆ ಮಾಳಿಗೆಯ ಮೇಲೆ ಒಮ್ಮೆಲೆ ಜಿಗಿದೇ ಬಿಟ್ಟನು!

ತಾನು ಇಲ್ಲಿಗೆ ಬಂದದ್ದು ವಿಹಿತವಾಗಲಿಲ್ಲೆಂಬದು ಅಲ್ಲಿಗೆ ಹಾರಿದ ಕೂಡಲೆ ಸ್ಮಿತ್ಥನಿಗೆ ಅನಿಸಿತು. ಯಾವ ದಾರಿಯಿಂದ ಅವನು ಬಂದಿದ್ದನೋ ಅದೇ ದಾರಿಯಿಂದ ಮರಳಿ ಹೋಗುವದು ಅಶಕ್ಯವಾಗಿರದಿದ್ದರೂ ಅದೆಷ್ಟು ಕಠಿಣತರವಾದುದೆಂಬದರ ಕಲ್ಪನೆಯು ಈಗ ಅವನಿಗೆ ಬಂದಿತು. ಅವನು ಹತ್ತಿದ್ದ ಆ ಹೊಸ ಅಟ್ಟವು ಹೆಚ್ಚಾಗಿ ಎತ್ತರವಿದ್ದುದರಿಂದ, ಬಹು ದೂರ ದಲ್ಲಿಯ ತೇಮ್ಸ ನದಿಯೊಳಗಿನ ಹಡಗುಪಡೆಯು ಸ್ಪಷ್ಟವಾಗಿ ಕಾಣಬರು ತ್ತಿತ್ತು. ನಾಲ್ಕೂ ಕಡೆಯ ವಿಶಾಲವಾದ ರಾಜಮಾರ್ಗದೊಳಗಿನ ಭಿನ್ನ-ಭಿನ್ನ ಪಥಿಕರ ಮಿಶ್ರಧ್ವನಿಯು ಚೆನ್ನಾಗಿ ಕೇಳಿಸುತ್ತು.

"ನಾನು ಇಲ್ಲಿ ಆ ಮೇರೀ ವೆಭಾನಳ ಪತ್ತೆ ಹಚ್ಚಿದೆನೆಂದರೆ ನನ್ನೀ ದುಸ್ಸಾಹಸದ ಸಾರ್ಥಕ್ಯವಾದಂತಾಗುವದು" ಎಂದು ಸ್ಮಿತ್ಥನು ತನ್ನ ಮನಸ್ಸಿ ನಲ್ಲಿಯೇ ಅಂದುಕೊಂಡನು. ಇಂದು ನನ್ನಿಂದ ಅವಳನ್ನು ಉದ್ಧಾರಗೊಳಿ ಸುವದಾಗದಿದ್ದರೂ, ಅವಳೊಡನೆ ನಾಲ್ಕು ಮಾತುಗಳನ್ನಾಡುವ ಸುಯೋಗ ವಾದರೂ ಲಭಿಸಬಹುದಲ್ಲವೆ? ಅವಳು ಯಾವ ಸ್ಥಿತಿಯಲ್ಲಿರುವಳೆಂಬದನ್ನು ಕಣ್ಮುಟ್ಟ ನೋಡಲಿಕ್ಕಾದರೂ ನನಗಿಂದು ದೊರೆಯಬಹುದಲ್ಲವೆ? ಇಂದು ಇಷ್ಟೇ ಲಭಿಸಿದರೆ ಸಾಕು; ಅವಳನ್ನು ಈ ಸಿಂಹನ ಜಾಲದೊಳಗಿಂದ ಹೇಗೆ ಉದ್ಧರಿಸ ಬೇಕೆಂಬದನ್ನು ಆ ಮೇಲೆ ಆಲೋಚಿಸಿದರೂ ನಡೆಯಬಹುದು. ಅವಳನ್ನು ಇಲ್ಲಿಂದ ಹೇಗೆ ಓಡಿಸಿಕೊಂಡು ಹೋಗಬೇಕೆಂಬ ಆಲೋಚನೆಯನ್ನಂತು ಮಾಡಬಹುದಲ್ಲವೆ?

ಹೀಗೆಂದು ಯೋಚಿಸುತ್ತ ಸ್ಮಿತ್ಥನು ಆ ಹೊರಮಾಳಿಗೆಯನ್ನು ದಾಟಿ, ಅದರ ಹಿಮ್ಮಗ್ಗಲಿನ ಲೋವಿಯ ಬಳಿಗೆ ಹೋದನು. ಅಷ್ಟರಲ್ಲಿ ಅದಾರದೋ

ಅಳುವ ಧ್ವನಿಯು ಅವನಿಗೆ ಕೇಳಿಸಿತು. ಅವನು ಆ ಲೋವಿಗೆ ಹೊಂದಿ, ಗೋಡೆಗೆ ಆವಿತುಕೊಂಡು ನಿಂತು ಆ ದನಿಯು ಯಾವ ಕಡೆಯಿಂದ ಬರುತ್ತ ದೆಂಬದನ್ನು ನಿರೀಕ್ಷಿಸತೊಡಗಿದನು. ಆ ರೋದನ ಧ್ವನಿಯು ಅದೇ ಅಟ್ಟದ ಮೇಲಿನದೊಂದು ಕೋಣೆಯಿಂದ ಕೇಳಬರುತ್ತಿತ್ತು. ಆ ರೋ-ದನ ಧ್ವನಿಯು ಯಾವಳೊಬ್ಬ ತರುಣಿಯದೇ ಎಂಬದನ್ನು ಅವನು ಕೂಡಲೆ ತಿಳಿದನು. ಅವನು ಅತ್ತಿತ್ತ ಕೊರಳಿ ನೋಡಲು, ಅದೇ ಅಟ್ಟದ ಮೇಲಿನ ಒಂದು ಕೋಣೆಯ ಕಿಟಕಿಯಿಂದ ಮಂದ ಮಂದವಾದ ದೀಪದ ಬೆಳಕು ಹೊರಗೆ ಬೀಳುತ್ತಿತ್ತು. ಅದೇ ಕೋಣೆಯಿಂದ ಅಳುವ ಧ್ವನಿಯು ಬರುತ್ತ ದೆಂದೂ ಅಲ್ಲಿಯೇ ಆ ಮೇರಿಯು ಇರುತ್ತಿರುವಳೆಂದೂ ಸ್ಮಿತ್ಥನಿಗನಿಸಿತು; ಆದರೆ ಸ್ಮಿತ್ಥನು ಎಲ್ಲಿ ನಿಂತುಕೊಂಡಿದ್ದನೋ ಆ ಲೋವಿಯಿಂದ ಆ ಕೋ-ಣೆಯ ಆ ಕಿಟಕಿಯು ೮-೫ ಫೂಟು ತೆಗ್ಗಿನಲ್ಲಿದ್ದಿತು. ಸ್ಮಿತ್ಥನು ಕೆಲ ನಿಮಿಷ ಗಳ ವರೆಗೆ ಯೋಚಿಸಿ, ಬಳಿಕ ತನ್ನ ಟೊಂಕಕ್ಕೆ ಸುತ್ತಿದ್ದ ನೂಲಿನ ನುಲಿಕೆ ಯನ್ನು ಬಿಚ್ಚಿ, ಅದರ ತುದಿಯೊಂದನ್ನು ಅಲ್ಲಿಯೇ ಒತ್ತಟ್ಟಿಗಿದ್ದ ಒಂದು ಜೇರು ಗಿಂಡಿಯ ಭದ್ರವಾದ ಕಂಬಿಗೆ ಕಟ್ಟಿದನು; ಹಾಗು ಆ ಹಗ್ಗವನ್ನು ಹಿಡಿದು ಆ ಲೋವಿಯಿಂದ ಇಳಿದು ಹತ್ತಿ ಆ ಕಿಟಕಿಯ ಬಳಿಗೆ ಹೋಗಿ ನಿಂತುಕೊಂಡನು. ಅವನು ಆ ಕಿಟಕಿಗೆ ತಲುಪುತ್ತಲೆ, ಒಂದು ಕೈಯಿಂದ ಆ ಹಗ್ಗವನ್ನೂ ಇನ್ನೊಂದು ಕೈಯಿಂದ ಆ ಕಿಟಕಿಯ ಕಬ್ಬಿಣ ಕಂಬಿಯನ್ನೂ ಹಿಡಿದು ನಿಂತು, ಆ ಕೋಣೆಯೊಳಗೆ ಇಣಿಕಿ ನೋಡಿದನು. ಆ ಕೋಣೆಯು ಬಹು ಚಿಕ್ಕ ದಾಗಿತ್ತು. ಆದರೊಳಗಿನದೊಂದು ಮೂಲೆಯಲ್ಲಿ ಒಂದು ಕಾಜಿನ ದೀಪವು ಉರಿಯುತ್ತಿತ್ತು. ಅಲ್ಲಿ ಹಲವು ಖುರ್ಚಿಗಳೂ ಒಂದು ಪಲ್ಲಂಗವೂ ಇದ್ದವು. ಸ್ಮಿತ್ಥನು ಒಳಗೆ ಇಣಿಕಿ ನೋಡಿದಾಗ ಆ ಪಲ್ಲಂಗದ ಮೇಲೆ ಯಾರೋ ಒಬ್ಬಳು ಮಲಗಿಕೊಂಡಿದ್ದಳು. ಅವಳ ಮೈಮೇಲಿನ ಉಡಿಗೆ-ತೊಡಿಗೆಗಳೆಲ್ಲ ಚೀನೀ ಹೆಂಗಸರಂತಿದ್ದವು. ಅದನ್ನು ಕಂಡೊಡನೆ ಸ್ಮಿತ್ಥನ ಮನಸ್ಸು ಒಮ್ಮೆಲೆ ಹೆಪ್ಪು ಗಟ್ಟಿಬಿಟ್ಟಿತು! ಬಳಿಕಲವನು ಆ ತರುಣಿಯ ಮುಖದ ಕಡೆಗೆ ಹೆಚ್ಚು ಲಕ್ಷ್ಯ ವಿಟ್ಟು ನೋಡಲು, ಅದು ಹೆಚ್ಚಾಗಿ ಬಿಳುಪಾಗಿದ್ದಿತು. ಆಗ ಅವನಿಗೆ ತುಸ ಧೈರ್ಯ ಬಂದಿತು. ನಂತರ ಅವನು ಕೆಲ ಕ್ಷಣಗಳ ವರೆಗೆ ಕೂಗಬೇಕೋ-ಬಾರದೋ ಎಂದು ಯೋಚಿಸಿ, ಕಡೆಗೆ ಗಟ್ಟಿ ಧೈರ್ಯ ಮಾಡಿ:—"ಮೇರೀ ವೆಭಾನ್" ಎಂದು ಕರೆದನು.

ಸ್ಮಿತ್ಥನ ಕೂಗನ್ನು ಕೇಳಿ ಮೇರಿಯು ಕಿಟಕಿಯ ಬಳಿಗೆ ತಡವರಿಸುತ್ತ ಬಂದು:—"ನೀನು ಯಾರು? ಕಿಟಕಿಯ ಹೊರಗೆ ಅಡಗಿಕೊಂಡು ನೀನೇನು

ಮಾಡುತ್ತಿರುವೆ?" ಎಂದು ಕೇಳಿದಳು.

ಸ್ಮಿಥ್ಥನು ಮೆಲ್ಲಗೆ ಹೇಳುತ್ತಾನೆ:—"ಗಟ್ಟಿಯಾಗಿ ಮಾತನಾಡಬೇಡ; ಅಂಜಬೇಡ; ನಾನು ನಿನ್ನ ಹಿತೈಷಿಯಾಗಿರುತ್ತೇನೆ."

ಮೇರಿ:—ಹಿತೈಷಿಯೋ! ಈ ಶತ್ರುದಳದಲ್ಲಿ ನನ್ನ ಹಿತೈಷಿಗಳೇ? ನಿನ್ನ ಮಾತನ್ನು ನಾನು ನಂಬುವದಿಲ್ಲ. ನೀನು ನಿಜವಾಗಿಯೂ ಚೀನಿಗನು. ಯಾವ ಚೀನಿಗನೂ ನನ್ನ ಹಿತಕಾಂಕ್ಷಿಯಾಗಿಲ್ಲ.

ಸ್ಮಿಥ್:—ನಾನು ಚೀನಿಗನಲ್ಲೆಂಬದನ್ನು ನಂಬು. ನಾನು ಇಂಗ್ಲಿಷನು. ನನ್ನೀ ಜಪಾನೀ ಛದ್ಮ ವೇಷವನ್ನು ಕಂಡು ನೀನು ನನ್ನನ್ನು ಚೀನಿಗನೆಂದು ತಿಳಿದಿರುವದು ನಿನ್ನ ಭ್ರಮವಾಗಿದೆ. ಇಲ್ಲಿಯ ಚೀನೀಯ ದುರ್ವೃತ್ತರು ನಿನ್ನನ್ನು ಸೆರೆಹಿಡಿದು ಇಲ್ಲಿ ಬಚ್ಚಿಟ್ಟಿರುತ್ತಾರೆಂಬದನ್ನು ನಾನು ಕೇಳಿ ಬಲ್ಲೆನು. ನಿನ್ನ ಪರಮಾಪ್ತರಾದ ಇನ್ಸಪೆಕ್ಟರ ಡೆಭೆನಟರಿಗೂ ಈ ಸಂಗತಿಯು ಗೊತ್ತಾಗಿರುತ್ತದೆ.

ಮೇರಿ:—ನಿನ್ನನ್ನು ಡೆಭೆನಟರೇ ಇಲ್ಲಿಗೆ ಕಳಿಸಿರುತ್ತಾರೇನು?

ಸ್ಮಿಥ್:—ಕುಮಾರಿಯವರೇ, ಹಾಗಿಲ್ಲ. ನನ್ನ ಸ್ವಂತದ ಇಚ್ಛೆಯಿಂದಲೇ ನಾನು ನಿಮ್ಮನ್ನು ಹುಡುಕ ಬಂದಿರುತ್ತೇನೆ. ನಿಮ್ಮನ್ನು ಯಾರು ಸೆರೆ ಹಿಡಿದಿರುತ್ತಾರೆಯೋ ಅವರು ನಮ್ಮ ದೇಶದ ಶತ್ರುಗಳು; ಅವರನ್ನು ದಂಡಿಸುವದು ನಮ್ಮ ಮುಖ್ಯ ಕೆಲಸವು. ನಿಮಗೆ ಅದನ್ನೆಲ್ಲ ವಿವರವಾಗಿ ತಿಳಿಸಲಿಕ್ಕೆ ಸಮಯವಿಲ್ಲ. ನಿಮ್ಮನ್ನು ಇಲ್ಲಿ ಸೆರೆಯಿಟ್ಟಿರುತ್ತಾರೆಂಬದನ್ನು ತಿಳಿಯುತ್ತಲೆ, ನೆರೆಮನೆಯ ಮಾಳಿಗೆಯಿಂದ ಹಗ್ಗದ ನೆರವಿನಿಂದ ಈ ಕಿಟಕಿಗೆ ಬಂದಿರುತ್ತೇನೆ. ನಾನು ನಿಜವಾಗಿಯೂ ಇಂಗ್ಲಿಷನಿದ್ದು, ಕಾಪಟ್ಯ ವೇಷದ ಜಪಾನಿಯಾಗಿರುತ್ತೇನೆ. ನಾನು ಖಂಡಿತವಾಗಿಯೂ ನಿಮ್ಮ ಹಿತವನ್ನು ಬಯಸುವವನು. ನನ್ನ ಮಾತನ್ನು ನೀವು ಕೊಂಚವೂ ಅನುಮಾನಿಸದೆ, ನಂಬಿರಿ.

ಮೇರಿ:—ನಿನ್ನ ಮಾತಿನಲ್ಲಿ ನನಗೆ ಅವಿಶ್ವಾಸವಿಲ್ಲ; ಆದರೆ ನೀನು ಈ ಒಳಗೆ ಬಂದು ನನ್ನನ್ನು ಬಂಧಮುಕ್ತಗೊಳಿಸಲಾರೆ. ಇಂಥ ಸ್ಥಿತಿಯಲ್ಲಿ ನಿನ್ನನ್ಯಾರಾದರೂ ಕಂಡರೆ, ನಮ್ಮಿಬ್ಬರಿಗೂ ಅನಿಷ್ಟವಾಗದಿರದು.

ಸ್ಮಿಥ್:—ಆ ಮಾತು ನಿಜವು. ನಾನು ಈಗಲೆ ನಿನ್ನನ್ನು ಉದ್ಧರಿಸಲಾರೆನು; ಆದರೆ ನಾನು ಇಲ್ಲಿಂದ ಹೋದವನೇ ನಿನ್ನ ಬಂಧಮುಕ್ತತೆಯ ವ್ಯವಸ್ಥೆಯನ್ನು ಮಾಡುತ್ತೇನೆ. ಇಲ್ಲಿ ನಿನ್ನ ಮೇಲೆ ಅತ್ಯಾಚಾರವೇನಾದರೂ ಆಗುತ್ತಿದೆಯೋ ಇಲ್ಲವೋ ಎಂಬದನ್ನಷ್ಟು ಹೇಳು. ನಿನ್ನ ನಿಜ ಸಂಗತಿಯನ್ನು ತಿಳಿಯುವ ಬಗ್ಗೆ ಡೆಭೆನಟರು ತೀರ ಅಧೀರರಾಗಿರುತ್ತಾರೆ.

ಮೇರಿ:—ಇಲ್ಲ. ಇದು ವರೆಗೆ ಯಾವನೂ ಯಾವ ಬಗೆಯಿಂದಲೂ

ನನ್ನನ್ನು ಪಿ'ಡಿಸಿಲ್ಲ-ಕಾಡಿಸಿಲ್ಲ; ಆದರೆ ಬಲುಮೆಯಿಂದ ನನ್ನನ್ನೀ ಮನೆಯಲ್ಲಿ ಸೆರೆಯಿರಿಸಿರುತ್ತಾರೆ. ಇದೇನು ಸಾಮಾನ್ಯ ಅತ್ಯಾಚಾರವೇ? ಒಬ್ಬ ಮುದು ಕಿಯು ಯಾವಾಗಲೂ ನನ್ನ ಮೇಲೆ ಪಹರೆ ಮಾಡುತ್ತಿರುತ್ತಾಳೆ; ಹಾಗು ನನಗೆ ಬೇಕು ಬೇಕಾದದ್ದನ್ನೆಲ್ಲ ಪೂರೈಸಿ ಕೊಡುತ್ತಾಳೆ. ಅವಳು ನನ್ನೊಡನೆ ಯಾವ ಬಗೆಯ ದುರ್ವ್ಯವಹಾರವನ್ನೂ ಮಾಡುವದಿಲ್ಲ; ಆದರೆ ನಾನು ಇಲ್ಲಿ ಹೀಗೆ ಬಂಧನಕ್ಕೊಳಪಟ್ಟಿರುವದರಿಂದ ಬಹು ಗಾಬರಿಗೊಂಡಿದ್ದೇನೆ. ಈ ಸೆರೆ ಮನೆಯ ಕಷ್ಟವನ್ನು ಇನ್ನು ನಾನು ಸಹಿಸಲಾರೆನು. ಬೇಗನೆ ನನ್ನನ್ನು ಬಂಧಮುಕ್ತಗೊಳಿಸದಿದ್ದರೆ, ನನಗೆ ಹುಚ್ಚು ಹಿಡಿಯದಿರಲಾರದು. ಈಗ ಆ ಮುದುಕಿಯು ಊಟಕ್ಕೆ ಹೋಗಿರುತ್ತಾಳೆ. ಇಷ್ಟರಲ್ಲೇ ಬಂದು ಬಿಡಬಹು ದಾಗಿದೆ ಇಲ್ಲಿ ನಾನು ಬೇಕಾದಷ್ಟು ಒದರಿಕೊಂಡರೂ, ನನಗಾರ ಸಹಾಯವೂ ದೊರಕುವಂತಿಲ್ಲ.

ಸ್ಮಿತ್ಥ:—ಅಹುದು; ಇಲ್ಲಿ ನಾಲ್ಕೂ ಕಡೆಗೆ ಚೀನೀಯರ ವಸತಿಯೇ ಇದ್ದು, ಅವರೆಲ್ಲರೂ ಇಲ್ಲಿಯ ಚಾಯ್ನಾ ಫೀಲ್ಡಿನ ಸಿಂಹನ ಅನುಚರರೂ ಅನು ಗತರೂ ಆಗಿರುತ್ತಾರೆ. ಕುಮಾರೀ ಮೇರೀ, ನೀನು ಅಧೀರಳಾಗಬೇಡ. ತೀವ್ರವೇ ನಿನ್ನ ಬಿಡುಗಡೆಯ ವ್ಯವಸ್ಥೆ ಮಾಡುವೆನು. ನಾನು ಮತ್ತೆ ಇಲ್ಲಿಗೆ ಬಂದು ನಿನ್ನೊಡನೆ ಮಾತನಾಡೇನೆಂಬ ಆಶೆ-ಭರವಸೆಗಳಿರುವದಿಲ್ಲ. ಈ ಲಂಡನ್ನ ಪಟ್ಟಣದ ಪೋಲೀಸರು ಶೀಘ್ರವೇ ಬಂದು ನಿನ್ನನ್ನು ಉದ್ಧಾರಗೊಳಿಸುವರು. ಯಾವ ಚೀನಿಗನು ನಿನ್ನನ್ನು ಸೆರೆ ಹಿಡಿದಿರುವನೋ, ಅವನ ಹೆಸರೇನೆಂಬದನ್ನು ಹೇಳಬಲ್ಲೆಯಾ? ಅವನ ಸಂಬಂಧವಾಗಿ ನಿನಗೆ ಮತ್ತೆ ಏನೇನು ಗೊತ್ತಿದೆ?

ಮೇರಿ:—ಆತನ ವಿಷಯವಾಗಿ ನನಗೇನೂ ತಿಳಿಯದು. ಅವನ ಹೆಸರು ಕೂಡ ಗೊತ್ತಿರುವದಿಲ್ಲ. ಪಹರೆಯ ಮುದುಕಿಯ ಬಳಿಯಿಂದ ಏನಾದರೂ ತಿಳಿಯಬೇಕೆಂದರೆ—ಓಡಿರಿ, ಬೇಗನೆ ಓಡಿ ಹೋಗಿರಿ. ಆ ಮುದುಕಿಯು ಬಂದೇ ಬಿಟ್ಟಳು! ಅಗೋ ಅಟ್ಟದ ಪಾವಟಿಗೆಗಳಲ್ಲಿ ಕಾಲ ಸಪ್ಪಳವಾಗು ತ್ತಿದೆ. ಹೂಂ ಹೊರಡಿರಿ............

ಸ್ಮಿತ್ಥ:—ಹಾಗಾದರೆ ಹೊರಡುವೆನಿನ್ನು. ಡೆಭೆನಟರಿಗೆ ನಿಮ್ಮ ಸಂಬಂ ಧದ ಎಲ್ಲ ಸಂಗತಿಯನ್ನೂ ತಿಳಿಸುವೆನು.........ಕೂಡಲೆ ಮೇರಿಯು ಕಿಟಕಿಯ ಬಳಿಯಿಂದ ಲಗುಬಗನೆ ಹೊರಟುಹೋಗಿ ಪಲ್ಲಂಗದ ಮೇಲೆ ಮಲಗಿಕೊಂಡಳು. ಸ್ಮಿತ್ಥನು ಆ ಹಗ್ಗದ ಸಹಾಯದಿಂದ ಸಪ್ಪಳಾಗದ ಹಾಗೆ ಮಾಳಿಗೆಯ ಮೇಲೆ ಏರಿ ಹೋದನು. ಆ ಮುದುಕಿಯು ಆ ಚಿಕ್ಕ ಕೋಣೆಗೆ ಬಂದ ಮೇಲೆ ಅಲ್ಲಿ ಅವ ಳಿಗೆ ವಿಶೇಷವೇನೂ ಕಾಣಿಸಲಿಲ್ಲ.ಸ್ಮಿತ್ಥನು ಮಾಳಿಗೆಯನ್ನೇರಿ ಸಲಾಕಿಗೆ ಕಟ್ಟಿದ್ದ

ತನ್ನ ಹಗ್ಗವನ್ನು ಬಿಚ್ಚಿಕೊಂಡು, ಅದನ್ನು ಮೊದಲಿನಂತೆ ಟೊಂಕಕ್ಕೆ ಸುತ್ತಿಕೊಂಡನು. ಆಗ ಅವನು ಮನಸ್ಸಿನಲ್ಲಿ ಅಂದುಕೊಂಡನೇನಂದರೆ:—ಈ ಸ್ಥಳದಿಂದ ಆ ಕಿಟಕಿಯು ಹೆಚ್ಚು ತಗ್ಗಿನಲ್ಲಿದ್ದರೆ ಹಗ್ಗ ಹಂದು ನಾನು ನೆಲಕ್ಕೆ ಬೀಳತಕ್ಕವನೇ; ಆದರೆ ಹಾಗಾಗಲಿಲ್ಲ. ಇನ್ನು ನಾನು ಯಾವ ದಾರಿಯಿಂದ ಓಡಿ ಹೋಗಬೇಕು? ನಾನು ಯಾವ ದಾರಿಯಿಂದ ಬಂದಿರುವೆನೋ ಪರರಿಗೆ ಗೊತ್ತಾಗದಂತೆ ಅಲ್ಲಿಂದ ಹೋಗುವದು ಶಕ್ಯವಾದೀತೇನು? ಅಲ್ಲಿಗೆ ಮರಳಿ ಹೋಗಲಿಕ್ಕೆ ಪ್ರಯತ್ನಿಸುವ ಮೊದಲು, ಈ ಮಾಳಿಗೆಯ ಹಿಂಬದಿಗೆ ಹೋಗಿ ನನ್ನಲ್ಲಿಯ ಹಗ್ಗದ ಸಹಾಯದಿಂದ ಕೆಳಗೆ ಇಳಿಯಬಹುದೋ-ಇಲ್ಲವೋ ಎಂಬದನ್ನು ಪರೀಕ್ಷಿಸಬೇಕಾಗಿದೆ.

ಸ್ಮಿತ್ಥನು ಮೊದಲು ಯಾವ ಮೇಲಟ್ಟದ ಕೋಣೆಯೊಳಗಿಂದ ಹೊರಬಿದ್ದಿದ್ದನೋ ಸ್ವಲ್ಪವೂ ಕಾಲ ಸಪ್ಪಳವಾಗದ ಹಾಗೆ ಆ ಕೋಣೆಯಲ್ಲಿ ಮರಳಿ ಪ್ರವೇಶಿಸಿದನು. ಅದುವರಗೂ ಆ ಕೋಣೆಯಲ್ಲಿ ಯಾರೂ ಬಂದಿರಲಿಲ್ಲ. ಅವನು ಆ ಕೋಣೆಯೊಳಗಿಂದ ಪಕ್ಕದ ಪಾವಟಿಗೆಗಳ ಕೋಣೆಯನ್ನು ಹೊಕ್ಕನು. ಅಲ್ಲಿಯ ಗಾಢವಾದ ಅಂಧಃಕಾರದಲ್ಲಿ ಅವನು ಆ ಪಾವಟಿಗೆಗಳನ್ನೇರಿ ಮೂರನೇ ಅಂತಸ್ತಿನ ಬೈಲು ಮಾಳಿಗೆಗೆ ತಲುಪುತ್ತಲೆ, ಆತನ ಎದೆಯು ಧಡ-ಧಡನೆ ಹಾರತೊಡಗಿತು; ಯಾಕಂದರೆ ಆ ಮೇಲ್ಮಾಳಿಗೆಯನ್ನು ಹತ್ತುವ ಪಾವಟಿಗೆಗಳ ಪಕ್ಕದಲ್ಲಿ ಯಾವ ಬಾಗಿಲವಿದ್ದಿತೋ, ಅಲ್ಲಿಯೊಂದು ದೀಪವು ಉರಿಯುತ್ತಿತ್ತು. ಆ ಬಾಗಿಲ ಬಳಿಯಲ್ಲಿ ಬಲಿಷ್ಠ ಕಾಯದ ಭೀಷಣಾಕಾರದ ಒಬ್ಬ ಚೀನೀ ಮನುಷ್ಯನು ನಿಂತುಕೊಂಡಿದ್ದನು. ಸ್ಮಿತ್ಥನು ಅವನ ಕಣ್ಣು ತಪ್ಪಿಸಿ ಹೋಗಲಿಕ್ಕೆ ಸಮರ್ಥನಾಗಲಿಲ್ಲ. ಆತನು ಸ್ಮಿತ್ಥನನ್ನು ಕಂಡ ಕೂಡಲೆ ಕರ್ಕಶ ದನಿಯಿಂದ:—"ಎಲೈ ಪುಟ್ಟ ಜಪಾನೀ, ನೀನು ಇಲ್ಲಿಗೇಕೆ ಬಂದೆ? ಇನ್ನು ನೀನು ಇಲ್ಲಿಂದ ಓಡಿ ಹೋಗಲಾರೆ!" ಹೀಗೆಂದು ನುಡಿದವನೇ ಅವನು ಒಮ್ಮೆಲೆ ಜಿಗಿದು ಬಂದು ಸ್ಮಿತ್ಥನನ್ನು ಆಕ್ರಮಿಸಿದನು.

ಸ್ಮಿತ್ಥನ ಜೇಬಿನಲ್ಲೊಂದು ಪುಟ್ಟ ಪಿಸ್ತೂಲವಿದ್ದಿತು. ಅವನು ಅದನ್ನು ಅಲ್ಲಿಂದ ತಕ್ಕೊಳ್ಳುವ ಪೂರ್ವದಲ್ಲಿಯೇ ಆ ಚೀನೀ ಮನುಷ್ಯನು ಈತನನ್ನು ಎತ್ತಿ ದೂರ ಒಗೆದನು; ಹಾಗು ಸ್ಮಿತ್ಥನು ಮರಳಿ ಆ ಬೈಲು ಮಾಳಿಗೆಯ ಮೇಲೆ ಬಂದು ಬೀಳುವಷ್ಟರಲ್ಲಿ ಇವನ ಎದೆಯ ಮೇಲೆ ಕುಳಿತು ಇವನನ್ನು ಕತ್ತಿಕ್ಕಿ ಹಿಡಿದನು. ಅವನ ಆ ಹಿಚುಕುವದರಿಂದ ಸ್ಮಿತ್ಥನ ಶ್ವಾಸವು ಕಟ್ಟಲಾರಂಭಿಸಿತು. ಇನ್ನು ಈ ದುರ್ವೃತ್ತನ ಕೈಯಿಂದ ಪಾರಾಗುವದು ಅಸಂಭವವೆಂದು ತಿಳಿಯಲು, ಸ್ಮಿತ್ಥನು ಬಳ್ಳೇ ಕಷ್ಟದಿಂದ:—"ದೇವಾ, ಸಾಯುವೆನು; ಪರಮೋ

ಶ್ವರಾ! ಈ ಸಂಕಟದಿಂದ ನೀನೇ ಪಾರು ಮಾಡುವವನು" ಎಂದು ದೇವರನ್ನು ಕುರಿತು ಹಂಬಲಿಸಿದನು.

ಸ್ಮಿತ್ಥನ ಆ ಆರ್ತಧ್ವನಿಯನ್ನು ಕೇಳಿ, ಆ ಚೀನೀ ಮನುಷ್ಯನು ಪೈಶಾಚಿಕ ನಗುವನ್ನು ನಕ್ಕು: —"ಮೂರ್ಖಾ, ಸುಮ್ಮನೆ ಸಾಯು. ನಿನ್ನನ್ನುಳಿಸಲಿಕ್ಕೆ ನಿನ್ನಪ್ಪನು ಇಳ್ಳಿಗೆ ಬರುವನೆಂದು ತಿಳಿದಿದ್ದೀಯೇನು? ಕಳ್ಳಾ! ನೀಚಾ!" ಹೀಗೆಂದು ನುಡಿಯುತ್ತ, ಅವನು ತನ್ನ ಎಡಗೈಯಿಂದ ಸ್ಮಿತ್ಥನ ಕುತ್ತಿಗೆಯನ್ನು ಮತ್ತಷ್ಟು ಬಲವಾಗಿ ಹಿಚುಕಲಾರಂಭಿಸಿದನು; ಹಾಗು ಬಲಗೈಯಿಂದ ತನ್ನ ಬಕ್ಕಣದೊಳಗಿನ ಒಳ್ಳೇ ಹದನಾದ 'ಕಿರೀಚ' ಎಂಬ ಆಯುಧವನ್ನು ಹೊರ ಹೊರಡಿಸಿದನು.

---

ಒನೇ ತೆರೆ.

## ವಿಪತ್ಬಂಧು.



ಯಾವ ಪುಂಡನ ಉಡಿಗೆ-ತೊಡಿಗೆಗಳು ಮಲಿನವಾಗಿದ್ದವೋ, ಯಾವನ ತಲೆಯಮೇಲಿನ ಟೊಪ್ಪಿಗೆಯು ಹುಬ್ಬಿನವರೆಗೆ ಜಗ್ಗಲ್ಪಟ್ಟದ್ದರಿಂದ ಮೋರೆಯು ಕೂಡ ಕಾಣಿಸುತ್ತಿರಲಿಲ್ಲವೋ, ಯಾವನು ಕಮಲಾಲಯದಲ್ಲಿ ಸ್ಮಿತ್ಥನ ಸಮೀಪದ ಮೇಜಿನ ಮೇಲೆ ಕುಳಿತು ಊಟ ಮಾಡುತ್ತಿದ್ದನೋ, ಯಾವನು ಆಗಾಗ್ಗೆ ಸ್ಮಿತ್ಥನ ಕಡೆಗೆ ಟಕಮಕವೆಂದು ನೋಡುತ್ತಿದ್ದನೋ ಆ ಕಪಟ ವೇಷಧಾರಿಯೇ ನಮ್ಮ ಸುಪ್ರಸಿದ್ಧ ಪತ್ತೇದಾರನಾದ ಬ್ಲೇಕನು. ಬ್ಲೇಕನು ಆ ಬಗೆಯ ಛದ್ಮ ವೇಷವನ್ನು ತಾಳಿ ತನ್ನನ್ನನುಸರಿಸಿ ಬಂದಿರಬಹುದೆಂಬದರ ಕಲ್ಪನೆ ಕೂಡ ಸ್ಮಿತ್ಥನಿಗಿರಲಿಲ್ಲ.

ಮಲ್ಲಿಗೆಯ ಹೂವು ಸ್ಮಿತ್ಥನೊಡನೆ ಒಳ್ಳೇ ಪ್ರೇಮಾಲಾಪ ಮಾಡುತ್ತಿದ್ದುದನ್ನು ಬ್ಲೇಕನು ನೋಡಿದ್ದನು ಮಾತ್ರ; ಆದರೆ ಅವಳು ಅವನಿಗೆ ಏನೇನು ಹೇಳಿದಳೆಂಬದರ ಅನುಮಾನವು ಕೂಡ ಆತನಿಗಾಗಲಿಲ್ಲ. ಊಟವಾದೊಡನೆ ಸ್ಮಿತ್ಥನು ಒಮ್ಮೆಲೆ ಆ ಕಮಲಾಲಯವನ್ನು ಬಿಟ್ಟು ಹೋಗಲು, ಬ್ಲೇಕನೂ ಅವನನ್ನು ಅನುಸರಿಸಿದ್ದನು. ಸ್ಮಿತ್ಥನು ಈಸ್ಟ ಇಂಡಿಯಾ ಡಕ್ಕ ರೋಡಿನೊಳಗಿನ ಒಂದು ಅಂಗಡಿಯನ್ನು ಹೊಕ್ಕು ನೂಲಿನ ಹಗ್ಗ ಕೊಂಡದ್ದನ್ನು ಕೂಡ ಅವನು ನೋಡಿದ್ದನು; ಆದರೆ ಆ ಹಗ್ಗವನ್ನೇಕೆ ಕೊಂಡ! ಎಂಬ ಒಗ್ಗೆ ಅವನು ಸ್ಮಿತ್ಥನಿಗೆ ಕೇಳಲಿಲ್ಲ; ಆದರೂ ಆಗ ಬ್ಲೇಕನು ಊಹಿಸಿದ್ದೇನಂದರೆ, ಈ ಪೋರನು

ಯಾವದೋ ಒಂದು ದುಸ್ಸಾಹಸದ ಕೆಲಸಕ್ಕೆ ಕೈ ಹಾಕುವ ಸಂಕಲ್ಪ ಮಾಡಿದ್ದುದರಿಂದ ಇವನು ಮರಳಿ ಈ ಕಮಲಾಲಯಕ್ಕೆ ಬಂದೇ ಬರುವನು. ಅದಕ್ಕಂದೇ ಅವನು ಸ್ಮಿತ್ಥನಿಗಿಂತ ಮೊದಲು ಅಲ್ಲಿಗೆ ಮರಳಿ ಹೋಗಿ ತನ್ನ ಆಸನದಲ್ಲಿ ಕುಳಿತು ಧೂಮ್ರಪಾನ ಮಾಡುತ್ತಿದ್ದನು. ತದನಂತರ ಅಲ್ಪಾವಕಾಶದಲ್ಲಿಯೇ ಸ್ಮಿತ್ಥನು ಅಲ್ಲಿಗೆ ಮತ್ತೆ ಬಂದು ಆ ಪರದೆಯ ಬಳಿಯ ಮೂಲೆಗೆ ಹೋಗಿ ಕುಳಿತನು. ಆ ಮೇಲೆ ಮಾತ್ರ ಸ್ಮಿತ್ಥನ ಲಕ್ಷ್ಯವು ಕಪಟ ವೇಷಧಾರಿಯಾದ ಆ ಬ್ಲೇಕನ ಕಡೆಗೆ ಉಳಿಯಲಿಲ್ಲ.

ಕಡೆಗೆ ಈ ಮೊದಲು ಹೇಳಿದಂತೆ ಆ ಜಪಾನೀ-ಸುದಾನಿಯರ ರಣಕಂದನಕ್ಕೆ ಪ್ರಾರಂಭವಾಯಿತು. ಅವರ ಜಗಳವನ್ನು ನಿಲ್ಲಿಸುವದಕ್ಕಾಗಿ ಆ ಕಮಲಾಲಯದೊಳಗಿನ ಸಮಸ್ತ ಜನರೂ ಅಲ್ಲಿಗೆ ಬರಲು, ನಾಲ್ಕೂ ಕಡೆಯಿಂದ ದೊಡ್ಡ ಗೊಂದಲವೇ ಎದ್ದಿತು. ಅದುವರೆಗೂ ಬ್ಲೇಕನ ದೃಷ್ಟಿಯು ಸ್ಮಿತ್ಥನ ಮೇಲೆ ಇದ್ದೇ ಇದ್ದಿತು. ಆ ಬಳಿಕ ಸುದಾನಿಯಿಂದ ಎಸೆಯಲ್ಪಟ್ಟ ಗ್ಲಾಸಿನಿಂದ ಅಲ್ಲಿಯ ಕಾಜಿನ ದೀಪವು ಒಡೆದು ಅಲ್ಲಿ ಕಾರ್ಗತ್ತಲೆಯು ಮುಸುಕಲು, ಬ್ಲೇಕನು ಸ್ಮಿತ್ಥನನ್ನು ಕಾಣುವದು ಅಶಕ್ಯವಾಯಿತು. ಕೆಲ ಹೊತ್ತಿನಲ್ಲಿಯೇ ಕಮಲಾಲಯದ ಮಾಲಕನಾದ ಲಿ ಕೋಯಾಂಗನು ಬೇರೆ ದೀಪವನ್ನು ಹಚ್ಚಲು, ಬ್ಲೇಕನು ಸ್ಮಿತ್ಥನು ಕುಳಿತ ಸ್ಥಳದ ಕಡೆಗೆ ನೋಡುತ್ತಾನೆ, ಅಲ್ಲಿ ಅವನು ಇರಲೇ ಇಲ್ಲ. ಆ ಗೊಂದಲ ಕಾಲದಲ್ಲಿ ಅವನು ಆ ಹೋಟಲ್ಲಿನಿಂದ ಹೊರಗೆ ಹೋಗಿದ್ದರೆ, ಬ್ಲೇಕನನ್ನು ತಾಕಿಯೇ ಹೊರಬೀಳಬೇಕಾಗಿತ್ತು. ಹಾಗಾಗದ್ದರಿಂದ ಸ್ಮಿತ್ಥನು ಎತ್ತ ಹೋದನೆಂಬದು ಅವನಿಗೆ ತಿಳಿಯದಾಯಿತು. ಸ್ಮಿತ್ಥನು ನೂಲಿನ ಹಗ್ಗವನ್ನು ಕೊಂಡುಕೊಂಡು ಮತ್ತೆ ಆ ಹೋಟಲ್ಲಿಗೆ ಬಂದದ್ದರಿಂದ, ಅವನು ಅದನ್ನು ಅಲ್ಲಿಯೇ ಹೇಗೆಯೋ ಉಪಯೋಗಿಸಲಿಕ್ಕೆ ಬಂದಿದ್ದನೆಂದು ತರ್ಕಿಸಿದ ಬ್ಲೇಕನು ಸ್ಮಿತ್ಥನನ್ನು ಬೇರೆ ಕಡೆಗೆ ಹುಡುಕುವ ಗೊಡವೆಗೆ ಹೋಗಲಿಲ್ಲ. ಅಷ್ಟರಲ್ಲಿ ಸ್ಮಿತ್ಥನು ಕುಳಿತಿದ್ದ ಮೇಜಿನ ಬಳಿಯ ಮೇಲಟ್ಟದ ಪಾವಟಿಗೆಗಳೆದುರಿಗಿನ ಪರದೆಯು ಅವನ ಕಣ್ಣಿಗೆ ಬಿತ್ತು. ಸ್ಮಿತ್ಥನು ಆ ಕತ್ತಲೆಯ ಗೊಂದಲದಲ್ಲಿ ಈ ಪರದೆಯು ಮರೆಗಿರುವ ಪಾವಟಿಗೆಗಳನ್ನೇರಿ ಈ ಮೇಲಟ್ಟವನ್ನೇ ಏರಿ ಹೋಗಿರಬೇಕೆಂದು ತಿಳಿದನು. ಸ್ಮಿತ್ಥನು ಆ ನೂಲಿನ ಹಗ್ಗವನ್ನೇಕೆ ಕೊಂಡನೆಂಬದನ್ನು ಆಗಲೆ ಕೇಳದಿರುವದೇ ಬಹು ದೊಡ್ಡ ತಪ್ಪಾಯಿತೆಂದು ಆಗ ಬ್ಲೇಕನಿಗನಿಸದಿರಲಿಲ್ಲ.

ಅದುವರೆಗೂ ಆ ಸುದಾನಿ-ಜಪಾನಿಯರ ಜಗಳವು ಮುಗಿದಿರಲಿಲ್ಲ. ರಣೋತ್ಸಾಹಿಗಳಾದ ಆ ಇಬ್ಬರನ್ನು ಶಾಂತಗೊಳಿಸುವ ಕಾರ್ಯದಲ್ಲಿಯೇ ಆ

ಕವುಲಾಲಯದೊಳಗಿನವರೆಲ್ಲ ನಿರತರಾಗಿದ್ದರು. ಆ ಸುಸಂಧಿಯಲ್ಲಿ ಬ್ಲೇಕನು ಮಿಕ್ಕವರೆಲ್ಲರ ಕಣ್ಣು ತಪ್ಪಿಸಿ, ಆ ಪರದೆಯನ್ನು ಬದಿಗೆ ಸರಿಸಿ, ಆ ಪಾವಟಿಗೆಗಳ ಮೇಲೆ ಪ್ರವೇಶಿಸಿದನು; ಮತ್ತು ಅವುಗಳ ಎರಡೂ ಮಗ್ಗಲಿನ ಗೋಡೆಗಳನ್ನು ಹಿಡಿದುಕೊಂಡು ಬಹು ಸಾವಕಾಶವಾಗಿ ಹತ್ತಿ ಮೇಲಟ್ಟದ ಛಾವಣಿಯಲ್ಲಿ ಹೊಕ್ಕನು. ಆ ಮೇಲಟ್ಟದ ಮೇಲೆ ಒಂದೇ ಒಂದು ಕೋಣೆಯಿದ್ದಿತು. ಅವನಿಗೆ ಆ ಕೋಣೆಯ ಬಾಗಿಲವು ತೆರೆದಿರುವಂತೆ ತೋರಿತು; ಹಾಗು ಅಲ್ಲಿಯೊಂದು ದೀಪವು ಮಂದ ಮಂದವಾಗಿ ಉರಿಯುತ್ತಿರುವದು ಕಾಣಿಸಿತು. ಆ ಕೋಣೆಯಲ್ಲಿ ಆಗ ಯಾರೂ ಇರಲಿಲ್ಲ. ಬ್ಲೇಕನು ಆ ಕೋಣೆಯನ್ನು ಪ್ರವೇಶಿಸದೆ, ಬೇರೆ ಮಾರ್ಗದಿಂದ ಮಾಳಿಗೆಯನ್ನು ಹತ್ತಿದನು. ಸ್ಮಿತ್ಥನು ಆ ಕೋಣೆಯೊಳಗಿಂದ ಹಾದು ಯಾವ ಮಾಳಿಗೆಯ ಮೇಲೆ ಹಾರಿದ್ದನೋ, ಅದು ಬೇರೆ ಕಡೆಗೆ ಕಾಣಿಸುತ್ತಿತ್ತು. ಸ್ಮಿತ್ಥನು ಯಾವ ಕಡೆಗೆ ಹೋಗಿದ್ದನೋ, ಅದರ ವಿರುದ್ಧ ದಿಕ್ಕಿನಲ್ಲಿ ಬ್ಲೇಕನು ಆತನನ್ನು ಶೋಧಿಸಹತ್ತಿದ್ದನು. ಅಲ್ಲೆಲ್ಲಿಯೂ ಸ್ಮಿತ್ಥನ ಸುಳಿವು-ಗಿಳಿವು ಹತ್ತಲಿಲ್ಲ. ಅಷ್ಟರಲ್ಲಿ ಅವನಿಗೇನೆನಿಸಿತೆಂದರೆ:—ಸ್ಮಿತ್ಥನು ಈ ಮೇಲಟ್ಟಕ್ಕೆ ಬಂದೇ ಇಲ್ಲ. ಅವನು ಈ ನಿರ್ಜನವಾದ ಮಾಳಿಗೆಗೇಕೆ ಬಂದಾನು? ಇಷ್ಟರಲ್ಲಿ ಸ್ಮಿತ್ಥನು ನೆರೆಮನೆಯ ಮೇಲಟ್ಟದ ಹಿಂಬದಿಯ ಜೇರುಗಿಂಡಿಯ ಕಂಬಿಗೆ ಕಟ್ಟಿದ್ದ ನೂಲಿನ ನುಲಿಕೆಯ ಸಹಾಯದಿಂದ ಮೇಲ್ಮಾಳಿಗೆಯನ್ನೇರಿ ಈ ಮೊದಲು ವಿವರಿಸಿದ ಕೋಣೆಯೊಳಗಿಂದ ನಿಶ್ಶಬ್ದವಾಗಿ ಹೊರಟು ಹೋದನು, ಆಗ ಬ್ಲೇಕನು ಅದೇ ಕೋಣೆಯ ಹೊರಗೋಡೆಯ ಮರೆಗೆ ಹೊರಛಾವಣಿಯಲ್ಲಿದ್ದುದರಿಂದ, ಸ್ಮಿತ್ಥನ ಪ್ರತ್ಯಾಗಮನವು ಅವನಿಗೆ ಕಾಣಿಸಲಿಲ್ಲ. ಅದರಿಂದ ಬ್ಲೇಕನು ನಿರಾಶೆಗೊಂಡು, ಮೆಲ್ಲ ಮೆಲ್ಲನೆ ಆ ಪಾವಟಿಗೆಗಳನ್ನಿಳಿಯುತ್ತಿರಲು, ಅದೇ ಪಾವಟಿಗೆಗಳ ಮೂರನೇ ಅಟ್ಟದಿಂದ ಸ್ಮಿತ್ಥನ ಆರ್ತಧ್ವನಿಯು ಅಸ್ಪಷ್ಟವಾಗಿ ಬಂದು ಈತನ ಕಿವಿಯನ್ನು ಹೊಕ್ಕಿತು. ಕೂಡಲೆ ಬ್ಲೇಕನು ಆ ದನಿ ಬಂದ ದಿಕ್ಕಿನ ಕಡೆಗೆ ಧಾವಿಸುತ್ತ ಹೋಗಿ, ಕಡೆಯ ಬಾಗಿಲಲ್ಲಿ ನಿಂತು ನೋಡಿದನು; ಅಲ್ಲಿಯ ದೀಪದ ಬೆಳಕಿನಲ್ಲಿ ಅವನಿಗೆ ಏನು ಕಾಣಿಸಿತೋ, ಅದರಿಂದ ಅವನ ಹೌ ಹಾರಿ ಹೋಯಿತು!

ಬ್ಲೇಕನು ನೋಡಿದಾಗ ಒಬ್ಬ ವಿಕಟಾಕಾರದ ದಸ್ಯು ಸದೃಶ ಚೀನೀಯನು ಸ್ಮಿತ್ಥನನ್ನು ಆ ಹೊರ ಮಾಳಿಗೆಯ ಮೇಲೆ ಕೆಡಹಿ, ಆತನ ಎದೆಯ ಮೇಲೆ ಕುಳಿತು ಕುತ್ತಿಗೆ ಹಿಚುಕುತ್ತಿದ್ದನು. ಸ್ಮಿತ್ಥನು ತನ್ನ ಎರಡೂ ಕೈಗಳಿಂದ ಅವನನ್ನು ತನ್ನ ಎದೆಯ ಮೇಲಿಂದ ದೂಡುವ ಪ್ರಯತ್ನ ನಡಿಸಿದ್ದನು; ಆದರೆ

ಆತನ ಪ್ರಯತ್ನಕ್ಕೆ ಕೊಂಚವೂ ಯಶ ಬರುತ್ತಿರಲಿಲ್ಲ. ಬಳಿಕ ಆ ಚೀನಿಗನು ತನ್ನ ಎಡಗೈಯೊಂದರಿಂದಲೇ ಸ್ಮಿತ್ಥನ ಕುತ್ತಿಗೆಯನ್ನು ಹಿಚುಕಿ, ಆ ಶೀಘ್ರ ಕೋಪಿಯು ಬಲಗೈಯಿಂದ ಒಂದು ಹದನಾದ 'ಕಿರೀಚ' ಎಂಬ ಆಯುಧವನ್ನು ತಕ್ಕೊಂಡು, ಮೇಲಕ್ಕೆತ್ತಿದನು. ಉತ್ತರ ಕ್ಷಣದಲ್ಲಿಯೇ ಆ ಹದನಾದ ಆಯುಧವು ಸ್ಮಿತ್ಥನ ಹಣೆಯಲ್ಲಿ ನಟ್ಟು ಅವನನ್ನು ಪರಲೋಕಕ್ಕಟ್ಟುವದರಲ್ಲಿತ್ತು.

ಬ್ಲೇಕನು ಒಮ್ಮೆಲೆ ಜಿಗಿದು, ಸ್ಮಿತ್ಥನನ್ನು ಹತ್ತಿಕ್ಕಿ ಹಿಡಿದಿದ್ದ ಆ ಚೀನಿಗನ ಹಿಂಬದಿಗೆ ಬಂದು, ಆತನ ಆ ಎತ್ತಿದ ಬಲಗೈಯನ್ನು ಮೇಲಿಂದ ಮೇಲೆಯೇ ಹಿಡಿದನು. ಬ್ಲೇಕನ ಇದೆಲ್ಲ ಕೃತಿಯು ಕಣ್ಣು ಮುಚ್ಚಿ ಕಣ್ಣು ತೆರೆಯುವಷ್ಟರಲ್ಲಿ ಆಯಿತೆಂದರೆ ಸಹಿತವಾಯಿತು. ಬ್ಲೇಕನು ಎಲ್ಲಕ್ಕೂ ಮೊದಲು ಆ ದಸ್ಯುವಿನ ಕೈಯೊಳಗಿನ ಆ ಕಿರೀಚವನ್ನು ಕಸಿದುಕೊಂಡನು. ಆ ಕೂಡಲೆ ಆ ದಸ್ಯುವು ವಿಸ್ಮಯಪೂರ್ವಕವಾಗಿ ಬ್ಲೇಕನ ಕಡೆಗೊಮ್ಮೆ ಹುಳು ಹುಳು ಎಂದು ನೋಡಿದವನೇ ಸಿಟ್ಟಿನಿಂದ ಗರ್ಜಿಸಿದನು, ಹಾಗು ಅರಕ್ಷಣದಲ್ಲಿ ಸ್ಮಿತ್ಥನ ಎದೆಯ ಮೇಲಿಂದ ಎದ್ದವನೇ ಬ್ಲೇಕನೆದುರಿಗೆ ಹೋಗಿ ನಿಂತುಕೊಂಡನು. ಅವನು ತನ್ನೆದುರಿಗೆ ಬಂದು ನಿಲ್ಲುವಷ್ಟರಲ್ಲಿಯೇ ಬ್ಲೇಕನು ಆತನ ಅಂಡುಮೂಗಿನ ಮೇಲೊಮ್ಮೆ ಚೆನ್ನಾಗಿ ಗುದ್ದಿದನು. ಆ ಗುದ್ದಿನ ಹೊಡತವನ್ನು ತಾಳಲಾರದೆ ಆ ದಸ್ಯುವು ಬವಳಿ ಬಂದು ನೆಲಕ್ಕೆ ಬಿದ್ದನು. ಹಾಗೆ ಅವನು ನಿಶ್ಚೇಷ್ಟಿತನಾಗಿ ಬಿದ್ದುಕೊಂಡರೂ ಬ್ಲೇಕನು ಅವನನ್ನು ಹಾಗೆಯೇ ಬಿಡಲಿಲ್ಲ. ಆತನು ಇಷ್ಟರಲ್ಲೇ ಮೂರ್ಛೆ ತಿಳಿದೆದ್ದು ಬಂದು ತಮ್ಮನ್ನು ಮತ್ತೆ ಆಕ್ರಮಿಸಬಹುದೆಂಬ ಅಂಜಿಕೆಯಿಂದ ಆತನ ಹಣೆಗೆ ಮತ್ತೊಮ್ಮೆ ಬಲವಾಗಿ ಗುದ್ದಿದನು. ಈ ಎರಡನೇ ಹೊಡತವಂತೂ ಆತನು ಚೇತನಾಹೀನನಾಗಿ, [illegible] ಜಡವಸ್ತುವಿನಂತೆ ಸುಮ್ಮನೆ ಬಿದ್ದುಬಿಟ್ಟನು.

ಆ ಮೇಲೆ ಬ್ಲೇಕನು ಸ್ಮಿತ್ಥನ ಕಡೆಗೆ ಹೊರಳಿ, ಒಳ್ಳೇ ಸಿಟ್ಟಿನಿಂದ: ನಿನ್ನ ಮೂರ್ಖತನಕ್ಕಾಗಿ ಇಂದು ನೀನು ನಿಶ್ಚಯವಾಗಿಯೂ ಸಾಯುತ್ತಿದ್ದೆ. ಮತ್ತೆ ಮತ್ತೆ ಪ್ರಾಣಾಂತವಾದ ಆಪತ್ತಿಗೆ ಗುರಿಯಾದರೂ ನಿನಗೆ ಇನ್ನೂ ಚೆನ್ನಾಗಿ ಶಿಕ್ಷೆಯಾಗಲಿಲ್ಲ. ಎಂದು ನುಡಿದನು.

ಸ್ಮಿತ್ಥನು ಬಿದ್ದ ಸ್ಥಳದಿಂದೆದ್ದು ನಿಂತು ವಿಸ್ಮಯಭರದಿಂದ:—ಯಾರು, ಒಡೆಯರೇನು! ನೀವು ಇಲ್ಲಿಗೆ ಹೇಗೆ ಬಂದು ನನ್ನನ್ನು ಪಾರು ಮಾಡುವಿರೆಂಬದರ ಕಲ್ಪನೆ................

ಬ್ಲೇಕನು ಆತನನ್ನು ಹೆಚ್ಚು ಮಾತಾಡಗೊಡದೆ:—ನೀನು ಸುದೈವಿಯೆಂದೇ ಈ ಗುಪ್ತ ಪಥದಿಂದ ಈ ಭಯಾನಕ ಸ್ಥಳದಲ್ಲಿ ನಾನು ನಿನ್ನನ್ನು

ಸರಿಸಿ ಬಂದದ್ದು. ನೀನು ಈ ಹೊರ ಮಾಳಿಗೆಯ ಮೇಲೆ ಬರುವ ಅವಶ್ಯಕತೆ ಯೇನಿದ್ದಿತು?

"ಸ್ಮಿತ್ಥ:—ಒಡೆಯರೆ, ನಾನು ಆ ಮೇರೀ ವೆಭಾನಳನ್ನು ಕಾಣ ಬಂದಿದ್ದೆನು.

ಒಳ್ಳೇ ಆಶ್ಚರ್ಯ ಭರದಿಂದ ಬ್ಲೇಕನು:—ಮೇರೀವೆಭಾನಳೇ! ಇದೇನು ಹುಚ್ಚನ ಹಾಗೆ ನುಡಿಯುತ್ತಿರುವೆ? ಅವಳು ಇಲ್ಲೆಲ್ಲಿ ಕಾಣಬೇಕು?

ಸ್ಮಿತ್ಥ:—ಒಡೆಯರೇ, ನನ್ನ ಮಾತನ್ನು ಸಂಪೂರ್ಣವಾಗಿ ಕೇಳಿಕೊಳ್ಳಿರಿ. ನಾನು ಅವಳನ್ನು ಕೆಲ ಕ್ಷಣಗಳ ಮುಂಚೆ ಕಂಡಿರುತ್ತೇನೆ. ಅಗೋ, ಆ ನೆರೆ ಮನೆಯ ಅಟ್ಟದಲ್ಲೊಂದು ಕೋಣೆ ಕಾಣಿಸುವದಷ್ಟೇ? ಅದೇ ಕೋಣೆಯಲ್ಲಿ ಆ ಮೇರಿಯನ್ನು ಸೆರೆಯಿರಿಸಿರುತ್ತಾರೆ. ನಾನು ನನ್ನಲ್ಲಿಯ ಹಗ್ಗದ ಸಹಾಯ ದಿಂದ ಆ ಕೋಣೆಯ ಕಿಟಿಕಿಗೆ ಹೋಗಿ, ಅವಳೊಡನೆ ಮಾತು-ಕಥೆ..........

ಬ್ಲೇಕನು ಸ್ಮಿತ್ಥನನ್ನು ಹೆಚ್ಚು ಮಾತಾಡಗೊಡದೆ:—ಬಾಯಿ ಮುಚ್ಚು; ಯಾರೋ, ಸಿಳ್ಳು ಹಾಕಿದಂತೆ ಕೇಳಿಸಲಿಲ್ಲವೆ?

ಸ್ಮಿತ್ಥ:—ಖಂಡಿತವಾಗಿಯೂ ಸಿಳ್ಳಿನ ದನಿಯು ಕೇಳಿಸಿತು. ಸಮೀಪದ ಯಾವುದೊಂದು ಅಟ್ಟದ ಮೇಲಿಂದ ಯಾರೋ ನಮ್ಮನ್ನು ಕಂಡಿರಬಹುದಾಗಿದೆ. ಇಲ್ಲಿಯ ಚೀನೀಯ ಪುಂಡರೆಲ್ಲರೂ ಇಷ್ಟರಲ್ಲಿ ಇಲ್ಲಿಗೆ ಬಂದು ನಮ್ಮನ್ನು ಕೊಲೆಗೆಯ್ಯದಿರಲಾರರು.

ಪರಕ್ಷಣದಲ್ಲಿಯೇ ನಾಲ್ಕೆಂಟು ಕಡೆಯಿಂದ ಸಿಳ್ಳಿನ ಧ್ವನಿಯಾಗಹತ್ತಿತು. ಆ ಮೇಲೆ ಬ್ಲೇಕ-ಸ್ಮಿತ್ಥರಿದ್ದ ಅಟ್ಟಕ್ಕೆ ಎಷ್ಟು ಮನೆಗಳು ಹೊಂದಿದ್ದವೋ ಆ ಎಲ್ಲ ಮನೆಗಳಿಂದಲೂ ಸಣ್ಣ-ದೊಡ್ಡ ಕೂಗಿನ ಧ್ವನಿಗಳೆದ್ದು, ಆ ಶಾಂತವಾದ ನಿಶೆಯ ನಿಸ್ತಬ್ಧತೆಯನ್ನು ಭಂಗಗೊಳಿಸಿದವು. ತಾನು ಸ್ಮಿತ್ಥನನ್ನು ಆಕ್ರಮಿಸಿದ್ದ ಆ ಚೀನೀಯ ಪುಂಡನನ್ನು ನೆಲಕ್ಕೆ ಕೆಡಹಿದ್ದನ್ನು ಸಮೀಪದ ಯಾವುದೊಂದು ಮನೆಯ ಮೇಲಿನ ಚೀನಿಯನೊಬ್ಬನು ಕಂಡು, ತಮ್ಮವರನ್ನು ಸಂಹರಿಸುವದಕ್ಕಾಗಿ ತಮ್ಮ ದಳವನ್ನೆಲ್ಲ ಕೂಡಿಸುತ್ತಿರುವನೆಂಬದು ಬ್ಲೇಕನಿಗೆ ತಿಳಿಯಿತು. ಗಾಯಗೊಂಡಿದ್ದ ಆ ಚೀನೀಯನು ಇದು ವರೆಗೂ ಮೂರ್ಛೆ ತಿಳಿದಿದ್ದಿರಲಿಲ್ಲ.

ಆಗ ಸ್ಮಿತ್ಥನು ಅಂಜಿ, ಬ್ಲೇಕನ ಮುಖದ ಕಡೆಗೆ ನೋಡುತ್ತ:—ಒಡೆಯರೇ, ನನ್ನ ಪರಮ ಮೂರ್ಖತನಕ್ಕಾಗಿಯೇ ಈ ರಣಕಂದನವೆದ್ದಿದೆ! ಆತ್ಮ ರಕ್ಷಣೆಗೆ ನಮಗಿನ್ನು ಯಾವ ಉಪಾಯವೂ ಉಳಿದಿಲ್ಲ; ಇಷ್ಟು ದಿನಗಳನಂತರ ಕಡೆಗೆ ಈ ಚೀನೀಯ ಪುಂಡರಿಂದಲೇ ನಮಗೆ ಮರಣವುಂಟಾದಂತಾಯಿತು.

ಬ್ಲೇಕ:—ಇಲ್ಲಿಂದ ಓಡಿಹೋಗಲಿಕ್ಕೆ ಯಾವ ಉಪಾಯವೂ ಹೊಳೆಯದು. ಈ ಚಾಯ್ನಾ ಫೀಲ್ಡಿನ ಸಿಂಹನ ಗವಿಯು ಇಲ್ಲಿಗೆ ಸಮೀಪವೇ ಇರಬಹುದಾಗಿದೆ. ಇಲ್ಲಿಯ ಸಮಸ್ತ ರಹಿವಾಸಿಗಳು ( ಆತನ ಅನುಚರರೇ ಆಗಿರುತ್ತಾರೆ. ಅವರೆಲ್ಲರೂ ಇಷ್ಟರಲ್ಲೇ ಬಂದು ನಮ್ಮನ್ನು ಸುತ್ತುಗಟ್ಟುವರು.

ಸ್ಮಿತ್ಥ:—ನಾವು ಯಾವ ದಾರಿಯಿಂದ ಬಂದಿರುವೆವೋ, ಅಲ್ಲಿಂದಲೇ ಮರಳಿ ಹೋಗಲಿಕ್ಕೆ ಪ್ರತ್ಯವಾಯವೇನು?

ಬ್ಲೇಕ:—ಅದು ತೀರ ಅಸಂಭವವು. ದಸ್ಯುಗಳೆಲ್ಲರೂ ಇಷ್ಟರಲ್ಲಿ ಈ ಮಾಳಿಗೆಗೆ ಬಂದೇ ಬಿಡುವರು. ಅವರನ್ನು ತಡೆಯಲಿಕ್ಕೆ ನಾವಿಬ್ಬರೇ ಸಮರ್ಥರಾಗಲಾರೆವು. ಇಲ್ಲ, ತಮ್ಮಾ, ಇನ್ನು ಆತ್ಮರಕ್ಷಣೆಯ ಆಶೆಯೇ ನಮಗುಳಿದಿರುವದಿಲ್ಲ; ಆದರೆ ವೈರಿಗಳ ಕೈಯಲ್ಲಿ ನಾವಾಗಿ ಸಿಕ್ಕು ಸಾಯುವದು ವಿಹಿತವಲ್ಲ ಸ್ಮಿತ್ಥಾ, ಕೆಲಹೊತ್ತಿನ ಮುಂಜೆ ನೀನು ಆ ಅಂಗಡಿಯೊಳಗಿಂದ ಕೊಂಡು ತಂದ ನೂಲಿನ ಹಗ್ಗವನ್ನೆಲ್ಲಿ ಇಟ್ಟಿರುತ್ತೀ?

ಸ್ಮಿತ್ಥ:–ಒಡೆಯರೇ, ಅದನ್ನು ನನ್ನ ಟೊಂಕಕ್ಕೇ ಸುತ್ತಿಕೊಂಡಿರುತ್ತೇನೆ.

ಬ್ಲೇಕ:—ಸ್ಮಿತ್ಥಾ, ಅದರ ಸಹಾಯದಿಂದಾದರೂ ಜೀವ ಸಹಿತ ಪಾರಾಗುವೆವೇನೆಂಬದನ್ನು ನೋಡುವಾ ನಡೆ!

ಸ್ಮಿತ್ಥ:--ಒಡೆಯರೇ, ತಮ್ಮ ಇಂಗಿತವು ಗೊತ್ತಾಯಿತು; ಆದರೆ ಅದು ಅಷ್ಟೊಂದು ಉದ್ದವಾಗಿಲ್ಲ. ಅದು ಇಲ್ಲಿಂದ ನೆಲದ ವರೆಗೆ ಮುಟ್ಟಲಾರದು.

ಬ್ಲೇಕ:– ಎಷ್ಟು ಕೆಳಗೆ ಹೋಗಲು ಶಕ್ಯವೋ, ಅಷ್ಟು ಕೆಳಗೆ ಹೋ-ಗೋಣ. ಇಲ್ಲಿಂದ ಹಾರಿ ಒಂದು ಮಾಳಿಗೆಯಿಂದ ಇನ್ನೊಂದಕ್ಕೆ, ಇನ್ನೊಂದರಿಂದ ಮತ್ತೊಂದಕ್ಕೆ ಹೀಗೆ ಹೋಗೋಣ. ನಡೆ, ಅತ್ತ ಓಡೋಣ ನಡೆ.

ಚಾಯ್ನಾ ಫೀಲ್ಡಿನೊಳಗಿನ ಭಿನ್ನ ಭಿನ್ನ ಮಾಳಿಗೆಗಳ ನಡುವಿನ ಅಂತರವು ಅತ್ಯಲ್ಪವಾಗಿತ್ತು. ಒಂದು ಮಾಳಿಗೆಯನ್ನೇರಿದರೆ ಆ ಇಡಿ ಚೀನೀ ಹಳ್ಳಿಯನ್ನು ಮಾಳಿಗೆಯ ಮೇಲಿಂದಲೇ ಸುತ್ತಿಕೊಂಡು ಬರುವ ಹಾಗಿತ್ತು. ಬ್ಲೇಕನು ಬೇರೆ ಬೇರೆ ಮಾಳಿಗೆಗಳ ಮೇಲಿಂದ ಓಡತೊಡಗಿದನು. ಸ್ಮಿತ್ಥನೂ ಅವನ ಹಿಂದಿಂದೆ ಓಡಿದನು.

ಎಷ್ಟೋ ಮನೆಯ ಮಾಳಿಗೆಗಳ ಮೇಲಿಂದ ಓಡಿ ಓಡಿ ಕಡೆಗೆ ಅವರೊಂದು ಸಂದಿಯೋಣಿಯ ಸಮೀಪಕ್ಕೆ ಬಂದರು. ಆ ಕೆಳಗಿನ ಓಣಿಯೇ ಬ್ಲ್ಯಾಕ ಮನ್ಸ್ ಸ್ಟ್ರೀಟಾಗಿತ್ತು. ಅಲ್ಲಿಗೆ ಹೋದ ಕೂಡಲೆ ಬ್ಲೇಕನು ಸ್ಮಿತ್ಥನ ಬಳಿಯ ಹಗ್ಗವನ್ನು ಇಸಕೊಂಡು, ಅದರದೊಂದು ತುದಿಯನ್ನು ಅಲ್ಲಿಯ

ದೊಂದು ಕಿಟಕಿಯ ಗಜಕ್ಕೆ ಕಟ್ಟಿದನು; ಹಾಗು ಬೇರೆ ತುದಿಯನ್ನು ಕೆಳಗಿನ ಓಣಿಯಲ್ಲಿ ಇಳಿಬಿಟ್ಟನು. ಬಳಿಕ ಅವನು ಸ್ಮಿತ್ಥನನ್ನು ಕುರಿತು:—ತವ್ಮಾ, ಈ ಹಗ್ಗವನ್ನು ಹಿಡಿದುಕೊಂಡು ನೀನು ಮೊದಲು ಇಳಿದು ಹೋಗು; ಬಳಿಕ ನಾನಿಳಿಯುತ್ತೇನೆ. ಇಬ್ಬರೂ ಒಮ್ಮೆಲೆ ಇಳಿಯಬೇಕೆಂದರೆ, ಈ ಹಗ್ಗವು ತಡೆಯಲಾರದು, ಎಂದನು.

ದುರ್ವ್ಯಕ್ತರಾದ ಚೀನೀಯ ಪುಂಡರು ಬಾಯಿಗೆ ಬಂದಂತೆ ಒದರುತ್ತ, ಇವರನ್ನು ಹಿಡಿಯಲಿಕ್ಕೆ ಇವರ ಹಿಂದಿಂದೆ ಓಡುತ್ತ ಬರುತ್ತಿದ್ದರು. ಅದನ್ನು ಕಂಡು ಸ್ಮಿತ್ತನು:—ನಾನು ಇಳಿದು ಹೋಗುವಷ್ಟರಲ್ಲಿ ಆ ವೈರಿದಲವು ಇಲ್ಲಿಗೆ ಬಂದೇ ಬಿಡುವದು; ಹಾಗು ತಮ್ಮನ್ನು ಹಿಡಿದು ಕೊಲ್ಲುವದು. ಒಡೆಯರೇ, ತಮ್ಮ ಜೀವನವು ಅಮೂಲ್ಯವಾದದ್ದು; ಆದುದರಿಂದ ತಾವೇ ಮೊದಲು ಇಳಿದು ಹೋಗಿರಿ, ಎನ್ನಲು,

ಬ್ಲೇಕ:—ಮೂರ್ಖಾ, ಇದಿರು ವಾದಿಸುತ್ತ ಕಾಲ ಕಳೆಯಬೇಡ. ನಾನು ಹೇಳಿದಷ್ಟನ್ನು ಮಾಡು. ನೀನು ನನಗೋಸ್ಕರ ಚಿಂತಿಸುವ ಕಾರಣವಿಲ್ಲ. ಹೂಂ, ಇಳಿ ಬೇಗನೆ. ಅಗೋ, ಅವರು ಬಂದೇ ಬಿಟ್ಟರು!

ಸ್ಮಿತ್ಥನು ಮಾತಿನಲ್ಲಿ ಮತ್ತೆ ವೇಳೆಗಳೆಯಲಿಲ್ಲ. ಅವನು ಹಗ್ಗ ಹಿಡಿದು ಮಾಳಿಗೆಯ ಲೋವಿಯಿಂದ ಒಮ್ಮೆಲೆ ಹಾರಿಕೊಂಡನು; ಹಾಗು ಕಲಿಸಿದ ಮಂಗನಂತೆ ಸರಸರನೆ ಇಳಿದುಬಿಟ್ಟನು. ಹಗ್ಗದ ತುದಿಯಿಂದ ನೆಲವು ೬-೭ ಮೊಳಗಳಿಗಿಂತ ಹೆಚ್ಚು ದೂರವಿರಲಿಲ್ಲ. ಅವನು ಅಲ್ಲಿಂದ ಝಪ್ಪನೆ ನೆಲಕ್ಕೆ ಹಾರಿಕೊಂಡವನೇ ಸಿಳ್ಳು ಹಾಕಿದನು. ಆ ಕೂಡಲೆ ಬ್ಲೇಕನು ಆ ಹಗ್ಗವನ್ನು ಹಿಡಿದು ಕೆಳಗಿಳಿಯ ಹತ್ತಿದನು. ಇಷ್ಟರಲ್ಲಿ ಹಿಂದಿನಿಂದ ಬರುತ್ತಿದ್ದ ಚೀನೀಯ ವೈರಿಗಳು ಅದೇ ಮಾಳಿಗೆಗೆ ಬಂದೇ ಬಿಟ್ಟರು. ತಮ್ಮ ಶತ್ರುಗಳಿಬ್ಬರೂ ಯಾವ ಕೌಶಲ್ಯದಿಂದಲೋ ಪಾರಾಗಿ ಹೋದರೆಂಬದನ್ನು ತಿಳಿದು ಅವರೆಲ್ಲರೂ ಕೋಲಾಹಲವೆಬ್ಬಿಸಿದರು. ಅವರಲ್ಲೊಬ್ಬನು ಅತ್ಯವಸರದಿಂದ ಬಂದು ಅಲ್ಲಿಯ ಕಂಬಿಗೆ ಕಟ್ಟಿದ್ದ ಹಗ್ಗದ ಆ ತುದಿಯನ್ನು ತನ್ನಲ್ಲಿಯ ಚೂರಿಯಿಂದ ಕತ್ತರಿಸಿ ಬಿಟ್ಟನು. ಅಷ್ಟರೊಳಗೇ ಬ್ಲೇಕನು ನೆಲಕ್ಕೆ ತಲುಪಿದ್ದನು. ಆಗ ಆ ಹರಿದ ಹಗ್ಗವೂ ಬಂದು ಆತನ ತಲೆಯ ಮೇಲೆ ಬಿದ್ದೇ ಬಿಟ್ಟಿತು. ಕೂಡಲೆ ಅವರೀರ್ವರೂ ಆ ಓಣಿಯೊಳಗಿಂದ ಭರದಿಂದ ಓಡಹತ್ತಲು, ಮಾಳಿಗೆಯ ಮೇಲೆ ನಿಂತಿದ್ದ ಇನ್ನೊಬ್ಬ ದಸ್ಯುವು ತನ್ನ ಕೈಯೊಳಗಿನ ತೀಕ್ಷ್ಣವಾದ ಚೂರಿಯನ್ನು ಬ್ಲೇಕನ ತಲೆಗೆ ಗುರಿಹಿಡಿದು ಚೆಲ್ಲಿದನು! ಆದರೆ ಗುರಿ ತಪ್ಪಿದ್ದರಿಂದ ಅದು ಆ ಓಣಿಯೊಳಗಿನದೊಂದು ಬಂಡೆಗಲ್ಲಿಗೆ ಅಪ್ಪಳಿಸಿ ಚೂರು ಚೂರಾಗಿ ಬಿಟ್ಟಿತು.

ತುಸ ದೂರ ಹೋದ ಬಳಿಕ ಬ್ಲೇಕನು ಸ್ಮಿತ್ಥನನ್ನು ಕುರಿತು:—ತಮ್ಮಾ, ಇಂದು ನಮ್ಮಗಳ ಪುನರ್ಜನ್ಮವೇ ಆದಂತಾಯಿತು. ಈ ದಾರಿಯಿಂದ ಅವರು ಇನ್ನೂ ನಮ್ಮನ್ನನುಸರಿಸಿ ಬರಬಹುದಾಗಿದೆ; ಆದುದರಿಂದ ನಿಲ್ಲಬೇಡ; ಇನ್ನಿಷ್ಟು ಓಡೋಣ ನಡೆ, ಎಂದನು.

ಸ್ಮಿತ್ಥನು ಓಡ ಓಡುತ್ತ ಕೇಳುತ್ತಾನೆ:—ಒಡೆಯರೇ, ಇದಾವ ಓಣಿಯು?

ಬ್ಲೇಕ:—ತಮ್ಮಾ, ಇದಕ್ಕೆ ಬ್ಲ್ಯಾಕ ಮಂಕ್ಸ ಸ್ಟ್ರೀಟ ಎಂದೆನ್ನುತ್ತಾರೆ. ಎದುರಿಗಿನ ಎರಡು ಗಲ್ಲಿಗಳನ್ನು ದಾಟಿದೆವೆಂದರೆ, ನಾವು ರಾಜಮಾರ್ಗಕ್ಕೆ ತಲುಪುತ್ತೇವೆ.

ಅವರು ಓಡುತ್ತಿದ್ದ ಆ ಓಣಿಯು ಬಹು ಇಕ್ಕಟ್ಟಿನದಾಗಿತ್ತು. ಓಣಿಯ ಎರಡೂ ಮಗ್ಗುಲಲ್ಲಿ ಬಹು ಎತ್ತರದ ಮೇಲಂತಸ್ತಿನ ಮನೆಗಳಿದ್ದವು. ಅವರು ಆ ಸಂದಿಯೋಣಿಯನ್ನು ದಾಟಿ ತುಸ ಮುಂದಕ್ಕೆ ಹೋಗುವಷ್ಟರಲ್ಲಿ ಇದುವರೆಗೆ ಮಾಳಿಗೆಯ ಮೇಲಿಂದಲೇ ಬರುತ್ತಿದ್ದ ಆ ಚೀನೀಯ ವೈರಿದಲವು ದಾರಿಗೆ ಇಳಿದು ಇವರನ್ನನುಸರಿಸಹತ್ತಿತ್ತು.

ಬ್ಲೇಕ-ಸ್ಮಿತ್ಥರಿಗೆ ತಮ್ಮ ಹಿಂಬದಿಯ ಆ ಕೂಗಾಟ-ಚೀರಾಟವು ಕೇಳಿಸಿಯೇ ಕೇಳಿಸುತ್ತಿತ್ತು. ಅವರು ಓಡುತ್ತೋಡುತ್ತ ಎದುರಿಗಿನ ಒಂದು ಗಲ್ಲಿಯನ್ನಂತೂ ದಾಟಿದರು. ಇನ್ನೊಂದು ಗಲ್ಲಿಯ ಸಮೀಪಕ್ಕೆ ನಡೆದಿರಲು, ಎದುರಿಗೆ ೨೫ ೩೦ ಮೊಳಗಳ ಅಂತರದಲ್ಲಿಯೇ ಎಷ್ಟೋ ಜನ ಚೀನೀಯ ಪುಂಡರ ಭೈರವ ಗರ್ಜನೆಯನ್ನು ಕೇಳಿ, ಅವರಿಬ್ಬರೂ ಗಕ್ಕನೆ ನಿಂತೇ ಬಿಟ್ಟರು! ಹಿಂದೆ ಶತ್ರುಗಳು! ಮುಂದೆ ಶತ್ರುಗಳು!! ಓಣಿಯ ಎರಡೂ ಬದಿಗೆ ಶತ್ರುದಳದ ಎತ್ತರವಾದ ಮನೆಗಳು!!! ಹೀಗಾಗಿ ಓಡಿ ಹೋಗಲಿಕ್ಕೆ ಅವರಿಗೆ ಮಾರ್ಗವೇ ಉಳಿಯಲಿಲ್ಲ!

ಆಗ ಸ್ಮಿತ್ಥನು ವ್ಯಾಕುಲಚಿತ್ತದಿಂದ:—ಒಡೆಯರೇ, ಎಷ್ಟೋ ಚೀನೀಯ ಪುಂಡರು ಎದುರಿಗೆ ಬಂದು ನಮ್ಮನ್ನು ಅಡ್ಡಗಟ್ಟುತ್ತಲಿರುವರು. ಬಲೆಯೊಳಗೆ ಸಿಕ್ಕ ಇಲಿಯಂತೆ ನಮ್ಮ ಗತಿಯಾಯಿತು! ಎಂದಂದನು.

ಬ್ಲೇಕ:—ಇದೊಳ್ಳೇ ಘೋರ ಸಂಕಟವು! ಓಡಿ ಹೋಗಲಿಕ್ಕೆ ಮಾರ್ಗವೇ ಉಳಿಯಲಿಲ್ಲ. ಹಿಂದಿನಿಂದಲೂ ಮುಂದಿನಿಂದಲೂ ಭರದಿಂದ ಬರುತ್ತಿರುವ ಶತ್ರುಪಕ್ಷದವರು ನಮ್ಮನ್ನು ಇಷ್ಟರಲ್ಲೇ ಆಕ್ರಮಿಸುವರು. ನಾವು ಇಬ್ಬರೆಂದರೆ ಇಬ್ಬರೇ! ನಮ್ಮಿಬ್ಬರಿಂದ ೩ ನೂರಾರು ಜನ ವೈರಿದಲವನ್ನು ಬೊಗ್ಗುಬಡಿದು ಜಯ ದೊರಕಿಸುವ ಬಗೆ ಹೇಗೆ? ಆದರೆ ಜೀವದ ಆಶೆಯನ್ನು ತೊರೆದು,

ಕೈಲಾಗದವರಂತೆ ಸುಮ್ಮನೆ ಕುಳಿತರೆ ನಡೆಯಲಾರದು. ಪಕ್ಕದೊಳಗಿನ ಈ ಮನೆಯ ಬಾಗಿಲವು ಮುಚ್ಚಲ್ಪಟ್ಟಂತೆ ತೋರುತ್ತದೆ. ಬಾಗಿಲ ಮುರಿದು ಈ ಮನೆಯೊಳಕ್ಕೆ ಹೋಗುವಾ ನಡ! ಎಂದಂದನು.

ಅವರು ಹೋಗುತ್ತಿದ್ದ ಆ ಓಣಿಯ ಮಗ್ಗಲಿಗೇ ಒಂದು ಮೇಲಟ್ಟದ ಮನೆಯ ಬಾಗಿಲವಿದ್ದಿತು. ಆ ಬಾಗಿಲವು ಒಳಗಿನಿಂದ ಭದ್ರವಾಗಿ ಇಕ್ಕಲ್ಪಟ್ಟಿತ್ತು; ಆದರೆ ಅದಾವ ಕಾರಣದಿಂದಲೋ ಹೇಳಲಶಕ್ಯವು, ಅದು ಒಮ್ಮೆಲೆ ತೆರೆದು ಬಿಟ್ಟಿತು! ಯಾಕಂದರೆ, ಅದೇ ಕಾಲಕ್ಕೆ ಆ ಮನೆಯೊಳಗಿನವನೊಬ್ಬ ಚೀನೀಯನು ಆ ಬಾಗಿಲು ತೆರೆದು ಹೊರಗೆ ಓಣಿಗೆ ಬರುತ್ತಿದ್ದನು.

ಆ ಚೀನಿಗನು ಬಾಗಿಲು ತೆರೆಯುತ್ತಲೆ ಓಣಿಯೊಳಗಿನ ಲಾಂದರದ ಬೆಳಕಿನಲ್ಲಿ ಬ್ಲೇಕ-ಸ್ಮಿತ್ಥರ ಮುಖಗಳು ಇವನಿಗೆ ಕಾಣಿಸಿಕೊಂಡವು. ಅವನು ಇವರನ್ನು ತೀಕ್ಷ್ಣ ದೃಷ್ಟಿಯಿಂದ ಆಪಾದಮಸ್ತಕದ ವರೆಗೆ ನಿರೀಕ್ಷಿಸಿ:— ನೀವು ಒಳ್ಳೇ ಗಂಡಾಂತರಕ್ಕೊಳಪಟ್ಟಿರುತ್ತೀರಿ. ಅರಿಗಳು ನಿಮ್ಮನ್ನು ಕೊಲ್ಲಲಿಕ್ಕೆ ಒಂತ್ತಲಿರುವರು; ಆದರೆ ಅಂಜುವ ಕಾರಣವಿಲ್ಲ. ನಾನು ನಿಮ್ಮನ್ನು ಕಾಪಾಡುವನು. ನೀವೀರ್ವರೂ ಬೇಗನೆ ಈ ಮನೆಯೊಳಗೆ ನಡಯಿರಿ, ಎಂದು ಹೇಳಿದನು.

ಬ್ಲೇಕನು ತನ್ನ ಪೂರ್ವವಯಸ್ಸಿನಲ್ಲಿ ಚೀನದೇಶದ ಕ್ಯಾಂಟನ್ ನಗರದ ಚೀನಾಪಕ್ಕಿಯಲ್ಲಿ ಇಂಥ ಪ್ರಾಣಾಂತಿಕ ಗಂಡಾಂತರಕ್ಕೊಮ್ಮೆ ಸಿಕ್ಕಾಗ ಅಲ್ಲಿದ್ದ ಚೀನಿಗರ ಪೈಕಿ ಡಿಘನಟನು ತನ್ನನ್ನು ತನ್ನ ಮನೆಯೊಳಕ್ಕೆ ಕರದಾಗ ಆತನ ಕಡೆಗೆ ಟಕಮಕನೆಂದು ನೋಡುತ್ತ ಕ್ಷಣಕಾಲದ ವರೆಗೆ ದಾರಿಯಲ್ಲೇ ಹೇಗೆ ನಿಂತುಕೊಂಡಿದ್ದನೋ, ಈಗಲೂ ಹಾಗೆಯೇ ನೋಡುತ್ತ ನಿಂತುಕೊಂಡನು.

ಬ್ಲೇಕನ ಮನಸ್ಸಿನ ಅನುಮಾನವನ್ನು ತಿಳಿದು ಆ ಚೀನಿಗನು ಅನ್ನುತ್ತಾನೆ: "ನಾನು ನಿಮ್ಮಗಳ ಶತ್ರುವಲ್ಲ; ಮಿತ್ರನು. ನೀವು ನನ್ನೀ ಮಾತನ್ನು ನಂಬದಿರಲಾರಿರಿ."

ಇನ್ನು ಈ ಓಣಿಯಲ್ಲೇ ಅನುಮಾನಿಸುತ್ತ ನಿಲ್ಲುವದು ಸರಿಯಲ್ಲವೆಂದು ಯೋಚಿಸಿ, ಬ್ಲೇಕನು ಸ್ಮಿತ್ಥನೊಡನೆ ಆ ಮನೆಯನ್ನು ಹೊಕ್ಕನು. ಕೂಡಲೆ ಆ ಚೀನಿಗನು ಒಳಗಿನಿಂದ ಆ ಕದವನ್ನು ಭದ್ರವಾಗಿ ಇಕ್ಕಿಕೊಂಡು ನಡೆದನು; ಹಾಗು ತನ್ನ ಹಿಂದೆಯೇ ಬರಲಿಕ್ಕೆ ಅವರಿಗೆ ತಿಳಿಸಿದನು.

ಅಷ್ಟರಲ್ಲಿ ಬ್ಲೇಕನು ತನ್ನ ಜೇಬಿನೊಳಗಿನ ಪಿಸ್ತೂಲನ್ನು ಹೊರದೆಗೆದು: "ವಿಶ್ವಾಸಘಾತವ ಮಾಡಿದೆಯೆಂದರೆ ನಿನ್ನನ್ನು ಗುಂಡು ಹಾಕಿ ಕೊಲ್ಲುವೆನು. ನಾವು ಸಾಯುವ ಪ್ರಸಂಗವೇ ಬಂದರೆ, ನಿನ್ನನ್ನು ಕೊಲ್ಲದೆ ಸಾಯಲಾರೆವು.

ನಿನ್ನ ಸಹಾಯದಿಂದ ಒಂದುವೇಳೆ ನಾವು ಈ ಗಂಡಾಂತರದೊಳಗಿಂದ ಪಾರಾದರೆ, ನೀನು ಕೋರಿದಷ್ಟು ಬಹುಮಾನವು ನಿನಗೆ ಸಲ್ಲಿಸಲ್ಪಡುವದು.''

ಅಲ್ಪಾವಕಾಶದಲ್ಲಿಯೇ ಇವರನ್ನನುಸರಿಸಿ ಓಡುತ್ತಿದ್ದವರ ''ಹೊಡೆಯಿರಿ-ಬಡೆಯಿರಿ-ಕೊಲ್ಲಿರಿ'' ಎಂಬ ಗುಲ್ಲಿನ ಶಬ್ದವು ರಾತ್ರಿಯ ನಿಸ್ತಬ್ಧತೆಯನ್ನು ಭಂಗಗೊಳಿಸುತ್ತ ಆ ಓಣಿಯೊಳಗಿಂದ ಮುಂದಕ್ಕೆ ಹೊರಟು ಹೋಯಿತು. ಇವರು ಆ ಬಾಗಿಲಿಕ್ಕಿದ ಮನೆಯಲ್ಲಿ ಅಡಗಿಕೊಂಡರೆಂಬ ವಿಷಯವು ಅವರಿಗೆ ತಿಳಿಯಲೇ ಇಲ್ಲ.

ಆ ಮೇಲೆ ಬ್ಲೇಕ-ಸ್ಮಿತ್ಥರಿಗೆ ಆಶ್ರಯವನ್ನಿತ್ತವನು:—ಇನ್ನು ನಿಮಗೆ ಯಾವ ಅಂಜಿಕೆಯೂ ಇರುವದಿಲ್ಲ. ಅವರುಗಳೆಲ್ಲರೂ ಹೊರಟು ಹೋದರು. ಅವರಿಗೆ ನಿಮ್ಮ ಪತ್ತೆಯೇ ಹತ್ತಲಾರದು. ನೀವು ಅವರೆಲ್ಲರ ಕಣ್ಣಿಗೆ ಮಣ್ಣೆರಚಿರುತ್ತೀರಿ. ಇನ್ನು ಯಾವ ಯೋಚನೆಯನ್ನೂ ಮಾಡದ ನೀವು ನನ್ನೊಡನೆ ಬನ್ನಿರಿ, ಎಂದು ಹೇಳಲು, ಬ್ಲೇಕನು ಸ್ಮಿತ್ಥನೊಡನೆ ಆತನ ಹಿಂದಿನಿಂದ ನಡದನು. ಅಂಧಕಾರಯುಕ್ತವಾದ ಚಿಕ್ಕ ದಾರಿಯ ಹಿಡಿದು ನಿಸ್ತಬ್ಧದಿಂದ ಅವರೆಲ್ಲರೂ ಸಾಗಿದ್ದರು. ಪ್ರತಿಕ್ಷಣಕ್ಕೂ ಸ್ಮಿತ್ಥನಿಗೆ ಅನುಮಾನವುಂಟಾಗತೊಡಗಿತು. ಹೇಗಂದರೆ:—'ಈ ಚೀನಿಗನು ಹೋಗಹೋಗುತ್ತ ನಡುವೆ ಅಡ್ಡನಿಂತು, ತನ್ನಲ್ಲಿಯ ಚೂರಿಯಿಂದ ನಮ್ಮಗಳೆದೆಗೆ ತಿವಿಯುವನು'; ಇದರ ತರುವಾಯ ಆ ಅನುಮಾನವು ನಿರ್ಮೂಲವಾಯಿತು. ಕೆಲ ಮಿನೀಟುಗಳ ಮೇಲೆ ಆ ಸಂದಿಯು ಬೇರೆ ಕಡೆಯ ಮುಚ್ಚಿದ್ದ ಬಾಗಿಲವು ಬರಲು, ಅವರು ಅಲ್ಲಿ ನಿಲ್ಲಬೇಕಾಯಿತು.

ಆ ಚೀನಿಗನು ಆ ಬಾಗಿಲವನ್ನು ತೆರೆಯಲು ಅವರು ಒಂದು ಪ್ರಶಸ್ತವಾದ ರಾಜಮಾರ್ಗವನ್ನು ಕಂಡರು. ಆ ರಾಜಬೀದಿಯಲ್ಲಿ ಅಲ್ಲಲ್ಲಿ ಪ್ರಜ್ವಲವಾಗಿ ಉರಿಯುತ್ತಿರುವ ದೀಪಸ್ತಂಬಗಳಿದ್ದವು. ಆಗ ಆ ಚೀನಿಗನು: ಮಹನೀಯರೇ, ಈ ಬೀದಿಗೆ 'ಸಿಂಗಾಪೂರ ರೋಡ' ಎಂದೆನ್ನುತ್ತಾರೆ. ಈ ದಾರಿಯಿಂದ ಹೋದರ ನೀವು ನಿಮ್ಮ ಶತ್ರುಗಳ ಕೈಯಲ್ಲಿ ಸಿಗುವ ಅಂಜಿಕೆಯಿಲ್ಲ. ನೀವು ಇಲ್ಲಿಂದ ನೆಟ್ಟಗೆ ದಕ್ಷಿಣಕ್ಕೆ ಹೋದರೆ, ತೇಮ್ಸ ನದಿಯ ದಂಡೆಗೇ ತಲುಪುವಿರಿ.

ಆಗ ಬ್ಲೇಕನು ಅಸಮಾಧಾನದಿಂದ:—ಮಹಾನುಭಾವನೇ, ನಿನ್ನ ಸಹಾಯದಿಂದ ಇಂದು ನಮ್ಮ ಪ್ರಾಣಗಳುಳಿದಿರುತ್ತವೆ. ನಾವು ನಿನ್ನೀ ಉಪಕಾರವನ್ನು ಆಜನ್ಮವೂ ಮರೆಯಲಾರೆವು. ನಿನಗೆ ಬೇಗನೆ ಸಾಕಷ್ಟು ಬಹುಮಾನವು ಸಲ್ಲಿಸಲಾಗುವದು. ನಿನ್ನ ಹೆಸರೇನೆಂಬದನ್ನು ತಿಳಿಸುವೆಯಾ? ಎಂದು ಕೇಳಲು,

ಅದಕ್ಕೆ ಆ ಚೀನಿಗನು ನಕ್ಕು:—ಮಹನೀಯರೇ, ತಮಗೆ ನನ್ನ ಗುರುತು ಹತ್ತಲಿಲ್ಲೇನು? ನಾನು ತಮಗಪರಿಚಿತನಾಗಿಲ್ಲ.

ಆಗ ಬ್ಲೇಕನು ವಿಸ್ಮಯಪೂರ್ವಕವಾಗಿ:—ನೀನು ನನ್ನ ಪರಿಚಿತನೇ? ಆದರೆ ನಾನು ಈ ಮೊದಲು ನಿನ್ನನ್ನು ನೋಡಿದಂತೆ ನೆನಪಿಲ್ಲವಲ್ಲ! ನೀನು ಯಾರು? ನಿನ್ನ ಹೆಸರೇನು?

ಚೀನಿ:—ನಾನು ತಮ್ಮ ಅನುಚರನಾದ ಚಾಲೂ-ಇಯಾಂಗನಲ್ಲವೇ?

ಅದನ್ನು ಕೇಳಿ ಬ್ಲೇಕನು ಬೆಪ್ಪನಂತೆ ಸುಮ್ಮನೆ ನಿಂತೇ ಬಿಟ್ಟನು! ಇಂಥ ಅಸಂಭವ ಮಾತಿನಲ್ಲಿ ವಿಶ್ವಾಸವಿಡಲಿಕ್ಕೆ ಆತನ ಮನಸ್ಸು ಒಪ್ಪಲಿಲ್ಲ. ಆತನು ಆಶ್ಚರ್ಯಭರದಿಂದ ಆ ಚೀನಿಗನ ಮೋರೆಯನ್ನು ಟಕಮಕವೆಂದು ನೋಡುತ್ತ: ನೀನು ಚಾಲೂ-ಇಯಾಂಗನೇ? ಇದೆಂಥ ಸೋಜಿಗವು! ಚಾಲೂ-ಇಯಾಂಗನ ಹೆಣವು ನದಿಯಲ್ಲಿ ಬಿದ್ದಿತ್ತು. ಪೋಲೀಸರು ಆ ಹೆಣವನ್ನು ಹೇರಿ ತಂದದ್ದನ್ನು ನನ್ನೀ ಕಣ್ಣಿನಿಂದಲೇ ನೋಡಿರುತ್ತೇನೆ

ಚೀನಿ:—"ಆ ಹೆಣವು ನನ್ನದಲ್ಲ; ಅದಕ್ಕೆ ಮುಖ್ಯ ಪ್ರಮಾಣವೆಂದರೆ, ನಾನು ಬದುಕಿದ್ದು, ನಿಮ್ಮೆದುರಿಗೆ ನಿಂತುಕೊಂಡಿರುತ್ತೇನೆ. ಆಗ ತಮಗೆ ಭ್ರಮವಾಗಿರಬಹುದಾಗಿದೆ."

ಬ್ಲೇಕ:-ಆ ಹೆಣದ ಮೋರೆಯನ್ನು ನೋಡಿ ಅದನ್ನು ಗುರ್ತಿಸಲಶಕ್ಯವಾಗಿದ್ದರೂ ಅದರ ಕೈಬೆರಳೊಳಗೆ ನಿನ್ನ ಆ ಉಂಗುರವಿದ್ದಿತಲ್ಲ! ಆ ಉಂಗುರವೂ ನಿನ್ನದಲ್ಲವೆಂದು ಹೇಳುತ್ತೀಯೇನು?

ಚೀನಿ:-ಅಹುದು; ಆ ಉಂಗುರವು ನನ್ನದೇನೋ ನಿಜವು; ಆದರೆ ಇಲ್ಲಿಯವರೆಲ್ಲರನ್ನೂ ಭ್ರಾಂತಿಗೊಳಿಸಲಿಕ್ಕೆಂದು ನಾನೇ ಅದನ್ನು ಆ ಹೆಣದ ಕೈಯಲ್ಲಿಟ್ಟಿದ್ದೆನು.

ಬ್ಲೇಕ:—ಇನ್ನು ನಿನ್ನ ಮಾತಿನಲ್ಲಿ ಅವಿಶ್ವಾಸ ಪಡುವ ಕಾರಣವಿಲ್ಲ. ವಿಶೇಷವೇನಂದರೆ, ಇಂಥ ಗಂಡಾಂತರ ಸಮಯದಲ್ಲಿ ಬೇರೆ ಯಾವ ಚೀನಿಗನೂ ನಮ್ಮನ್ನು ರಕ್ಷಿಸುತ್ತಿರಲಿಲ್ಲ. ನೀನು ಯಾವಾಗ ಆ ಕಡೆಯ ಬಾಗಿಲವನ್ನು ತೆರೆದೆಯೋ, ಆಗಲೆ ನಿನಗೆ ನಮ್ಮಗಳ ವಿಪತ್ತಿನ ಕಲ್ಪನೆಯಾಗಿತ್ತೇನು?

ಚಾಲೂ:—ಇಲ್ಲ. ಓಣಿಯಲ್ಲಿ 'ಹೊಡೆ-ಬಡೆ-ಕೊಲ್ಲು' ಎಂಬ ಗುಲ್ಲು ಎದ್ದದ್ದನ್ನು ಕೇಳಿ, ಅದಕ್ಕೆ ಕಾರಣವೇನೆಂಬದನ್ನು ತಿಳಿಯುವ ಸಲುವಾಗಿ ನಾನು ಆಗ ಹೊರಗೆ ಬಂದಿದ್ದೆನು. ಅಷ್ಟರಲ್ಲಿ ಹೊರಗಿನ ನಿಮ್ಮ ದನಿಯನ್ನು ಕೇಳಿ ಒಮ್ಮೆಲೆ ನಿಮ್ಮನ್ನು ಗುರ್ತಿಸಿದೆನು. ಅದನ್ನೆಲ್ಲ ವಿವರಿಸುತ್ತ ಕೂಡ್ರಲಿಕ್ಕೆ ಈಗ ಸಮಯವಿಲ್ಲ. ತಮ್ಮ ಈಗಿನ ವಾಸಸ್ಥಳವನ್ನು ತಿಳಿಸಿರಿ. ಇಂದೇ ಅಲ್ಲಿಗೆ ಬಂದು ನಿಮ್ಮನ್ನು ಕಾಣುವೆನು.

ಬಳಿಕ ಬ್ಲೇಕನು ತನ್ನ ಮನೆಯ ಪತ್ತೆ ತಿಳಿಸಿದನು; ಹಾಗೂ ಸ್ಮಿತ್ಥನನ್ನು

ಸಂಗಡ ಕರಕೊಂಡು ಹೋಗತಕ್ಕಲ್ಲಿಗೆ ಹೊರಟನು. ಅಲ್ಪಾವಧಿಯಲ್ಲೇ ನಿಮ್ಮನ್ನು ಬಂದು ಕಾಣುವೆನೆಂದು ಹೇಳಿ, ಚಾಊ-ಇಯಾಂಗನೂ ಆ ಬಾಗಿಲ ವನ್ನಿಕ್ಕಿಕೊಂಡು ಹೋದನು.

ಬ್ಲೇಕನು ಆ ದಾರಿಯಲ್ಲಿ ಮತ್ತಾವ ಸಂಕಟಕ್ಕೂ ಗುರಿಯಾಗಲಿಲ್ಲ; ಆದರೆ ಆ ಸಿಂಗಾಪೂರ ರೋಡಿನಿಂದ ಹೋಗುತ್ತಿರುವಾಗ ಸಿಟ್ಟಿನಿಂದ ಕೆರಳಿದ ಆ ಚೀನಿಗರ ಕೋಲಾಹಲ ಧ್ವನಿಯು ಆಗಾಗ್ಗೆ ಅವರ ಕರ್ಣಗೋಚರವಾಗುತ ಲಿತ್ತು. ಮುಂದೆ ಕೆಲ ನಿಮಿಷಗಳಲ್ಲೇ ಬ್ಲೇಕನು ಸ್ಮಿತ್ಥನೊಡನೆ ತೇಮ್ಸನದಿಯ ದಂಡೆಗೆ ಬಂದನು. ಅಲ್ಲಿಂದ ಅವರು ಈಸ್ಟ ಇಂಡಿಯಾ ಡಕ್ಕ ರೋಡಿಗೆ ಬರಲಿಕ್ಕೆ ತಡ ಹಿಡಿಯಲಿಲ್ಲ. ತಾನು ಮೇರಿ ವೆಭಾನಳ ಬಗ್ಗೆ ಮಲ್ಲಿಗೆಯಿಂದ ತಿಳಿದ ಸಂಗತಿಯೇನು? ಯಾವ ಕೌಶಲ್ಯದಿಂದ ಮೇರಿಯ ಪತ್ತೆ ಹಚ್ಚಿದೆನು? ಮುಂತಾದ ಸಂಗತಿಗಳನ್ನು ಸ್ಮಿತ್ತನು ಬ್ಲೇಕನಿಗೆ ದಾರಿಯಲ್ಲಿ ತಿಳಿಸಿದನು. ತಾನು ಯಾವ ಬಗೆಯಿಂದ ಸ್ಮಿತ್ಥನನ್ನು ಆ ದುರ್ವೃತ್ತನಿಂದ ಬಿಡುಗಡೆ ಮಾಡಿದ ನೆಂಬ ಸಂಗತಿಯನ್ನು ಬ್ಲೇಕನು ಅವನಿಗೆ ತಿಳಿಸಿದನು.

ಕಡೆಗೆ ಬ್ಲೇಕನು:— ತಮ್ಮಾ, ಈ ರೋಡಿನೊಳಗಿನ ಆ ಅಂಗಡಿಯಲ್ಲಿ ನೂಲಿನ ಹಗ್ಗವನ್ನು ಕೊಳ್ಳುತ್ತಿರುವಾಗಲೆ ನೀನು ಯಾವುದೊಂದು ಕಠಿಣ ಕೆಲ ಸಕ್ಕೆ ಕೈನೀಡುತ್ತಿರುವೆಯೆಂಬದನ್ನು ತರ್ಕಿಸಿದ್ದೆನು; ಆದರೆ ನಿನ್ನ ಉದ್ದೇಶವು ಮಾತ್ರ ಸ್ಪಷ್ಟವಾಗಿ ತಿಳಿಯಲಿಲ್ಲ. ನಾನು ನಿನಗೆ ಆಗಾಗ್ಗೆ ಬೋಧಿಸುತ್ತಿರುವದೇ ನಂದರೆ, ನೀನು ಅಂಥ ಅಸಮ ಸಾಹಸದ ಕೆಲಸಕ್ಕೆ ಪ್ರವೃತ್ತನಾಗಬೇಡೆಂದು. ಹೀಗಿದ್ದು, ನೀನು ಇಂದು ನನ್ನ ಆ ಆಜ್ಞೆಯನ್ನೇಕೆ ಉಲ್ಲಂಘಿಸಿದೆ?

ಸ್ಮಿತ್ಥ:— ಮೇರಿ ವೆಭಾನಳನ್ನು ಭೇಟಿಯಾಗುವ ಸುಯೋಗವನ್ನು ನಷ್ಟ ಗೊಳಿಸಲಿಕ್ಕೆ ನೀವೆಂದೂ ಸಮ್ಮತಿಸಲಾರಿರೆಂದು ಮನಸ್ಸಿನಲ್ಲಿ ಯೋಚಿಸಿದ್ದೆನು. ಅವಳು ಇರುವಳಾದರೂ ಹೇಗೆ? ಶತ್ರುಗಳಿಂದ ಅವಳಿಗೆ ಉಪದ್ರವವೇನಾದರೂ ಆಗುತ್ತಿದೆಯೋ-ಇಲ್ಲವೋ ಎಂಬದನ್ನು ತಿಳಿಯುವ ಸಲುವಾಗಿ ನನಗೆ ಬಹು ಆತುರವುಂಟಾಯಿತು. ಆಗ ನಾನು ನನ್ನ ಆ ಕುತೂಹಲವನ್ನು ತಡೆಯದಾ ದೆನು. ಒಡೆಯರೇ, ಮೇರಿಯು ಅಲ್ಲಿ ಸುಖವಾಗಿರುತ್ತಾಳೆ; ಆದರೆ ಬಂಧ ಮುಕ್ತತೆಯ ಸಲುವಾಗಿ ಅವಳು ಬಹು ವ್ಯಾಕುಲಳಾಗಿದ್ದಾಳೆ.

ಬ್ಲೇಕನು ಮನೆಗೆ ಹೋಗಿ ತಮ್ಮ ವಿಪದ್ಬಂಧುವಾದ ಚಾಊ-ಇಯಾಂ ಗನ ಮಾರ್ಗನಿರೀಕ್ಷಿಸುತ್ತ ಕುಳಿತನು.



೯ನೇ ತೆರೆ.

## ರೋಮಾಂಚಿತ ಸಂಗತಿಯು.



ಚಾಊ-ಇಯಾಂಗನ ನಿರೀಕ್ಷಣೆಯಲ್ಲಿ ಬ್ಲೇಕನು ಹೆಚ್ಚು ಹೊತ್ತು ಕಳೆಯಬೇಕಾಗಲಿಲ್ಲ. ಒಪ್ಪಿಕೊಂಡಂತೆ ಅವನು ಅಲ್ಪಾವಕಾಶದಲ್ಲಿಯೇ ಅಲ್ಲಿಗೆ ಬಂದನು. ಚಾಊ-ಇಯಾಂಗನು ಬ್ಲೇಕನ ಖೈರಕಖಾನೆಯನ್ನು ಪ್ರವೇಶಿಸುತ್ತಲೆ, ಅವನನ್ನು ಕೂಡ್ರ ಹೇಳಿ, ಬ್ಲೇಕನು ತನ್ನ ಆ ಕೋಣೆಯ ಬಾಗಿಲು-ಕಿಟಕಿಗಳನ್ನು ಮುಚ್ಚಿಕೊಂಡನು. ತದನಂತರ ಅವನು ಚಾಊ-ಇಯಾಂಗನ ಎದುರಿಗೆ ಹೋಗಿ ಕುಳಿತು: ನೀನು ಜೀವಂತವಾಗಿರುವದನ್ನು ಕಂಡು ನನಗೆ ಎಷ್ಟು ಸೋಜಿಗವೆನಿಸಿತೋ, ಆ ಚಾಯ್ನಾ ಫೀಲ್ಡಿನ ಸಿಂಹನ ಗವಿಯ ಸಮೀಪದಲ್ಲೇ ನೀನು ವಾಸಿಸುತ್ತಿರುವದನ್ನು ಕಂಡು ನನಗೆ ಅದಕ್ಕೂ ಹೆಚ್ಚು ಸೋಜಿಗವೆನಿಸಿತು. ಚಾಊ-ಇಯಾಂಗಾ, ನೀನು ಇದುವರೆಗೆ ಯಾವ ಯಾವ ಗೌಪ್ಯ ಸಂಗತಿಗಳನ್ನರಿತಿರುವೆಯೋ ಅವನ್ನೆಲ್ಲ ವಿಶದವಾಗಿ ತಿಳಿಸು. ನೀನು ಬಹು ಮೆತ್ತಗೆ ಮಾತನಾಡಬೇಕು; ಯಾಕಂದರೆ ಈ ಕೋಣೆಯ ಗೋಡೆ-ಕಂಬಗಳಿಗೂ ಇತ್ತೀಚೆಗೆ ಕಿವಿಗಳುಂಟಾಗಿರುತ್ತವೆಂಬದನ್ನು ಮರೆಯಲಾಗದು.

ಚಾಊ:—ತಮಗೆ ಎಷ್ಟೋ ಸಂಗತಿಗಳನ್ನು ತಿಳಿಸಬೇಕೆಂದೇ ನಾನಿಲ್ಲಿಗೆ ಬಂದಿದ್ದೇನೆ. ಅವನ್ನೆಲ್ಲ ಕೇಳಿದರೆ ತಮ್ಮ ಕಣ್ಣುಗಳು ನಡುನೆತ್ತಿಗೇ ಏರುವವು. ನಾನು ಆ ಚಾಯ್ನಾ ಫೀಲ್ಡಿಗೆ ಹೋದವನೇ ಬೇರೊಂದು ಹೆಸರಿನಿಂದ ಆ ಮನೆಯನ್ನು ಬಾಡಿಗೆಗೆ ಹಿಡಿದೆನು. ಎಷ್ಟೋ ದಿನಗಳವರೆಗೆ ಬೇರೆ ಬೇರೆ ಹೋಟೆಲ್ಲುಗಳಲ್ಲಿಯೂ ಜೂಜಿನ ಅಡ್ಡೆಗಳಲ್ಲಿಯೂ ಅಡ್ಡಾಡಿ ನಮ್ಮ ದೇಶೀಯರ ಕೂಡ ಸ್ನೇಹಸಂಬಂಧವನ್ನು ಮಾಡಿಕೊಂಡೆನು. ಅದರಲ್ಲಿಯ ಒಬ್ಬ ಚೀನಿಗನು ನನಗೆ ಕೇವಲ ಜೀವದ ಗೆಳೆಯನಾದನು. ಆತನು ಕೇವಲ ನನ್ನಂತೆಯೇ ಮುಖರೂಪವುಳ್ಳವನಿದ್ದುದನ್ನು ಕಂಡು, ಹಲವು ಜನರು ವಿಸ್ಮಯಗೊಂಡರು. ಮುಖಚರ್ಯೆಯ ಸಾದೃಶ್ಯದಿಂದಲೇ ನನ್ನ ಅವನಲ್ಲಿ ಅಷ್ಟು ತೀವ್ರವಾಗಿ ದೃಢ ಮೈತ್ರಿಯುಂಟಾಗಿರಬೇಕು.

ಕಡೆಗೊಂದು ದಿನ ಮಾತ-ಮಾತಾಡುತ್ತ ಅವನು ನನ್ನ ಹೆಸರು-ದೆಸೆಗಳನ್ನು ಕೇಳಿದನು. ಆಗ ನಾನು ಅವನಿಗೆ ತಿಳಿಸಿದ ನನ್ನ ಹೆಸರು-ದೆಸೆಗಳೆಲ್ಲ ಸಂಪೂ

ಣವಾಗಿ ಸುಳ್ಳು. ನಾನು ಅವನಿಗೆ ಹೇಳಿದ್ದೇನಂದರೆ, "ನಾನು ಪೇಕಿನಪಟ್ಟಣದವನು. ಅಲ್ಲಿಯದೊಂದು ಜೂಜಿನ ಅಡ್ಡೆಯಲ್ಲಿ ಒಬ್ಬ ಜೂಜುಗಾರನು ನನ್ನೊಡನೆ ಮೋಸದಾಟವನ್ನಾಡಲು, ಅದರಿಂದ ನನ್ನ ಸಿಟ್ಟು ತಲೆಗೇರಿತು. ಕೂಡಲೆ ನಾನು ನನ್ನ ಚೂರಿಯಿಂದ ಅವನಿಗಿರಿದೆನು. ಅದರಿಂದ ಆ ಮೋಸಗಾರನು ತತ್‌ಕ್ಷಣವೇ ಪಂಚತ್ವವನ್ನೈದಿದನು. ಕೂಡಲೆ ನಾನು ಅಲ್ಲಿಂದ ಕಾಲ್ತೆಗೆದೆನು. ನನ್ನನ್ನು ಹಿಡಿದು ದಂಡಿಸುವ ಸಲುವಾಗಿ ಅಲ್ಲಿಯ ಪೋಲೀಸರು ಸಾಹಸವ ನಡೆಸಲು, ನಾನು ಅಲ್ಲಿಯ ಒಂದು ಸಾಮಾನಿನ ಹಡಗಿನೊಳಗೆ ನಾವಿಕನ ನೌಕರಿ ಹಿಡಿದು, ಈ ಇಂಗ್ಲಂಡ ದೇಶಕ್ಕೆ ಬಂದಿರುತ್ತೇನೆ. ಇಲ್ಲಿ ನನಗೆ ಯಾವ ನೌಕರಿ-ಚಾಕರಿಗಳೂ ಸಿಗದ್ದರಿಂದ ಬಹು ಕಷ್ಟದಲ್ಲಿರುತ್ತೇನೆ."

ನನ್ನ ಈ ಕರ್ಮಕಥೆಯನ್ನು ಕೇಳಿ ಆ ನನ್ನ ಮಿತ್ರನಾದ ಕಿನ್ ಫಂಡನು ದುಃಖಿತನಾದನು; ಹಾಗು ಸಹಾನುಭೂತಿಪೂರ್ವಕವಾಗಿ: "ನೀನು ಚಾಕರಿ ಮಾಡುವದಾದರೆ, ನಿನಗೊಳ್ಳೇ ಚಾಕರಿಯನ್ನು ದೊರಕಿಸಿ ಕೊಡುವೆನೆಂ"ದು ಹೇಳಿದನು ಆದು ಅದಕ್ಕೂ ಹೆಚ್ಚು ಮಾತು-ಕಥೆಗಳಾಗಲಿಲ್ಲ.

ಮುಂದೆ ೨-೩ ದಿನಗಳ ನಂತರ ನನ್ನ ಮಿತ್ರನಾದ ಕಿನ್‌ಫಂಡನು ನನಗೆ ಗೌಪ್ಯವಾಗಿ ಹೇಳಿದ್ದೇನಂದರೆ, "ನಮ್ಮದೊಂದು ದಳವಿರುವದು. ಗುಪ್ತವಾಗಿ ಅಫೀಮನ್ನು ಮಾರುವದೂ, ಜೂಜಿನಲ್ಲಿ ಜನರನ್ನು ರಕ್ಷಿಸುವದೂ ಅಲ್ಲದೆ ಕಳವು-ದರವಡೆಗಳನ್ನು ಮಾಡಿ ಸಾಕಷ್ಟು ಹಣ ದೊರಕಿಸುವದು ಇವೇ ನಮ್ಮ ದಳದ ಮುಖ್ಯಕರ್ತವ್ಯಗಳು ಈ ನಮ್ಮ ಗುಂಪಿನ ಪ್ರಮುಖನು ಹಾಂಗಕಾಂಗದಲ್ಲಿರುತ್ತಾನೆ. ಲಾಭದ ಕೆಲವಂಶವು ಅವನಿಗೆ ಸಲ್ಲಿಸಲ್ಪಡುವದು. ಉಳಿದುದನ್ನೆಲ್ಲ ಗುಂಪಿನವರೆಲ್ಲರೂ ಹಂಚಿಕೊಳ್ಳುತ್ತೇವೆ" ಹೀಗೆಂದು ಹೇಳಿ, ಆ ಕಿನ್ ಫಂಡನು ನನ್ನನ್ನು ತಮ್ಮ ಆ ಗುಂಪಿನಲ್ಲಿ ಸೇರಿಕೊಳ್ಳಲಿಕ್ಕೆ ಒತ್ತಾಯಪಡಿಸಿದನು. ನಾನು ಒಂದೆರಡು ಸಾರೆ ಒಲ್ಲೆ ಒಲ್ಲೆನೆಂದು ಬಾಯಿಂದ ಅಂದೆನು ಮಾತ್ರ; ಆದರೆ ಅಲ್ಪಾವಕಾಶದಲ್ಲಿಯೇ ಅವನ ಮಾತಿಗೊಪ್ಪಿಕೊಂಡೆನು. ಮರುದಿನ ಅವನು ನನ್ನನ್ನು ತಮ್ಮದೊಂದು ಜೂಜಿನ ಅಡ್ಡೆಗೆ ಕರೆದೊಯ್ದನು. ಅಲ್ಲಿ ಎಷ್ಟೋ ಜನ ತರುಣ ಚೀನೀಯರು ಕುಳಿತಿದ್ದರು. ಅವರೆಲ್ಲರೂ ಆ ಮಹಾತ್ಮನ ಗುಂಪಿನ ಅನುಯಾಯಿಗಳೇ ಎಂಬದು ತಿಳಿಯಿತು. ಅವರೆಲ್ಲರೂ ನನ್ನನ್ನು ಹಲವು ಬಗೆಯಿಂದ ಪೀಡಿಸಿ ಪೀಡಿಸಿ ಪರೀಕ್ಷಿಸಹತ್ತಿದರು. ಎಷ್ಟು ಪೀಡಿಸಿದರೂ ನನ್ನಲ್ಲಿ ಯಾವ ಹುಚ್ಚು-ಹುಳುಕುಗಳೂ ತೋರದ್ದರಿಂದ, ಅವರು ನನ್ನನ್ನು ನಂಬಿಗೆಯುವನೆಂದು ತಿಳಿದು, ತಮ್ಮ ಗುಂಪಿನಲ್ಲಿ ಸೇರಿಸಿಕೊಳ್ಳಲಿಕ್ಕೆ ಯೋಗ್ಯನೆಂದು ನಿರ್ಧರಿಸಿದರು. ಆ ಬಳಿಕ ಅವರು ನನ್ನನ್ನು ತಮ್ಮ ಮುಖ್ಯಸ್ಥ

ನಾದ ಚಾಯ್ನಾ ಫೀಲ್ಡಿನ ಸಿಂಹನ ಬಳಿಗೆ ಕರೆದೊಯ್ದರು. ಆ ಮಾನುಷ ಸಿಂಹವು ಮೃಗರಾಜನಿಗಿಂತಲೂ ಹೆಚ್ಚು ಕ್ರೂರವಾಗಿರುತ್ತದೆ.

ಆಗ ಬ್ಲೇಕನು ನಡುವೇ ಬಾಯಿ ಹಾಕಿ, ವಿಸ್ಮಯಭರದಿಂದ:—ನೀನು ಅನ್ನುವದಾದರೂ ಏನು? ನೀನು ಆ ಚಾಯ್ನಾ ಫೀಲ್ಡಿನ ಸಿಂಹನ ಎದುರಿಗೆ ಹೋಗಿದ್ದೆಯಾ? ನೀನು ಆತನನ್ನು ಕಣ್ಣಾರೆ ಕಂಡೆಯಾ? ನೀನು ಅವನೊಡನೆ ಸ್ವಲ್ಪ ಮಟ್ಟಿಗಾದರೂ ಸಂಭಾಷಿಸಿರಬಹುದಲ್ಲವೇ?

ಚಾಊ:—ಧಣಿಯರೇ, ಅಹುದು; ಆದರೆ ಆ ಸಿಂಹನ ಗವಿಯು ಎಲ್ಲಿರುತ್ತದೆಂಬದನ್ನು ತಿಳಿಯಲಾರೆನು; ಯಾಕಂದರೆ, ಆ ಗುಂಪಿನವರು ನನ್ನ ಕಣ್ಣು ಕಟ್ಟಿಕೊಂಡೇ ಅಲ್ಲಿಗೆ ಕರೆದೊಯ್ದಿದ್ದರು. ಅವರು ಅಲ್ಲಿಗೆ ಕರೆದೊಯ್ಯುವಾಗ ಹಲವು ಸಂದಿ, ಮೂಲಿ, ಅಡ್ಡ-ತಿಡ್ಡವಾದ ದಾರಿಗಳಿಂದ ಒಯ್ದಿದ್ದರು. ನಾನು ಎಷ್ಟೋ ಅಟ್ಟಗಳನ್ನು ಹತ್ತಿ-ಇಳಿದು ಅಲ್ಲಿಗೆ ಹೋದ ಬಳಿಕ ನನ್ನ ಕಣ್ಣುಗಳನ್ನು ಬಿಚ್ಚಲು, ಎದುರಿಗೆ ಆ ಸಿಂಹನೇ ಕುಳಿತಿದ್ದನು. ದೊಡ್ಡ ದೊಡ್ಡ ರಾಜ-ಮಹಾರಾಜರ ಅರಮನೆಗಳೂ ಆ ಸಿಂಹನ ಗವಿಯ ಮುಂದೆ ತುಚ್ಛವೆಂದೇ ಅನ್ನಬೇಕಾಗುವದು. ಆ ಸಿಂಹನ ಗವಿಯ ಠೀವಿಯನ್ನು ಕಂಡು ನನ್ನ ಕಣ್ಣುಗಳು ಕತ್ತಲುಗೂಡಿಸಿದವು. ನಾನು ಹೋದಾಗ ಆ ಸಿಂಹನು ಒಂದು ಬಹು ಮೂಲ್ಯವಾದ ಬೈಠಕಿಯ ಮೇಲೆ ಕುಳಿತಿದ್ದನು. ಆತನ ಪೋಷಾಕಿನಲ್ಲಿ ಮುತ್ತು-ರತ್ನಗಳು ವಜ್ರ-ವೈಡೂರ್ಯಗಳು ಝಕ್-ಫಕ್ ಎಂದು ಹೊಳೆಯುತ್ತಿದ್ದವು. ಚೀನದ ಬಾದಶಹನಿಗಾದರೂ ಅಷ್ಟು ಬೆಲೆಯುಳ್ಳ ಪೋಷಾಕು ಇದೆಯೋ ಇಲ್ಲವೋ ಎಂಬದನ್ನು ಹೇಳಲಾರನು.

ಬ್ಲೇಕನು ಆಗ್ರಹಪೂರ್ವಕವಾಗಿ: ಹಾಗಲ್ಲವೇ? ಆ ಸಿಂಹನ ಮುಖಲಕ್ಷಣವು ಹೇಗಿರುವದು? ಅವನಿಗೆ ಮೃಗರಾಜನಂತೆ ಆಯಾಲವೂ, ದೊಡ್ಡ ದೊಡ್ಡ ನಖಪಂಜರಗಳೂ ಇರುತ್ತವಲ್ಲವೆ?

ಚಾಊ:—ಅವನಿಗೆ ಮೃಗರಾಜನಂತೆ ಉಗುರು-ಹಲ್ಲುಗಳಿರದಿದ್ದರೂ, ಆತನು ಸಿಂಹನಿಗಿಂತಲೂ ಕ್ರೂರನಾಗಿ ತೋರುತ್ತಿರುವನೆಂಬದಕ್ಕೆ ಸಂದೇಹವಿಲ್ಲ. ಆತನು ವಯಸ್ಸಿನಿಂದ ಚಿಕ್ಕವನು; ನಿಮ್ಮ ಈ ಸ್ನೇಹಿತ ಪೋರನಷ್ಟಾಗಬಹುದು. ಆತನ ಮುಖಭಾವದಲ್ಲಿ ದಯಾದಾಕ್ಷಿಣ್ಯಗಳ ಅಥವಾ ಕೋಮಲತೆಯ ಲೇಶವೂ ಇರುವದಿಲ್ಲ. ಆತನ ದೃಷ್ಟಿಯು ಕೌಟಿಲ್ಯಪೂರ್ಣವಾಗಿರುವದು. ಸಿಟ್ಟು-ಮಾತ್ಸರ್ಯಗಳು ಆತನ ಕಣ್ಣಿನಿಂದ ಯಾವಾಗಲೂ ಹೊರಚಿಮ್ಮುತ್ತಿರುತ್ತವೆ. ಆತನ ಕಣ್ಣುಗಳೆರಡೂ ನೋಡುವವರ ಹೃದಯವನ್ನು ಭೇದಿಸುತ್ತಿರುತ್ತವೆ. ಅವನು ಎಂಥ ಅನ್ಯಾಯದ ನಿಷ್ಠುರ ಆದೇಶವನ್ನೇ ಮಾಡಲಿ, ಆತನ ದೃಷ್ಟಿಗೆ

ದೃಷ್ಟಿ ಬೆರಿಸಿ, ಅದನ್ನುಲ್ಲಂಘಿಸುವದು ಆದಾರಿಗೆ ಸಾಧ್ಯವಾಗಬೇಕು? ಆದರೆ ಅವನು ಅಚ್ಚ ಚೀನೀಯನೆಂಬಂತೆ ಕಾಣುವದಿಲ್ಲ.

ಬ್ಲೇಕ:—ಅಚ್ಚ ಚೀನೀಯನಲ್ಲವೆಂದರೇನು?

ಚಾಲೂ:—ಅವನು ಬಿಳಿಯ ರಕ್ತದವನು; ಅರ್ಥಾತ್ ಫಿರಂಗಿಯಾಗಿರಬೇಕು. ಆತನ ತಾಯಿಯಾಗಲಿ ತಂದೆಯಾಗಲಿ ಯಾರೊಬ್ಬರು ಚೀನಿಗರಿದ್ದು, ಉಳಿದವರು ಯುರೋಪಿಯನ್ನರಿರಬೇಕು. ಆತನ ಕಣ್ಣು, ಮೂಗು, ಮುಖಚರ್ಯೆಗಳಿಂದಲೂ ಮೈಬಣ್ಣದಿಂದಲೂ ನನಗೆ ಹಾಗೆ ಅನಿಸುತ್ತಿದೆ.

ಬ್ಲೇಕ:—ಆತನ ಹೆಸರೇನು?

ಚಾಲೂ:—ಆತನಿಗೆ ಉಷಂಡ-ಚಂಡನೆಂದೆನ್ನುತ್ತಾರೆ. ಅದು ಆತನ ತೊಟ್ಟಿಲೊಳಗಿನ ಹೆಸರೋ ಅಥವಾ ಛದ್ಮನಾಮವೋ ತಿಳಿಯದು.

ಬ್ಲೇಕ:—ಆ ಮೇಲೆ ಆ ಸಿಂಹನ ಸಂಗಡ ನಿನ್ನ ಮಾತು-ಕಥೆಗಳೇನಾದರೂ ನಡದವೋ?

ಚಾಲೂ:—ಅವನು ನನ್ನನ್ನು ಕುರಿತು ಎಷ್ಟೋ ಪ್ರಶ್ನೆ ಮಾಡಿದನು. ನಾನು ವಿಶ್ವಾಸಕ್ಕೆ ಪಾತ್ರನೋ ಅಲ್ಲವೋ ಎಂಬದನ್ನು ತಿಳಿಯುವ ಸಲುವಾಗಿಯೇ ಆತನ ಆ ಎಲ್ಲ ಪ್ರಶ್ನೆಗಳಿದ್ದವು; ಆದರೆ ಆ ಪ್ರಶ್ನೆಗಳಿಂದ ಅವನು ನನ್ನನ್ನು ಗೆಲ್ಲದಾದನು. ನಾನು ನಂಬಿಗಸ್ಥನೆಂದೇ ಅವನ ಖಾತ್ರಿಯಾಯಿತು. ತದನಂತರ ನನ್ನಿಂದ ಶ್ರೀ ಬುದ್ಧದೇವರ ಹೆಸರಿನಿಂದ ಆಣೆ ಮಾಡಿಸಿ, ತಮ್ಮ ಆ ಗುಪ್ತಗುಂಪಿನ ಸಂಗತಿಗಳಾವವನ್ನೂ ಬಹಿರಂಗಪಡಿಸಬಾರದೆಂದು ಹೇಳಿದನು. ಒಂದುವೇಳೆ ನನ್ನಿಂದ ಅವುಗಳು ಪ್ರಕಟವಾದರೆ ಅದಕ್ಕೆ ತಕ್ಕ ಶಾಸನವಾದ ಮೃತ್ಯುವೇ ನನಗೆ ಪ್ರಾಪ್ತವಾಗುವದೆಂಬದು ತಿಳಿಯಿತು. ಅಂದಿನಿಂದ ನಾನು ಆತನ ದಲದಲ್ಲಿ ಸೇರಿಕೊಂಡಿರುವೆನು; ಮತ್ತು ಆತನು ತೋರಿಸಿಕೊಟ್ಟ ಪ್ರದೇಶದಲ್ಲಿ ನಾನು ಕಾವಲುಗಾರನಾಗಿರುತ್ತೇನೆ. ಸಿಂಹನ ಗವಿಯ ಒಂದು ಕಡೆಯ ಬಾಗಿಲ ಕಾಯುವ ಕೆಲಸವು ನನ್ನ ಕಡೆಗಿರುತ್ತದೆ. ನನ್ನ ಅವನ ನಡುವಿನ ಸಂಭಾಷಣವು ಪೂರೈಸಲು, ಆತನ ಆ ಅನುಚರರು ನನ್ನ ಕಣ್ಣು ಕಟ್ಟಿ ಅಲ್ಲಿಂದ ನನ್ನನ್ನು ಸಾಗಿಸುಕೊಂಡು ಬಂದರು. ನಾನು ಎಲ್ಲಿ ಪಹರೆ ಮಾಡುತ್ತಿರುವೆನೋ, ಆ ಸ್ಥಳವೆಲ್ಲಿರುವದೆಂಬದನ್ನು ನಾನು ಇಂದಿಗೂ ಬೊಟ್ಟು ಮಾಡಿ ತೋರಿಸಲಾರೆನು. ಕಾರಣವೇನೆಂದರೆ, ನನ್ನ ಪಹರೆಯ ಸರತಿ ಬಂದಾಗೆಲ್ಲ ಆತನ ಅನುಚರರು ನನ್ನ ಕಣ್ಣು ಕಟ್ಟಿಕೊಂಡೊಯ್ದು ಅಲ್ಲಿ ಬಿಡುವರು; ಸರತಿ ಮುಗಿದ ಕೂಡಲೆ ಮತ್ತೆ ಕಣ್ಣು ಕಟ್ಟಿ ನನ್ನ ವಾಸಸ್ಥಳಕ್ಕೆ ತಲುಪಿಸುವರು; ಆದರೂ ಆತನ ಆ ಗವಿಯ-ಮೇಲಂತಸ್ತಿನ ಮನೆಯ-ಸುತ್ತಲೂ ಅಂಥವೇ ಹಲವು ಮನೆಗಳಿರುವವು. ಅವನ್ನೆಲ್ಲ

ದಾಟಿ ಆ ಸಿಂಹನ ಗವಿಗೆ ತಲುಪುವದಂದರೆ ಅಸಂಭವದ ಮಾತೇ ಸರಿ. ಅವನ ಆ ಗವಿಯು ಸುತ್ತು ಮುತ್ತಲಿನ ದುರ್ಭೇದ್ಯವಾದ ದುರ್ಗಗಳಿಂದ ಸುರಕ್ಷಿತವಾಗಿರುವಂತಿದೆ. ಅವನ ಆ ಗವಿಗೆ ತಲುಪಬೇಕಾದರೆ ೪-೫ ಅಂತಸ್ತಿನ ಎಷ್ಟೋ ಅಟ್ಟಗಳನ್ನು ಹತ್ತಿ ಇಳಿಯಬೇಕಾಗುವದು. ಆ ಮೇಲಂತಸ್ತಿನ ಮನೆಗಳ ಒಂದು ದಿಕ್ಕಿಗೆ ಬ್ಲ್ಯಾಕ ಮನ್ಸ ಸ್ಟ್ರೀಟು, ಬೇರೆ ದಿಕ್ಕಿಗೆ ಸಿಂಗಾಪೂರ ರೋಡು ಇರುವವೆಂಬದನ್ನಷ್ಟೇ ನಾನು ಬಲ್ಲೆನು. ಆ ಎರಡೂ ಓಣಿಗಳ ನಡುವಿನ ಅಂಗಡಿ, ಹೋಟಲು, ಧರ್ಮಸಾಲೆ, ಜೂಜಿನ ಅಡ್ಡೆ ಇವೆಲ್ಲವೂ ಆ ಸಿಂಹನು ಒಡ್ಡಿದ ಬಲೆಗಳೇ ಆಗಿರುತ್ತವೆ. ಅವೆಲ್ಲವುಗಳೂ ಆತನಿಂದಲೇ ನಡಿಸಲ್ಪಡುತ್ತಿರುತ್ತವೆ. ಅಲ್ಲಿ ವಾಸಿಸುವ ಸಮಸ್ತ ಜನರೂ ಆತನ ನಂಬಿಗೆಯ ಅನುಚರರೇ. ಅವರೆಲ್ಲರೂ ಆತನ ಅನ್ನದಿಂದಲೇ ಪೋಷಿಸಲ್ಪಡುವರು. ಅವರೆಲ್ಲರ ಸಂಖ್ಯೆಯು ಅಲ್ಪವಾಗಿಲ್ಲ. ಸಾವಿರಗಟ್ಟಲೆ ಜನರಿರುವರು. ಚಾಯ್ನಾ ಫೀಲ್ಡಿನ ಬೇರೆ ಕಡೆಗಳಲ್ಲಿಯೂ ಆತನ ಅಂಗಡಿ, ಹೋಟಲ್ಲು, ಅಡ್ಡೆಗಳಿರುತ್ತವೆ.

ಸಿಸ್ತಬ್ಧಭಾವಬಂದ ಬ್ಲೇಕನು ಚಾಲೂ-ಇಯಾರಿಗನ ಸಂಗತಿಯನ್ನು ಕೇಳಿಕೊಂಡ ನಂತರ: ಹಾಗಾದರೆ ಆ ಪುಂಡರ ಮುಖ್ಯಸ್ಥನಾದ ಉಷಂಡ ಚಂಡನನ್ನು ಸೆರೆ ಹಿಡಿಯುವ ಕೆಲಸವು ಬಹು ಕಠಿಣವಾಗಿರುವದಲ್ಲವೆ?

ಚಾಲೂ:—ಖಂಡಿತವಾಗಿಯೂ ಬಲು ಬಿಕ್ಕಟ್ಟಿನದು. ಇಷ್ಟೇ ಅಲ್ಲ, ಬಹು ವಿಪಜ್ಜನಕವಾದದ್ದು. ಅವನ ಗವಿಯನ್ನು ಸೇರುವ ಯಾವ ಬೇರೆ ಬೇರೆ ದಾರಿಗಳಿರುವವೋ ಅವೆಲ್ಲವೂ ಬಳ್ಳೇ ಸುರಕ್ಷಿತಗಳಾಗಿರುತ್ತವೆ. ಅಲ್ಲಿಯ ಕಾವಲುಗಾರರು ಹಗಲು-ರಾತ್ರಿ ಎಡಬಿಡದ ಕಣ್ಣಲ್ಲಿ ಎಣ್ಣೆ ಹಾಕಿಕೊಂಡು ಕಾಯುತ್ತಿರುತ್ತಾರೆ. ಪೋಲೀಸರಿಗೆ ಯಾವ ಬಗೆಯಿಂದಲೂ ಆತನ ಸುಳಿವು ಹತ್ತಲಾರದು. ಸುಳಿವೇ ಹತ್ತದ ಬಳಿಕ, ಅವನನ್ನು ಸೆರೆ ಹಿಡಿಯುವದಂತೂ ಬಹು ದೂರದ ಮಾತು. ನನಗೆ ಆತನ ವಾಸಸ್ಥಳದ ಸಂಧಾನವು ಹತ್ತಿದರೆ, ನಾನು ನಿಮಗದನ್ನು ತಿಳಿಸುವೆನು; ಆದರೆ ಅವಸರ ಪಟ್ಟರ ಕೆಲಸವಾಗಲಾರದು.

ಚಾಲೂ-ಇಯಾಂಗನು ನಡುವೇ ಕೆಲ ನಿಮಿಷಗಳ ವರೆಗೆ ಸುಮ್ಮನೆ ಕುಳಿತು, ಬಳಿಕ: -ಇನ್ನು ನಾನು ನಿಮಗೊಂದು ಹೊಸ ಸಂಗತಿಯನ್ನು ತಿಳಿಸುವೆನು. ಅದನ್ನು ಕೇಳುತ್ತಲೆ ನೀವು ಸ್ತಂಭಿತರಾಗಿ ಬಿಡುವಿರಿ. ಯಾವನೊಬ್ಬ ಚೀನಿಗನ ಗಾಯಗೊಂಡ ಹೆಣವು ತೇಮ್ಸನದಿಯಲ್ಲಿ ಸಿಕ್ಕಿದೆಯೆಂಬದನ್ನು ನಾನು ವೃತ್ತಪತ್ರಗಳ ಮೂಲಕ ಓದಿ ತಿಳಿದಿರುತ್ತೇನೆ. ಆ ಹೆಣವು ನನ್ನದೇ ಎಂಬದನ್ನು ನೀವು ನಿರ್ಧರಿಸಿದ್ದಂತೆ ಈ ಮೊದಲು ನೀವೇ ಹೇಳಿರುತ್ತೀರಿ. ನೀವು ಆ ಅದ್ಭುತ ರಹಸ್ಯವನ್ನು ತಿಳಿಯದಾದಿರಿ; ಆದರೆ ನನ್ನ ಮಾತನ್ನು ಕೇಳಿದರೆ

ನಿಮಗಾ ರಹಸ್ಯವು ತಟ್ಟನೆ ಹೊಳೆಯುವದು. ನಾನು ಆ ಸಿಂಹನ ಗವಿಯ ಒಂದು ಬಾಗಿಲ ಕಾಯುವ ಕೆಲಸಕ್ಕೆ ಒಪ್ಪಿಕೊಂಡೆನೆಂದು ಆಗಲೆ ನಿಮಗೆ ತಿಳಿಸಿರುವೆನಷ್ಟೇ? ಆ ಬಾಗಿಲಲ್ಲಿ ನಾವಿಬ್ಬರು ಪಹರೆ ಮಾಡುತ್ತಿದ್ದೆವು. ನನ್ನ ಆ ಬೇರೆ ಸಂಗಡಿಗನೆಂದರೆ, ನನ್ನ ಮಿತ್ರನಾದ ಆ ಕಿನ್ ಫಂಡನೇ ಅಹುದು. ನಾವು ಆ ಬಾಗಿಲವನ್ನು ಬೇರೆ ಬೇರೆ ಸರತಿಗಳಿಂದ ಕಾಯುತ್ತಿದ್ದೆವು. ಸರತಿಯಿಲ್ಲದಾಗ ನಾವು ಆ ಬಾಗಿಲ ಬಳಿಯಿಂದ ತುಸ ಅಂತರದ ಮೇಲಿದ್ದ ಒಂದು ಚಿಕ್ಕಕೋಣೆಯಲ್ಲಿ ಕುಳಿತು, ನಿಂತು, ಮಲಗಿ ವಿಶ್ರಮಿಸುತ್ತಿದ್ದೆವು. ರಾತ್ರಿಯ ಸರತಿಯು ಬಂದಾಗ, ಕೆಲಸವಿಲ್ಲದವರು ಒಮ್ಮೊಮ್ಮೆ ಅಲ್ಲಿಂದ ಬೇರೆ ಕಡೆಗೆ ಅಡ್ಡಾಡಲಿಕ್ಕೂ ಹೋಗುತ್ತಿದ್ದೆವು.

ಒಂದು ದಿನ ರಾತ್ರಿಯಲ್ಲಿ ನಾನು ಒಂದು ಜೂಜಿನ ಅಡ್ಡೆಯಲ್ಲಿ ಕುಳಿತು ಜೂಜನ್ನಾಡುತ್ತಿದ್ದೆನು. ಅಷ್ಟರಲ್ಲಿ ಅಲ್ಲಿಗೊಂದು ವ್ಯಕ್ತಿಯು ಬಂದು ಆಗಾಗ್ಗೆ ನನ್ನ ಮುಖದ ಕಡೆಗೆ ಟಕಮಕರವೆಂದು ನೋಡತೊಡಗಿತು. ಆತನ ಆ ಕೃತಿಯಿಂದ ಅವನಿಗೆ ನನ್ನ ನಿಜವಾದ ಗುರುತು ಹತ್ತಿತೆಂಬಂತೆ ಭಾಸವಾಯಿತು. ಆತನ ಭಾವಭಂಗಿಗಳ ಮೇಲಿಂದ ನನಗೆ ಆತನ ಲಕ್ಷಣವು ಚನ್ನಾಗಿ ಕಂಡು ಬರಲಿಲ್ಲ. ಕೂಡಲೆ ನಾನು ಅಲ್ಲಿಂದೆದ್ದು ಹೋಗಿ ಆ ನಮ್ಮ ವಿಶ್ರಾಂತಿಯ ಕೋಣೆಯನ್ನು ಸೇರಿ ಮಲಗಿಬಿಟ್ಟೆನು. ಅಪರರಾತ್ರಿಯಲ್ಲಿ ಯಾರೋ ಇಬ್ಬರು ಸಮೀಪದಲ್ಲೇ ನಿಂತುಕೊಂಡು, ಏನನ್ನೋ ಆಲೋಚಿಸಹತ್ತಿದರು. ಅವರ ಆ ಆಲೋಚನೆಯಿಂದ ತಿಳಿದುದೇನೆಂದರೆ, ನಾನು ಪೋಲೀಸರ ಗುಪ್ತ ಕೆಲಸ ಮಾಡಲಿಕ್ಕೆಂದು ಅಲ್ಲಿ ಆ ಚಾಕರಿಗೆ ಸೇರಿರುತ್ತೇನೆಂದು. ಅದನ್ನು ನಿಜವೆಂದು ತಿಳಿದು, ನಮ್ಮ ಗುಂಪಿನ ಮುಖ್ಯಸ್ಥನಾದ ಉಮಂಗಚಂಡನು ನನ್ನನ್ನು ಕೊಲ್ಲಲಿಕ್ಕೆಂದು ಅವನನ್ನು ಅಲ್ಲಿಗೆ ಕಳಿಸಿದ್ದನು. ಆ ಅಪರಾತ್ರಿಯಲ್ಲಿ ಮಲಗಿಕೊಂಡಿರುವಾಗಲೇ ನನ್ನನ್ನು ಸಂಹರಿಸಿ ಹೊಳೆಯಲ್ಲಿ ಚೆಲ್ಲಬಿಡಬೇಕೆಂದು ಅಪ್ಪಣೆಯಾಗಿತ್ತಂತೆ.

ಅವರುಗಳ ಆ ಗುಪ್ತ ಸಂವಾದವನ್ನು ಕೇಳಿ ನಾನು ಪ್ರಾಣಭಯದಿಂದ ನಡುಗಹತ್ತಿದೆನು. ಓಡಿ ಹೋಗಿ ಆ ಕುತ್ತಿದಿಂದ ಪಾರಾದೇನೆಂಬ ಆಶೆಯಿರಲ್ಲ. ಅದರಿಂದ ಈ ಸಂಕಟದೊಳಗಿಂದ ಹೇಗೆ ಪಾರಾಗಬೇಕೆಂಬ ಬಗ್ಗೆ ಅಲ್ಲಿ ಮಲಗಿಕೊಂಡೇ ಯೋಚಿಸಿದೆನು. ಕಡೆಗೊಂದು ಯುಕ್ತಿಯು ಸೂಚಿಸಿತು. ಆಗ ನಾನು ಮೆಲ್ಲನೆ ಎದ್ದು ಆ ಸಿಂಹನ ಗವಿಯ ಬಾಗಿಲ ಬಳಿಗೆ ಹೋಗಲು, ಅಲ್ಲಿ ಆ ನನ್ನ ಮಿತ್ರನಾದ ಕಿನ್ ಫಂಡನು ತೂಕಡಿಸುತ್ತ ಪಹರೆ ಮಾಡುತ್ತಿದ್ದನು. ನಾನು ಹುಲಿಯ ಹಾಗೆ ಒಮ್ಮೆಲೆ ಜಿಗಿದು ಆತನ ಕುತ್ತಿಗೆ ಹಿಡಿದೆನು; ಹಾಗು ಅದನ್ನು ಹತ್ತಿಕ್ಕಿ ಹಿಡಿದು, ಅವನು ಒದರದಂತೆ ಮಾಡಿದೆನು. ನಾನು ಒಳ್ಳೇ

ಕಸುವಿನಿಂದ ಅವನ ಕುತ್ತಿಗೆಯನ್ನು ಹಿಚುಕಲು, ಅವನ ಉಸಿರು ಕಟ್ಟಿ ಸತ್ತೇ ಹೋದನು! ಅವನು ಸತ್ತಿರುವದು ಖಂಚಿತವೆಂಬದು ಖಾತ್ರಿಯಾದ ಬಳಿಕ, ನಾನು ಅವನ ಕುತ್ತಿಗೆಯ ಮೇಲಿನ ಕೈ ತೆಗೆದೆನು. ನನ್ನ ಅವನ ಮುಖಚೆಯೆಗಳು ಕೇವಲ ಸಾದೃಶ್ಯವಾಗಿದ್ದವೆಂಬದನ್ನು ನಾನು ನಿಮಗೆ ಮೊದಲೇ ತಿಳಿಸಿರುವೆನು. ಆ ಬಳಿಕ ನಾನು ಆತನ ಮೃತದೇಹವನ್ನು ಹೆಗಲ ಮೇಲೆ ಹೊತ್ತುಕೊಂಡೊಯ್ದು ಆ ವಿಶ್ರಾಂತಿ ಕಕ್ಷದೊಳಗಿನ ನನ್ನ ಹಾಸಿಗೆಯ ಮೇಲೆ ಮಲಗಿಸಿದೆನು; ಹಾಗು ನನ್ನ ಕೈಬೆರಳೊಳಗಿನ ಆ ಬಹುಮೂಲ್ಯ ಉಂಗುರವನ್ನು ತೆಗೆದು ಆತನ ಕೈಬೆರಳೊಳಗಿಟ್ಟೆನು. ಬಳಿಕ ಆತನ ಮೈಮೇಲೆ ಚೆನ್ನಾಗಿ ಹೊದಿಕೆಯನ್ನು ಹೊಚ್ಚಿದೆನು. ಆಕಸ್ಮಿಕವಾಗಿ ನೋಡುವವರಿಗೆ ಚಳಿಯ ಬಾಧೆಗಾಗಿ ಅವನು ಹಾಗೆ ಮೈತುಂಬ ಹೊದ್ದುಕೊಂಡಿರುತ್ತಾನೆಂದು ಸಹಜವಾಗಿ ತಿಳಿಯುವಂತಿತ್ತು.

ಆ ಮೇಲೆ ನಾನು ನನ್ನ ಬಳಿಯ ಬಣ್ಣದಿಂದ ನನ್ನ ಮುಖಚೆಯೆಯನ್ನು ತುಸ ಭಿನ್ನಮಾಡಿಕೊಂಡೆನು. ಅದರಿಂದ ನನ್ನನ್ನೇ ಕಿನ್ ಫಂಡನೆಂದು ತಿಳಿಯುವ ಹಾಗಾಯಿತು. ಜನರು ನನ್ನನ್ನು ಕಿನ್ ಫಂಡನೆಂದು ತಿಳಿಯಹತ್ತಿದ್ದರಿಂದ ನನಗೆ ಬಹಿರಂಗದಲ್ಲಿ ಬಹು ಸಮಾಧಾನವೆನಿಸಿತು; ಆದರೆ ನನ್ನ ಆ ಮಿತ್ರನ ಕೊಲೆಯಿಂದ ಅಂತರಂಗದಲ್ಲಿ ಮಾತ್ರ ಬಹು ಅನುತಾಪವಾಗಹತ್ತಿತು; ಆದರೆ ಒಡೆಯರೇ, ಆತ್ಮರಕ್ಷಣೆಗೆ ಅನ್ಯ ಉಪಾಯವೇ ಉಳಿಯದ್ದರಿಂದ ನಾನು ಹಾಗೆ ಮಾಡಬೇಕಾಯಿತು. ಬಳಿಕ ನಾನು ಅಲ್ಲಿಂದೆದ್ದು ಹೋಗಿ ಕಿನ್‌ಫಂಡನ ಬದಲಾಗಿ ಬಾಗಿಲ ಬಳಿಯಲ್ಲಿ ಪಹರೆ ಮಾಡಹತ್ತಿದೆನು. ಮುಂದೆ ಕೆಲ ಹೊತ್ತಿನಲ್ಲಿಯೇ ಆ ಗುಪ್ತ ಕೊಲೆಗಡಕರಿಬ್ಬರೂ ಆ ನನ್ನ ಕೋಣೆಯನ್ನು ಹೊಕ್ಕು, ಆ ಹೆಣದ ಮೈಮೇಲಿನ ಹೊದಿಕೆಯನ್ನು ಜಗ್ಗಿ ತೆಗೆದು, ಅದರ ಮೋರೆ, ಮೈ, ಕೈಗಳ ಮೇಲೆ ತಮ್ಮ ಬಳಿಯ ಹದನಾದ ಚೂರಿಯಿಂದ ಹಲವು ಗಾಯಗಳನ್ನು ಮಾಡಿದರು. ಗಾಢನಿದ್ರೆಯ ಭರದಲ್ಲಿ ನಾನು ಹೂ-ಚೂ ಕೂಡ ಅನ್ನದೆ ಪಂಚತ್ವವನ್ನೈದಿದೆನೆಂಬದನ್ನು ತಿಳಿದ ಆ ಹತ್ಯಾಕಾರಿಗಳು ಬಹು ಮೋದಗೊಂಡು, ಆ ಹೆಣವನ್ನು ಹೊತ್ತುಕೊಂಡು ಹೋದರು. ಮರುದಿನ ಆ ಚಾಯ್ನಾ ಫೀಲ್ಡಿನೊಳಗಿನವರೆಲ್ಲರೂ ಚಾಉ-ಇಯಾಂಗನು ಸತ್ತನೆಂದೂ, ಆತನ ಹೆಣವು ನದಿಯಲ್ಲಿ ಚೆಲ್ಲಲ್ಪಟ್ಟಿರುವದೆಂದೂ ತಿಳಿದರು. ಅಂದಿನಿಂದ ನನಗಾವ ಸಂದೇಹವೂ ಉಳಿಯಲಿಲ್ಲ. ಅಂದಿನ ಆ ರಾತ್ರಿಯಿಂದ ನಾನೇ ಕಿನ್ ಫಂಡನಾಗಿರುತ್ತೇನೆ. ಯಾವ ಹೆಣವನ್ನು ಪೋಲೀಸರು ತೇಮ್ಸನದಿಯೊಳಗಿಂದ ತಂದು ನಿಮಗೆ ತೋರಿಸಿದ್ದರೋ, ಅದು ನನ್ನದಲ್ಲ; ಆ ಕಿನ್ ಫಂಡನದೇ. ಆತನನ್ನು ಕೊಂದಾಗಿನಿಂದ

ನನ್ನ ಮನಸ್ಸಿಗೆ ಎಳ್ಳಷ್ಟೂ ಸಮಾಧಾನವಿಲ್ಲ. ನನ್ನಿಂದ ಅದೆಷ್ಟೋ ಅನುಚಿತ ಕೆಲಸವಾಯಿತು!

ಬ್ಲೇಕ:—ಅಹುದು; ಆ ಕೆಲಸವೇನೋ ನಿಂದ್ಯವೇ ಸರಿ; ಆದರೆ ಆತನನ್ನು ಕೊಲ್ಲದಿದ್ದರೆ ನಿನ್ನ ಪ್ರಾಣವುಳಿಯುವ ಆಶೆಯೋ ಇರಲಿಲ್ಲ. ನಿನ್ನಂತೆ ಸಂಕಟ ಗ್ರಸ್ತರಾದ ಬಹು ಜನರು ನಿನ್ನ ಮಾರ್ಗವನ್ನೇ ಅನುಸರಿಸುವರು; ಆದರೂ ಕಡೆಗೆ ಅನುತಾಪಗೊಳ್ಳಲಾರರು. ನೀನು ಸಜ್ಜನನೆಂದೇ ನಿನಗೆ ಹೀಗೆ ಅನುತಾಪ ವಾಗುತ್ತಿದೆ. ಅದಿರಲಿ ಬಿಡು. ನಮ್ಮ ಸ್ನಿತ್ಥನು ಯಾವ ಇಂಗ್ಲಿಷ ತರುಣಿಯ ಅನುಸಂಧಾನ ಹಚ್ಚಿಕೊಂಡು ಬಂದಿರುವನೋ, ಅವಳ ಬಗ್ಗೆ ನಿನಗೇನಾದರೂ ತಿಳಿ ದಿದೆಯೇನು? ನಾವು ಅವಳ ಸುಳಿವು ಹಿಡಿದೆವೆಂದು ತಿಳಿದು, ಆ ದುಷ್ಟರು ಅವ ಳನ್ನು ಕೊಂದು ಬಿಡಲಿಕ್ಕಿಲ್ಲವಷ್ಟೇ?

ಜಾಲೂ:—ಇಲ್ಲ-ಧಣಿಯರೇ. ನನಗಂತೂ ಹಾಗೆನಿಸುವದಿಲ್ಲ ನಾನು ನಮ್ಮ ಗುಂಪಿನೊಳಗಿನ ಹಲಕೆಲವು ಜನರ ಬಾಯಿಂದ ಕೇಳಿರುವದೇನೆಂದರೆ, ಯಾರೋ ಇಬ್ಬರು ಕಳ್ಳರು ಕಮಲಾಲಯವೆಂಬ ಹೋಟಲಿನ ಮೇಲಟ್ಟವನ್ನು ಹತ್ತಿ ಹೋಗಿ ಕಳವು ಮಾಡಲಿದ್ದರು; ಆದರೆ ಅವರನ್ನು ಹಿಡಿಯ ಹೋಗಲು, ಅವರು ನಮ್ಮಲ್ಲಿಯ ಒಬ್ಬನನ್ನು ಗಾಯಗೊಳಿಸಿ ಓಡಿ ಹೋಗಿರುವರಂತೆ. ಆ ಕಳ್ಳರಿಂದ ಏನನ್ನೂ ಕಳವು ಮಾಡಲಿಕ್ಕಾಗಲಿಲ್ಲ. ಆದರಿಂದ ನೀವೇ ಅಲ್ಲಿಗೆ ಬಂದು ಅವಳ ಪತ್ತೆ ಹಚ್ಚುವ ಕೆಲಸ ನಡಿಸಿದವರೆಂಬದು ಅವರಿಗೆ ತಿಳಿಯಲೇ ಇಲ್ಲ. ಯಾಕಂದರೆ, ಯಾವ ನನ್ನನ್ನು ಅವರು ಪೋಲೀಸರ ಗುಪ್ತಚರನೆಂದು ಅದು ಮೊದಲೇ ಗೊತ್ತುಪಡಿಸಿ ನನ್ನ ಕೊಲೆಗೆಯ್ದು ಬಿಟ್ಟದ್ದರಿಂದ, ಅವರೆಲ್ಲರೂ ನಿಶ್ಚಿಂತ ರಾಗಿದ್ದಾರೆ. ಇವೆಲ್ಲ ಆನುಷಂಗಿಕ ಕಾರಣಗಳ ಮೂಲಕ ಅವರು ಆ ಇಂಗ್ಲಿಷ ರಮಣಿಯನ್ನು ಯಾವ ಬಗೆಯಿಂದಲೂ ಕಾಡಿಸಿ ಪೀಡಿಸಲಾರರೆಂದು ನನಗನಿ ಸುತ್ತಿದೆ; ಆದರೆ ಆ ನಮ್ಮ ದಳಪತಿಯು ಆ ಲಲನೆಯನ್ನು ಯಾವ ಉದ್ದೇಶ ದಿಂದ ಹಾಗೆ ಸೆರೆಯಲ್ಲಿರಿಸಿರುವನೆಂಬದರ ಇಂಗಿತವೇ ತಿಳಿಯದಾಗಿದೆ. ಆ ಕಾರ ಣವು ತಮಗಾದರೂ ತಿಳಿದಿದೆಯೇನು?

ಬ್ಲೇಕ:—ಓಹೋ! ನನಗದು ತಿಳಿದಿದೆ; ಆದರೆ ಅದನ್ನು ಈಗಲೆ ಒಡ ನುಡಿಯುವದು ಸರಿಯಲ್ಲ. ತಕ್ಕ ಸಮಯದಲ್ಲಿ ನಿನಗದನ್ನು ತಿಳಿಸಲಾಗುವದು. ಇನ್ನು ನಾನು ನಿನಗೆ ಮತ್ತೊಂದು ಸಂಗತಿಯ ಬಗ್ಗೆ ಕೇಳುವೆನು. ಆ ಚಾಯ್ನಾ ಫೀಲ್ಡಿನ ಸಿಂಹನ ಗವಿಯೊಳಗಿಂದ ಇಲ್ಲವೆ ಅದಕ್ಕೆ ಹೊಂದಿಕೊಂಡಿದ್ದ ಬೇರೆ ಯಾವುದೊಂದು ಮನೆಯಿಂದ ತೇಮ್ಸ ನದಿಯವರೆಗೆ ಸುರಂಗದ ದಾರಿಯಿರುವು ದನ್ನು ನೀನು ಬಲ್ಲೆಯಾ? ಪೋಲೀಸರು ಅಕಸ್ಮಾತ್ತಾಗಿ ತಮ್ಮನ್ನೆಲ್ಲ ಆಕ್ರಮಿಸ

ಬಂದರೆ, ತಟ್ಟನೆ ಓಡಿಹೋಗಲಿಕ್ಕೆ ಅವರು ಇಂಥ ಗುಪ್ತದಾರಿಯ ವ್ಯವಸ್ಥೆಯನ್ನು ಮಾಡಿಟ್ಟಿಲ್ಲವೆಂದರೆ ನಂಬಲಿಕ್ಕಾದೀತೇ?

ಚಾಊ:—ತಮ್ಮ ಅನುಮಾನವು ಸುಳ್ಳಲ್ಲ. ಅಂಥದೊಂದು ಗುಪ್ತಮಾರ್ಗವಿರುತ್ತದೆಂಬದನ್ನೂ ಕೇಳಿರುತ್ತೇನೆ; ಆದರೆ ಅದು ಎಲ್ಲಿದೆಯೆಂಬದು ತಿಳಿದಿರುವದಿಲ್ಲ.

ಬ್ಲೇಕ:—ಉಷಂಡ ಚಂಡನನ್ನು ಕೈಸೆರೆ ಹಿಡಿಯುವದು ಕಠಿಣ ಕೆಲಸವೇನೋ ನಿಜ. ಅವನನ್ನು ಆತನ ಮುಖ್ಯ ಮುಖ್ಯ ಅನುಚರರೊಡನೆ ಒಮ್ಮೆಲೆ ಹಿಡಿಯುವ ಸುಸಂಧಿಯು ದೊರೆಯದೆ ಮತ್ತು ಅವರೆಲ್ಲರ ಅಪರಾಧಗಳ ಪ್ರಮಾಣಗಳನ್ನು ಸಂಗ್ರಹಿಸುವದು ಅಸಂಭವವಾದರೆ ನಾವು ಆ ಕೆಲಸಕ್ಕೆ ಪ್ರವೃತ್ತರಾಗುವದೇ ವಿಹಿತವಲ್ಲ. ಆತನ ಅನುಚರರನ್ನೆಲ್ಲ ಬಿಟ್ಟು, ಕೇವಲ ಅವನೊಬ್ಬನನ್ನೇ ಹಿಡಿಯುವದರಿಂದ ಏನೂ ಪ್ರಯೋಜನವಿಲ್ಲ ಅದರಿಂದ ಆ ದುರ್ವೃತ್ತರ ತಂಡದ ನಿರ್ಮೂಲನವಾಗಲಾರದು.

ಚಾಊ:—ಧಣಿಯರೇ, ಅಂಥದೊಂದು ಸುಯೋಗವು ಬೇಗನೆ ಬರತಕ್ಕದ್ದಿದೆ; ಆದರೆ ಅದು ಖಂಡಿತವಾಗಿ ಇನ್ನೆಷ್ಟು ದಿನಗಳಿಗೆ ಬರುತ್ತದೆಂಬದು ಇಂದಿಗೆ ತಿಳಿದಿಲ್ಲ. ಆ ಸಂಗತಿಯನ್ನಾದರೂ ಕೇಳಿಕೊಳ್ಳಿರಿ. ನಮ್ಮ ಉಷಂಡ ಚಂಡನು ಲಂಡನ ಪಟ್ಟಣದೊಳಗಿನ ಚೀನೀ ವಿದ್ರೋಹಿಗಳ ಮುಖ್ಯಸ್ಥನಾಗಿದ್ದರೂ ಅವನು ಈ ಗುಪ್ತ ದಲದ ಸರ್ವಶ್ರೇಷ್ಠ ಪ್ರಮುಖನಲ್ಲ. ಈ ವಿದ್ರೋಹಿಗಳ ಪ್ರಧಾನ ಕರ್ತನ ಹೆಸರು ಉಷೋ ಸೆಂಡನು. ಹಾಂಗಕಾಂಗ ಪಟ್ಟಣವೇ ಆತನ ವಾಸಸ್ಥಳವು. ಅವನು ಆ ತನ್ನ ಸ್ಥಳದಲ್ಲೇ ಕುಳಿತು ಪೃಥ್ವಿಯೊಳಗಿನ ಹಲವು ದೇಶಗಳಲ್ಲಿ ವಿದ್ರೋಹತೆಯನ್ನು ನಡೆಸುತ್ತಿರುತ್ತಾನೆ. ಈ ಲಂಡನ್ನಿನೊಳಗಿನ ತನ್ನ ವ್ಯವಸಾಯದ ಲೆಕ್ಕ-ಪತ್ರಗಳನ್ನು ನೋಡುವ ಸಲುವಾಗಿ ಆತನು ಇಲ್ಲಿಗೆ ಶೀಘ್ರದಲ್ಲಿಯೇ ಬರತಕ್ಕವನಿರುತ್ತಾನೆ. ಆತನ ಹಡಗವು ಇಂಗ್ಲಂಡ ದೇಶಕ್ಕೆ ಸಮೀಪಿಸಿದೆ ಆ ಉಷೋ ಸೆಂಡನು ಬಂದ ಕೂಡಲೆ ಇಲ್ಲಿಯ ಪ್ರಮುಖನಾದ ಉಷಂಡ ಚಂಡನು ತನ್ನ ಮುಖ್ಯ ಮುಖ್ಯ ಅನುಚರರದೊಂದು ಸಭೆ ಕೂಡಿಸಲಿರುವನು. ಆ ಸಭೆಯಲ್ಲಿ ತಮ್ಮ ಎಲ್ಲ ವ್ಯವಸಾಯಗಳನ್ನು ಯಾವ ಹೊಸ ಹೊಸ ಉಪಾಯಗಳಿಂದ ಹೇಗೆ ಉನ್ನತಗೊಳಿಸಬೇಕೆಂಬ ಬಗ್ಗೆ ಠರಾವುಗಳಾಗುವವು. ಆ ದಿವಸ ನೀವು ಅವರೆಲ್ಲರನ್ನು ಕೈಸೆರೆ ಹಿಡಿಯಲಿಕ್ಕೆ ಪ್ರಯತ್ನಿಸಿದರೆ, ಅವರಲ್ಲಿಯ ಸಣ್ಣ ದೊಡ್ಡವರೆಲ್ಲರೂ ಒಮ್ಮೆಲೆ ಕೈಸೇರಬಹುದಾಗಿದೆ; ಆದರೆ ಎಂದು ಹಾಗು ಎಲ್ಲಿ ಅವರ ಆ ಸಭೆಯು ಕೂಡತಕ್ಕದ್ದೆಂಬದು ಇದುವರೆಗೂ ತಿಳಿದು ಬಂದಿಲ್ಲ.

ಬ್ಲೇಕ:— ಆ ಸಂಗತಿಯು ಬಹು ಮಹತ್ವದ್ದು. ನಿನಗೆ ಅದು ತಿಳಿದ ಕೂಡಲೆ ನನಗೆ ತಿಳಿಸು. ಒಂದೆರಡು ದಿನ ಮುಂಗಡವಾಗಿ ತಿಳಿದರೆ, ಒಳ್ಳೇದಾಗುವದು. ಅಷ್ಟು ಮುಂಗಡ ತಿಳಿಯುವದಾಗದಿದ್ದರೂ, ಕೆಲ ತಾಸು ಮುಂಗಡವಾದರೂ ತಿಳಿಯಬೇಕು.

ಚಾಲೂ: ಖಂಡಿತವಾಗಿಯೂ ತಿಳಿಸುವೆನು. ಅದು ನನಗೆ ತಿಳಿದ ಕೂಡಲೆ ನಿಮ್ಮ ಮನೆಗೆ ಬಂದು ಹೇಳಿ ಹೋಗುವೆನು. ದಿನಾಲು ಮಧ್ಯಾಹ್ನದ ಮೂರು ಗಂಟೆಯಿಂದ ರಾತ್ರಿಯ ಹನ್ನೊಂದರ ವರೆಗೆ ನನಗೆ ಬಿಡುವಿರುತ್ತದೆ. ಆ ಅವಧಿಯಲ್ಲಿ ನಾನು ಬೇಕಾದಾಗ ಬಂದು ನಿಮ್ಮನ್ನು ಕಾಣುವೆನು.

ಬ್ಲೇಕ:— ನಡುನಡುವೆ ನಿನ್ನ ಭೇಟಿಯಾಗುವ ಬೇರೆ ಕಾರಣಗಳೂ ಉಂಟು; ಆದರೆ ನೀನು ದಿನಾಲು ಇಲ್ಲಿಗೆ ಬರಹತ್ತಿದರೆ ನಿನ್ನ ವಿಷಯವಾಗಿ ಜನರು ಸಂದೇಹಗೊಳ್ಳಬಹುದು. ನೀನೇ ಯಾವ ದಿನ ನನಗೆ ಭೇಟಿಯಾಗಬೇಕಾಗುವದೋ, ಆ ದಿನ ಸಂಜೆಯಾಗುತ್ತಲೆ ನನ್ನಲ್ಲಿಗೆ ಬಂದು ಬಿಡು. ನೀನು ದಿನಾಲು ಸಂಜೆಗೆ ಇಲ್ಲಿಗೆ ಬರುವಾಗ ನಮ್ಮ ಮನೆಯ ಮುಂದಿನ ದಾರಿಯಿಂದ ಬರಬೇಡ; ಹಿಂದಿನ ದಾರಿಯಿಂದಲೇ ಬರುತ್ತಿರು. ನಾನು ನಿನ್ನನ್ನು ಅವಶ್ಯವಾಗಿ ಕಾಣಬೇಕಾದ ದಿವಸ ಈ ನನ್ನ ಕೋಣೆಯ ಆ ಬದಿಯ ಕಿಟಕಿಯ ಒಡಕು ಕಾಜಿನ ಮೇಲೊಂದು ಕೆಂಪು ಕಾಗದವನ್ನಂಟಿಸಿರುತ್ತೇನೆ. ಅದನ್ನು ಕಂಡೊಡನೆ ನನಗೆ ಭೇಟಿಯಾಗು. ತಿಳಿಯಿತೇ?

ಚಾಲೂ:— ತಿಳಿಯಿತು-ತಿಳಿಯಿತು. ಇದನ್ನು ನಾನು ಚೆನ್ನಾಗಿ ನೆನಪಿಡುವೆನು.

ಬ್ಲೇಕ:- ಇನ್ನೊಂದು ಮಾತೇನಂದರೆ, ನೀನು ಆ ಬ್ಲ್ಯಾಕ ಮನ್ಸ ಸ್ಟ್ರೀಟಿನೊಳಗಿನ ಯಾವ ಮನೆಯೊಳಗಿಂದ ನನ್ನನ್ನೂ-ಸ್ಮಿತ್ಥನನ್ನೂ ಆ ಸಂಕಟದಿಂದ ಪಾರು ಮಾಡಿ ಕಳಿಸಿದೆಯೋ, ನಾನು ಯಾವುದೊಂದು ರಾತ್ರಿಯಲ್ಲಿ ಒಬ್ಬೊಂಟಿಗನೇ ವಿಶೇಷ ಕೆಲಸಕ್ಕೆಂದು ಅಲ್ಲಿಗೆ ಬಂದರೆ, ನೀನು ನನ್ನನ್ನು ಆ ಮನೆಯೊಳಗೆ ಪ್ರವೇಶಿಸಗೊಡಬಲ್ಲೆಯಾ?

ಅದನ್ನು ಕೇಳಿ ಚಾಲೂ-ಇಯಾಂಗನು ಕೆಲ ಕ್ಷಣಗಳ ವರೆಗೆ ತಲೆ ಕೆಳಗೆ ಹಾಕಿ ಕುಳಿತು ವಿಚಾರಮಗ್ನನಾದನು. ತದನಂತರ ಅವನು: ಆ ವಿಷಯದಲ್ಲಿ ನನ್ನ ಸ್ವಂತದ ಅಡ್ಡಿಯೇನೂ ಇರುವದಿಲ್ಲ. ಆ ಮನೆಯೊಳಗಿಂದ ನೀವು ನಿಮ್ಮ ಇಚ್ಛೆಯ ಮೇರೆಗೆ ಸಮೀಪದ ಬೇರೆ ಬೇಕಾದ ಮೋಲಟ್ಕವನ್ನೂ ಪ್ರವೇಶಿಸಬಹುದು; ಆದರೆ ನೀವು ಎಷ್ಟು ಚೆನ್ನಾಗಿ ಛದ್ಮವೇಷವನ್ನು ತಾಳಿದರೂ, ಆ ಕೆಲಸವು ನಿಮಗೆ ಬಹು ಕಠಿಣವಾದೀತು.

ಬ್ಲೇಕ:—ಯಾವುದೊಂದು ಗುಪ್ತಸಂವಾದವನ್ನು ತಿಳಿಯುವ ಪ್ರಸಂಗದಲ್ಲಿ ಎಂಥ ಕಠಿಣ ಎಡರು ಬಂದರೂ ನಾನು ನನ್ನ ಕೃತಕಾರ್ಯದಿಂದ ಚ್ಯುತನಾಗುವವನಲ್ಲ; ಆದರೆ ಆ ಸುಯೋಗ ನಿರೀಕ್ಷಣಕ್ಕಾಗಿ ನಾನಿನ್ನು ಹೆಚ್ಚು ದಿನ ದಾರಿ ಕಾಯುವಂತಿಲ್ಲ. ಆ ಸುಯೋಗವು ತಾನಾಗಿ ಬೇಗನೆ ಒದಗದಿದ್ದರೆ, ಪೋಲೀಸರ ಸಹಾಯದಿಂದ ಆ ಕೆಲಸವನ್ನು ನಾನು ಬೇಗನೆ ಮಾಡಲೇ ಬೇಕಾಗದೆ.

ಚಾಲೂ:—ತಾವು ಅಷ್ಟೊಂದು ಅಧೀರರಾಗುವ ಕಾರಣವಿಲ್ಲ. ಶೀಘ್ರವೇ ಆ ಸುಸಂಧಿಯು ಪ್ರಾಪ್ತವಾಗುವದು. ಯಾಕಂದರೆ, ಹಾಂಗಕಾಂಗದೊಳಗಿನ ಆ ಪ್ರಮುಖ ಗೃಹಸ್ಥನು ಲಂಡನ್ನಿಗೆ ಬಹಲಿಕ್ಕೆ ಇನ್ನು ಹೆಚ್ಚು ವಿಲಂಬವಿಲ್ಲ; ಆದರ ಅವರ ಆ ಗುಪ್ತಸಭೆಯು ಎಲ್ಲಿ ಕೂಡುವದೆಂಬದು ಮಾತ್ರ ನನಗೆ ತಿಳಿದಿಲ್ಲ. ತಾವು ಆ ಸ್ಥಳಕ್ಕೆ ಬರುವ ಬಗೆ ಹೇಗೆ? ಆ ಬಗ್ಗೆ ನನ್ನಿಂದ ನಿಮಗಾವ ಸಹಾಯವನ್ನೂ ಮಾಡಲಿಕ್ಕೆ ಶಕ್ಯವಾಗಲಿಕ್ಕಿಲ್ಲ.

ಬ್ಲೇಕ.—ಅದನ್ನೆಲ್ಲ ತ ಮೇಲ ಆಲೋಚಿಸುವಾ. ಈ ಮಧ್ಯದಲ್ಲಿ ನೀನು ನಿಮ್ಮ ಆ ಸಿಂಹನನ್ನಂದಾದರೂ ಕಂಡಿದ್ದಿಯೇನು?

ಚಾಲೂ:—ಒಡೆಯರೇ, ಇಲ್ಲ. ಅವನು ತನ್ನ ಗವಿಯೊಳಗಿಂದ ಬಹುಶಃ ಹೊರಹೊರಡುವದಿಲ್ಲ. ಆತನ ಗವಿಯ ಪತ್ತೆಯು ನನಗಿದುವರಗೂ ಹತ್ತಿರುವದಿಲ್ಲ. ಅವನು ಎಷ್ಟು ಚತುರನಾಗಿರುವನೋ, ಅಷ್ಟೇ ತಾರ್ಕಿಕನಾಗಿರುವನು.

ಬ್ಲೇಕ.—ಹೀಗಿದ್ದರೂ ಆ ಗುಪ್ತ ಸಂಗತಿಗಳನ್ನು ತಿಳಿಯುವ ವಿಷಯದಲ್ಲಿ ನೀನು ಹತಾಶನಾಗಬೇಡ. ಈ ಕೆಲಸವು ಪೂರಯಿಸಿದೊಡನೆ ನೀನು ಬೇಡುವಷ್ಟು ಇನಾಮವು ಕೊಡಲಾಗುವದು. ನನ್ನ ಮಾತನ್ನು ಮರೆಯಬೇಡ. ಏನೇ ಆಗಲಿ, ನೀನನ್ನು ಇಲ್ಲಿ ಹಚ್ಚು ನಿಲ್ಲಬೇಡ. ಇರತಕ್ಕಲ್ಲಿ ನನ್ನನ್ನು ಕಾಣಿದ್ದರ, ನಮ್ಮ ಮನುಷ್ಯನು ನಿನ್ನ ವಿಷಯವಾಗಿ ಸಂದೇಹಗೊಳ್ಳಬಹುದು, ಆದರೂ ನೀನು ಕನ್‌ಫ್ಯುಡನ ವೇಷವನ್ನು ಬಹು ಚಾತುರ್ಯದಿಂದ ಧರಿಸಿರುವ. ಆದರಿಂದ ನನ್ನನ್ನು ಚಾಲೂ-ಇಯಾಂಗನೆಂದು ಯಾರಾದರೂ ತಿಳಿಯಬಹುದೆಂದು ಹೇಳಲಿಕ್ಕಾಗುವದಿಲ್ಲ,

ಚಾಲೂ-ಇಯಾಂಗನು ಬ್ಲೇಕನ ಅಪ್ಪಣೆ ಪಡೆದು, ಆ ರಾತ್ರಿಯ ಸಮಯದಲ್ಲಿ ವೈನಂಗಳನಂತೆ ಎತ್ತೋ ಮಾಯವಾಗಿ ಬಿಟ್ಟನು. ಅವನು ಹೊರಟು ಹೋದ ಬಳಿಕ ಬ್ಲೇಕನು ಸ್ಮಿಥನನ್ನು ಕುರಿತು: ಸ್ಮಿತ್ಥಾ, ನಾವು ಬೇಗನೆ ಮತ್ತೊಂದು ಸಂಕಟಕ್ಕೀಡಾಗಬೇಕಾಗುವದೆಂದು ನನಗನಿಸುಹತ್ತಿದೆ. ಚಾಯ್ನಾ ಫೀಲ್ಡನ ಸಿಂಹನು ಅದಲ್ಲಿ ಅಡಗಿ ಕುಳಿತು ತನ್ನ ಈ ವಿದ್ರೋಹತೆಯ ಯಂತ್ರವನ್ನು ನಡಿಸುತ್ತಿರುವನೋ ಅದನ್ನು ಬಾಯಿಂದ ಉಸುರುವದೂ ಕಠಿಣವಾಗಿದೆ,

ಇದಲ್ಲದೆ, ಆತನ ಆ ಗುಪ್ತ ಸಭೆಯು ಕೂಡುವ ಸ್ಥಳವಾವುದು? ಅಲ್ಲಿ ಕೂಡಿದವರೆಲ್ಲರನ್ನು ಕೈಸೆರೆ ಹಿಡಿಯುವದು ಶಕ್ಯವೊ-ಅಶಕ್ಯವೊ? ಅದರಂತೆ ಅವರ ಅಪರಾಧಗಳನ್ನು ತಿಳಿಸಲಾಗುವ ಪ್ರಮಾಣಗಳು ಆ ಸ್ಥಳದಲ್ಲಿ ಸಂಗ್ರಹಿಸಲ್ಪಟ್ಟಿರುವವೋ ಇಲ್ಲವೊ? ಇವುಗಳನ್ನೆಲ್ಲ ಗೊತ್ತುಮಾಡಿಕೊಳ್ಳಲಿಕ್ಕೆ ಉಪಾಯವೇ ತೋಚದಾಗಿದೆ. ಈ ಚಾಊ-ಇಯಾಂಗನ ಸಹಾಯವು ದೊರೆತರೂ ಕೃತಕಾರ್ಯವಾಗುವದು ಸಹಜವಾಗಿಲ್ಲ. ಅವರುಗಳ ಗುಪ್ತ ಅಡ್ಡೆಯಿಂದ ನದೀತೀರದವರೆಗೆ ಯಾವ ಸುರಂಗವು ತೋಡಲ್ಪಟ್ಟಿದೆಯೋ, ಅದನ್ನು ನಾವು ಮೊದಲೇ ಕಂಡು ಹಿಡಿಯದಿದ್ದರೆ, ಪೋಲೀಸರ ಸುಳಿವು ಹತ್ತಿದ ಕೂಡಲೆ ಆ ದುರ್ವೃತ್ತರು ಆ ಭೂಗತಮಾರ್ಗದಿಂದ ಪಲಾಯನ ಸೂಕ್ತವನ್ನು ಪಠಿಸುವರು. ಹಾಗೆ ಆದರೆ, ನಮ್ಮಿಂದ ಯಾರನ್ನೂ ಕೈಸೆರೆ ಹಿಡಿಯಲಾಗುವದಿಲ್ಲ. ಆ ಬಗೆಯ ಭೂಗತ ಮಾರ್ಗವು ಇದೇ ಇರುವದೆಂಬ ಬಗ್ಗೆ ನನಗನುಮಾನವಿಲ್ಲ; ಆದರೆ ಅದು ಥೇಮ್ಸ ನದೀ ತೀರಕ್ಕೆ ಹೋಗಿದೆಯೋ ಇಲ್ಲವೆ ಬೇರೆ ಕಡೆಗೆಲ್ಲಾದರೂ ಹೋಗಿದೆಯೋ ಅದನ್ನಿಂದು ತಿಳಿಯುವದು ಅಶಕ್ಯವಾಗಿರುತ್ತದೆ.

ಸ್ಮಿತ್ಥ.—ಒಡೆಯರೇ, ಆ ಸುರಂಗದ ಪತ್ತೆ ಹಚ್ಚುವ ಬಗೆ ಹೇಗೆ?

ಬ್ಲೇಕನು ಸ್ಮಿತ್ಥನ ಆ ಪ್ರಶ್ನೆಗೆ ಯಾವ ಉತ್ತರವನ್ನೂ ಕೊಡಲಾರದೆ ಚಿಂತಾಕ್ರಾಂತನಾಗಿ, ಒಕ್ಕಣದೊಳಗಿನ ಉದ್ದನ್ನ ಸಿಗರೇಟನ್ನೊಂದು ತೆಗೆದು ಹೊತ್ತಿಸಿ ಸೇದುತ್ತ ಯೋಚಿಸ ತೊಡಗಿದನು.



೧೫ನೇ ತೆರೆ.

## ಹೊಸ ಸುದ್ದಿ.




ಊ-ಇಯಾಂಗನು ಶುಕ್ರವಾರ ರಾತ್ರಿಯಲ್ಲಿ ಬ್ಲೇಕನಿಗೆ ಆತನ ಬ್ಲ್ಯಾಕ್ಟ್ರಂಕ ರೋಡಿನೊಳಗಿನ ಮನೆಯಲ್ಲಿ ಭೇಟಿಯಾಗಲಿಕ್ಕೆಂದು ಬಂದನು. ಮರುದಿನ ಶನಿವಾರ ಬ್ಲೇಕನು ಪಪ್ಪಲಿನ ಜೇಲಿಗೆ ಹೋಗಿ ಇನ್ಸಪೆಕ್ಟರ ಡೆಭೆನಟನನ್ನು ಕಂಡನು. ಬ್ಲೇಕನೂ ಸ್ಮಿತ್ಥನೂ ಈ ಮಧ್ಯದಲ್ಲಿ ಯಾವ ಸಂಗತಿಗಳನ್ನು ಕಂಡಿದ್ದರೋ-ಕೇಳಿದ್ದರೋ-ತಿಳಿದಿದ್ದರೋ ಅವುಗಳನ್ನೆಲ್ಲ ಡೆಭೆನಟನಿಗೂ ರಿಚರ್ಡನಿಗೂ ತಿಳಿಸಿದರು. ಮೇರಿಯು ಯಾವ ಪೀಡೆಗೂ ಗುರಿಯಾಗದ್ದನ್ನು ಕೇಳಿ ರಿಚರ್ಡನಿಗೆ ಎಷ್ಟೋ ಸಮಾಧಾನವಾಯಿತು; ಆದರೆ ಅವನು ಚಾಯ್ನಾ ಫೀಲ್ಡಿನೊಳಗಿನ ಪ್ರತಿಯೊಂದು ಮನೆಯನ್ನು ಕೂಡಲೆ ಝಡತಿ ಮಾಡಲಿಕ್ಕೆ ಅಧೀರನಾದನು. ಹೀಗೆ ಅವಸರಪಟ್ಟರೆ ಕಾರ್ಯಸಾಧಿಸುವದೊತ್ತಟ್ಟಿಗೇ ಉಳಿದು, ಕಾರ್ಯಹಾನಿಯು ಮಾತ್ರ ಖಂಡಿತವಾಗಿ ಆಗುವದೆಂದು ಬ್ಲೇಕನು ಆತನಿಗೆ ತಿಳಿಸಿ ಹೇಳಿದನು. ಕೆಲ ದಿನಗಳ ವರೆಗೆ ನೀನು ಸುಮ್ಮನಿರಬೇಕೆಂದೂ, ಮೇರಿಯ ಬಿಡುಗಡೆಯು ಶೀಘ್ರವಾಗಿಯೇ ಆಗುವದೆಂದೂ, ಆ ದುರ್ವೃತ್ತರನ್ನು ಇಷ್ಟರಲ್ಲೇ ಸೆರೆ ಹಿಡಿದು ದಂಡಿಸುವೆವೆಂದೂ ರಿಚರ್ಡನಿಗೆ ಅಭಿವಚನವನ್ನಿತ್ತು, ಬ್ಲೇಕನು ಸ್ಮಿತ್ಥನೊಡನೆ ಪಪ್ಪಲಿನಿಂದ ಹೊರಟನು.

ಶನಿವಾರ-ರವಿವಾರ ದಿನಗಳಲ್ಲಿ ಚಾಊ-ಇಯಾಂಗನಿಂದ ಬ್ಲೇಕನಿಗಾವ ವರ್ತಮಾನವೂ ತಿಳಿಯಲಿಲ್ಲ. ರವಿವಾರ ಸಾಯಂಕಾಲದಲ್ಲಿ ಆತನನ್ನು ಕಾಣಬೇಕೆಂದು ಬ್ಲೇಕನಿಗನಿಸಿತು. ಅಂದು ಅವನು ತನ್ನ ಹೆಸರಿಗೆ ಬಂದಿದ್ದ ಪತ್ರ-ಪಾನುಗಳನ್ನೋದಿಕೊಳ್ಳುತ್ತಿರಲಿಕ್ಕೆ ಬಹು ಚಿಂತಾಕ್ರಾಂತನಾದನು. ಸಂಜೆಯು ಮುಂದೆ ದಂಡಾಳಿನ ವೇಷಧರಿಸಿಕೊಂಡು ಆತನು ತನ್ನ ಮನೆಯಿಂದ ಹೊರಬಿದ್ದನು. ಎಷ್ಟೋ ಹೊತ್ತಿನವರೆಗೆ ಅತ್ತಿತ್ತ ಅಡ್ಡಾಡಿ ಮನೆಗೆ ಹಿಂದಿರುಗಿ, ಆ ಛದ್ಮವೇಷವನ್ನು ತ್ಯಜಿಸಿ, ತನ್ನ ಕೋಣೆಯಲ್ಲಿಯ ಆರಾಮ ಖುರ್ಚಿಯ ಮೇಲೆ ಪವಡಿಸಿದನು. ಇಷ್ಟರಲ್ಲಿ ಮನೆಯ ಒಳಬಾಗಿಲದೊಳಗಿನ ವಿದ್ಯುತ್‌ಗಂಟೆಯು 'ಥಣಣಣಣಣ' ಎಂದು ಸಪ್ಪಳಗೆಯ್ದಿತು. ಪರಕ್ಷಣದಲ್ಲಿಯೇ ಒಬ್ಬ ದೀರ್ಘಕಾಯದ ಸೊರಗಿ ಸಾಯಲಾದ ಮನುಷ್ಯನು ಒಳಗೆ ಬಂದನು. ಆ ಆಗಂತುಕನು ವಯೋವೃದ್ಧನಾಗಿದ್ದು, ಅವನ ಮೀಸೆ-ಗಡ್ಡಗಳು ಉದ್ದುದ್ದವಾಗಿ ಬೆಳೆದಿದ್ದವು.

ಆಗ ಬ್ಲೀಕನು ಆತನನ್ನು ಕುರಿತು: ನನ್ನ ಬಳಿಯಲ್ಲಿ ತಮ್ಮ ಕೆಲಸವೇನಿದೆ?

ಆಗಂತುಕನು:—ನನ್ನ ಹೆಸರು ಸಾಮ್ಯೂಅಲ್ ರಾಬರ್ಟಸನ್‌ನೆಂದು. ತಮಗೆ ನನ್ನ ಗುರುತು ಹತ್ತಲಿಲ್ಲೇನು? ತಾವು ನನ್ನನ್ನು ಕಂಡು ಬಹು ವರ್ಷಗಳಾದ್ದರಿಂದ ಆ ಸಂಗತಿಯನ್ನು ಮರೆತಿರಬಹುದಾಗಿದೆ.

"ಮಹಾನುಭಾವರೇ, ತಮ್ಮನ್ನೆಲ್ಲಿಯೋ ನೋಡಿರುವಂತೆ ತೋರುತ್ತಿದೆ; ಆದರೆ ಅದೆಲ್ಲಿ ನನಗೆ ತಮ್ಮ ಸಾಕ್ಷಾತ್ಕಾರವಾಯಿತೆಂಬದು ನೆನಪಾಗಲೊಲ್ಲದಲ್ಲ!"

"ನಾನು ಚೀನದೇಶದ ಕ್ಯಾಂಟನ್ ಪಟ್ಟಣದೊಳಗಿನ ಅಮೇರಿಕನ್ ಮಿಶನ್ನಿನ ಅಧ್ಯಕ್ಷನಾಗಿದ್ದೆನು. ಎಷ್ಟೋ ವರ್ಷಗಳ ಮುಂಚೆ ನಾನು ನಮ್ಮ ಮಿಶನ್ನಿನ ಕೆಲಸಕ್ಕೆಂದು ಈ ಲಂಡನ್ನ ಪಟ್ಟಣಕ್ಕೆ ಬಂದಿದ್ದೆನು. ಆಗ ತಮ್ಮ ಪ್ರಖ್ಯಾತಿಯನ್ನು ಕೇಳಿಕೊಂಡು ನಾನು ತಮ್ಮನ್ನು ಕಂಡು ಮಿಶನ್ನಿಗೆ ಸಹಾಯ ಮಾಡಬೇಕೆಂದು ಯಾಚಿಸಿದ ಮೇರೆಗೆ ತಾವು ನನಗೊಂದು ಬಹು ಮೂಲ್ಯದ ಚೆಕ್ಕನ್ನು ದಯಪಾಲಿಸಿದ್ದಿರಷ್ಟೇ?"

"ಅಹುದು; ನನಗದೆಲ್ಲ ಈಗ ಚೆನ್ನಾಗಿ ನೆನಪಿಗೆ ಬಂದಿತು; ಅದೇ ಕೆಲಸಕ್ಕೆಂದು ತಾವು ಮತ್ತೆ ನನ್ನ ಸಹಾಯವನ್ನಪೇಕ್ಷಿಸುವಿರೇನು? ನನ್ನ ಯೋಗ್ಯತೆಗನುಗುಣವಾಗಿ ನಾನು ತಮ್ಮ ಸಾಧುಕಾರ್ಯಕ್ಕೆ ಸಹಾಯ ಮಾಡಲು ಯಾವಾಗಲೂ ಸಿದ್ಧನಿರುತ್ತೇನೆ."

"ಏಸುಪ್ರಭುವಿನ ಮಹಾ ಕಾರ್ಯವು ತಮ್ಮಂತಹ ಮಹಾನುಭಾವ ಸಾಧುವೃತ್ತಿಗಳ ಸಹಾಯದಿಂದಲೇ ನೆರವೇರತಕ್ಕದ್ದಾಗಿದ. ಆದುದರಿಂದ ತಾವು ಏನು ಕೊಟ್ಟರೂ ನಾವು ಅದನ್ನು ಕೃತಜ್ಞಭಾವದಿಂದ ಸ್ವೀಕರಿಸುತ್ತೇವೆ; ಆದರೆ ಇಂದು ನಾನು ಆ ಬಗೆಯ ಸಹಾಯ ಬೇಡಲಿಕ್ಕೆಂದು ತಮ್ಮಲ್ಲಿಗೆ ಬಂದಿರುವದಿಲ್ಲ. ಇತ್ತೀಚೆಗೆ ಚೀನದೇಶದಿಂದ ಇಲ್ಲಿಗೆ ಹೊರಡುವ ಸಮಯದಲ್ಲಿ ಒಂದು ಬಹು ಅದ್ಭುತ ಸಂಗತಿಯು ನನಗೆ ತಿಳಿದು ಬಂದಿದೆ; ಮತ್ತು ನಾನು ಈ ಲಂಡನ್ನಿಗೆ ಬಂದು ತಲುಪಿದ ಮೇಲೆ ವರ್ತಮಾನಪತ್ರಗಳ ಮೂಲಕವೂ ಆ ಬಗ್ಗೆ ಎಷ್ಟೋ ಸಂಗತಿಗಳನ್ನು ಓದಿ ತಿಳಿದಿರುತ್ತೇನೆ. ಆ ವಿಷಯಗಳೆಲ್ಲವೂ ತಮ್ಮ ಕೌತುಕವನ್ನು ಹೆಚ್ಚಿಸಲಿಕ್ಕೆ ಕಾರಣಗಳಾಗುವವೆಂಬದಕ್ಕೆ ಸಂದೇಹವಿಲ್ಲ. ಯಾಕಂದರೆ, ಅಂಥ ವಿಷಯಗಳಲ್ಲಿ ತಮಗೆಷ್ಟೋ ಅಭಿಜ್ಞತೆಯಿರುವದೆಂಬದನ್ನು ಬಲ್ಲೆನು. ಆ ವಿಷಯಗಳ ಬಗ್ಗೆ ನಾನು ಪೋಲೀಸರನ್ನೇ ಕಾಣಬೇಕೆಂದು ಮೊದಲು ಯೋಚಿಸಿದ್ದೆನು; ಆದರೆ ಕಡೆಗೆ ಆ ನನ್ನ ಸಂಕಲ್ಪವನ್ನು ತ್ಯಜಿಸಿ, ತಮ್ಮ ಕಡೆಗೇ ಬಂದಿರುತ್ತೇನೆ."

ಬ್ಲೀಕನು ಕ್ಷಣಕಾಲವೇ ನಿಸ್ತಬ್ಧನಾಗಿದ್ದುಕೊಂಡು, ಬಳಿಕ:-ರಾಬರ್ಟ

ಸನ್ ಮಹಾಶಯರೇ, ನಾನು ಬಹು ಅವಸರದಲ್ಲಿರುವೆನು; ಆದರೂ ನಾನು ನಿಮ್ಮ ಸಂಗತಿಯನ್ನು ಕೇಳಿಕೊಳ್ಳಲೇ ಬೇಕೆಂದು ಆತುರಪಡುತ್ತಿರುವೆನು. ಇನ್ನು ಹದಿನೈದೇ ನಿಮಿಷಗಳಲ್ಲಿ ನೀವು ನನಗೆ ತಿಳಿಸತಕ್ಕದ್ದನ್ನೆಲ್ಲ ಸ್ಪಷ್ಟವಾಗಿ ತಿಳಿಸಿ ಬಿಡಿರಿ. ಇದಕ್ಕೂ ಹೆಚ್ಚು ಅವಕಾಶವು ನನಗಿಲ್ಲವೆಂಬದನ್ನು ನಿಮಗೆ ಮೊದಲೇ ತಿಳಿಸಿಡುತ್ತೇನೆ.

* * * * * * * * * * * *

ಬ್ಲೇಕನು ಹಾಗೆಂದು ಹೇಳಿದಾಗ ರಾತ್ರಿಯು ಏಳೂಮುಕ್ಕಾಲಾಗಿತ್ತು. ಸಾಮ್ಯುಯಲ್ ರಾಬರ್ಟಸನ್ನನು ಬ್ಲೇಕನಿಗೆ ಯಾವ ಹೊಸ ಸುದ್ದಿಯನ್ನು ತಿಳಿಸ ಬಂದಿದ್ದನೋ ಅದನ್ನು ತಿಳಿಸಿ, ಎಂಟು ಗಂಟೆಗೆ ಅಲ್ಲಿಂದ ಹೊರಬಿದ್ದು ಹೋದನು. ಹೊರಡುವಾಗ ಬ್ಲೇಕನು ಆ ಪಾದರಿಯ ಮಿಶನ್ನಿಗೆ ಸಹಾಯವೆಂದು ಒಂದು ಬಹು ಮೂಲ್ಯದ ಚೆಕ್ಕನ್ನು ಸಮರ್ಪಿಸಲಿಕ್ಕೆ ಮರೆಯಲಿಲ್ಲ. ರಾಬರ್ಟಸನ್ನನು ತಿಳಿಸಿದ ಸಂಗತಿಯಿಂದ ಬ್ಲೇಕನ ಹೃದಯವು ಕ್ಷೋಭಗೊಂಡಿತು. ವಿಸ್ಮಯವು ಹೆಚ್ಚಿತು. ಅಂತರಂಗದಲ್ಲಿ ವೇದನೆಗಳುಂಟಾದವು. ಆತನು ಚಂಚಲ ಚಿತ್ತದಿಂದಲೇ ಮತ್ತೆ ಛದ್ಮ ವೇಷವನ್ನು ತಾಳಿ ಅವಸರವಸರದಿಂದ ಮನೆಯಿಂದ ಹೊರಬಿದ್ದನು. ದಾರಿಯಲ್ಲಿ ಆತನು ತನ್ನ ಮನಸ್ಸಿನಲ್ಲಿ: "ಎಂಥ ಸೋಜಿಗದ ಸಂಗತಿಯಿದು! ಎಂಥ ಭಯಂಕರ ವ್ಯಾಪಾರವಿದು! ಆದರೆ ಇದಾವುದೂ ಪ್ರಕಟಿಸುವಂತಹ ಸಂಗತಿಯಾಗಿಲ್ಲ. ಈ ಸುದ್ದಿಯನ್ನು ಪ್ರಕಾಶನಗೊಳಿಸುವ ಪ್ರಸಂಗವನ್ನು ದೇವರು ನನ್ನ ಮೇಲೆ ತರಕೂಡದು. ಅಂತಹ ಅನಿರ್ವಾಹದ ಪ್ರಸಂಗವೇ ಉಂಟಾಗದಿದ್ದರೆ ಯಾವ ಬೇರೆ ಕಾರಣಕ್ಕಾಗಿಯೂ ನಾನೀ ಗುಪ್ತ ಸಂಗತಿಯನ್ನು ಪ್ರಕಟಿಸಲಾರೆನು." ಬ್ಲೇಕನು ಹಾಗೆ ಯೋಚಿಸುತ್ತ ಚಾಯ್ನಾಫೀಲ್ಡಿನೊಳಗಿನ ಆ ಹೋಟಲ್ಲಿನೊಳಗಿನ ತಮ್ಮ ಕೋಣೆಗೆ ಬಂದನು. ಸ್ಮಿತ್ಥನು ಅಲ್ಲಿರಲಿಲ್ಲ; ಆದರೆ ಚಾಲೂ-ಇಯಾಂಗನು ಮಾತ್ರ ಈತನ ದಾರಿಕಾಯುತ್ತ ಅಲ್ಲಿ ಕುಳಿತಿದ್ದನು. ಬ್ಲೇಕನನ್ನು ಕಂಡೊಡನೆಯೇ ಚಾಲೂ-ಇಯಾಂಗನು ಎದ್ದು ನಿಂತು ಸನ್ಮಾನ ಪೂರ್ವಕವಾಗಿ ಈತನನ್ನು ಬರಮಾಡಿಕೊಂಡು: ನಾನು ಒಂದು ಗಂಟೆಯಿಂದಲೂ ನಿಮ್ಮ ದಾರಿ ಕಾಯುತ್ತಿರುವೆನು.

ಬ್ಲೇಕ: —ನೀನು ಈ ಒಳಗೆ ಹೇಗೆ ಬಂದೆ? ಸ್ಮಿತ್ಥನು ನಿನ್ನನ್ನು ಇಲ್ಲಿ ಕೂಡಿಸಿ ಹೋಗಿರುವನೇನು?

ಚಾಲೂ: —ಧಣಿಯರೇ, ಹಾಗಲ್ಲ. ನನಗೆ ಅವನ ಭೆಟ್ಟಿಯೇ ಆಗಿಲ್ಲ. ಈ ನಿಮ್ಮ ಕೋಣೆಯ ಬಾಗಿಲಿಗೆ ಬೀಗವು ಹಾಕಿರಲಿಲ್ಲ. ಅದರಿಂದ ನಾನು ಇಲ್ಲಿ ಸಹಜವಾಗಿ ಪ್ರವೇಶಿಸಿದೆನು.

ಬ್ಲೀಕ:—ನಮ್ಮ ಆ ಹುಡುಗನು ಬಾಗಿಲವನ್ನಿಕ್ಕಿಕೊಳ್ಳದೆ ಹಾಗೆಯೇ ಹೋಗಿದ್ದನೇ! ಇದು ಆತನ ಬಹು ದೊಡ್ಡ ತಪ್ಪಾಗಿರುತ್ತದೆ; ಕಳ್ಳರಿಗೆ ಲಾಭವಾಗ ಬಹುದಾದಂತಹ ಯಾವ ಸಾಮುಗ್ರಿಯೂ ಇಲ್ಲಿರುವದಿಲ್ಲ. ಅದು ಏನೇ ಆಗಲಿ, ನೀನು ನಿನ್ನ ಸಂಗತಿಯನ್ನು ಹೇಳು. ನೀನು ಯಾವದೋ ಒಂದು ಮಹತ್ವದ ಸುದ್ದಿಯನ್ನು ತಂದಿರಬಹುದಾಗಿದೆ.

ಚಾಲೂ:—ಧಣಿಯರೇ, ಅಹುದು; ತಮ್ಮ ಅನುಮಾನವು ಯಥಾರ್ಥವಾದುದು. ವಿಶೇಷ ಪ್ರಯತ್ನದ ಮೂಲಕ ನನಗೆ ತಿಳಿದಿರುವದೇನಂದರೆ, "ಇಲ್ಲಿಯ ಚೀನೀವಿದ್ರೋಹಿಗಳ ಗುಪ್ತಸಭೆಯು ನಾಳಿನ ಮಂಗಳವಾರ ರಾತ್ರಿ ಕೂಡುವದು ಗೊತ್ತಾಗಿರುತ್ತದೆ; ಅಂದರೆ ನಾಳೆ ಇಲ್ಲದೆ ನಾಡದ್ದು ರಾತ್ರಿಯಲ್ಲಿ ಆ ಸಭೆಯು ಖಂಡಿತವಾಗಿಯೂ ಕೂಡುವದು. ಚಾಯ್ನಾಫೀಲ್ಡಿನ ಸಿಂಹನು ತನ್ನ ಮುಖ್ಯ ಮುಖ್ಯ ಜನರಿಗೆ ಆಮಂತ್ರಣವನ್ನಿತ್ತಿರುತ್ತಾನೆ. ಹಾಂಗಕಾಂಗಿನ ಆ ಪ್ರಮುಖ ಗೃಹಸ್ಥನೂ ಅಂದಿನ ಆ ಸಭೆಗೆ ಬರತಕ್ಕವನು. ಆ ಸಭೆಯಲ್ಲಿ ಆ ಪ್ರಮುಖನಿಗೆ ಸ್ವಾಗತವನ್ನೀಯುವ ಮತ್ತು ಬೇರೆ ಜರೂರಿಯ ಠರಾವುಗಳು ಆಗಲಿರುವವು.

ಬ್ಲೀಕ:-ಹಾಗಾದರೆ ಆ ಕಾಲಕ್ಕೆ ಆ ವಿದ್ರೋಹಿಗಳು ತಮ್ಮ ಎಲ್ಲ ಕಾಗದ-ಪತ್ರಗಳನ್ನೂ ಲೆಕ್ಕದ ಪುಸ್ತಕಗಳನ್ನೂ ಅಲ್ಲಿಗೆ ತರಬಹುದಷ್ಟೇ? ಅವರುಗಳ ಆ ಕಾಗದ-ಪತ್ರ-ಬುಕ್ಕುಗಳನ್ನು ನಾವು ಸಂಪಾದಿಸಿದರೆ, ಅವರ ಅಪರಾಧದ ಪ್ರಮಾಣವನ್ನು ಸಿದ್ಧಪಡಿಸಲಿಕ್ಕೆ ಬಹು ಸುಲಭವಾಗಬಹುದು.

ಚಾಲೂ:—ನನಗೂ ಹಾಗೆಯೇ ಅನಿಸುತ್ತಿದೆ.

ಬ್ಲೀಕ:—ಆ ಸಭೆಯು ಎಷ್ಟು ಗಂಟೆಗಾಗುವದೆಂಬದನ್ನು ಬಲ್ಲೆಯಾ?

ಚಾಲೂ:—ಬಲ್ಲೆನು. ಅಂದು ರಾತ್ರಿ ೯ ಗಂಟೆಗೆ ಕೂಡಲಿರುವದು.

ಬ್ಲೀಕ:—ನಾಡದ್ದು ರಾತ್ರಿ ಒಂಬತ್ತು ಗಂಟೆಗಲ್ಲವೆ? ಒಳ್ಳೇದು. ಪೋಲೀಸರ ಸಹಾಯದಿಂದ ಅವರನ್ನು ಕೈಸೆರೆ ಹಿಡಿಯುವ ಉದ್ಯೋಗಕ್ಕೆ ಹತ್ತುವೆನು; ಆದರೆ ಚಾಲೂ-ಇಯಾಂಗಾ, ನಿನ್ನ ಸಹಾಯದ ಹೊರತು ನಾವು ಅಲ್ಲಿಗೆ ಬರುವದು ಶಕ್ಯವಿಲ್ಲ. ನೀನು ನಮಗೆ ದಾರಿದೋರಲಿಕ್ಕೆ ಬರುವಿಯಷ್ಟೇ? ನಿನಗೆ ನಿಮ್ಮ ಒಡೆಯನ ಮನೆಯ ಪತ್ತೆಯು ಹತ್ತಿತೇನು?

ಚಾಲೂ:—ಇಲ್ಲ. ಇದುವರೆಗೂ ನನಗದರ ಸುಳಿವು ಕೂಡ ಹತ್ತಿರುವದಿಲ್ಲ; ಆದರೂ ಬೇಗನೆ ಅದನ್ನು ತಿಳಿಯುವೆನೆಂಬ ಭರವಸೆಯಿದೆ. ನಮ್ಮ ಒಡೆಯನಾದ ಉಷಂಡ ಚಂಡನು ನನ್ನಲ್ಲಿ ಸಂಪೂರ್ಣ ವಿಶ್ವಾಸವನ್ನಿಟ್ಟಿರುವದರಿಂದ, ನಿನ್ನೆಯಿಂದ ಬೇರೊಂದು ಗುಪ್ತದ್ವಾರವನ್ನು ರಕ್ಷಿಸುವ ಕೆಲಸವನ್ನು ನನಗೊಪ್ಪಿ

ಸಿರುತ್ತಾನೆ. ಆ ಬಾಗಿಲವು ಉಷಂಡ ಚಂಡನ ಮನೆಗೆ ಸಮೀಪದಲ್ಲಿಯೇ ಇರುತ್ತದೆ. ಆ ಬಾಗಿಲೊಳಗಿಂದ ಯಾವ ಪಹರೆಯುವನು ಆತನ ಆ ಗುಪ್ತ ಕೋಣೆಯ ಕಡೆಗೆ ಹೋಗುವನೋ ನಾನೂ ಗೌಪ್ಯದಿಂದ ಆತನನ್ನನುಸರಿಸುವೆನು.

ಬ್ಲೇಕ:—ನಿನ್ನ ಆ ಯುಕ್ತಿಯು ಅಯೋಗ್ಯವಾದದ್ದಲ್ಲ; ಆದರೆ ನೀನು ಬಹು ಎಚ್ಚರಿಕೆಯಿಂದ ಸುತ್ತಲೂ ದೃಷ್ಟಿಯನ್ನಿರಿಸಿಯೇ ಆ ಕೆಲಸಕ್ಕೆ ತೊಡಗು. ನೀನು ಪ್ರತಿಬಂಧಿತನಾದರೆ, ನೀನು ಸ್ವತಃ ಸತ್ತೇ ಸಾಯುವೆಯಲ್ಲದೆ, ನನ್ನ ಇದುವರೆಗಿನ ಪ್ರಯತ್ನಗಳೆಲ್ಲ ನಿಷ್ಫಲವಾಗಿ ಹೋಗುವವು.

ಚಾಲೂ:—ನಾನು ಬಹಳ ಎಚ್ಚರಿಕೆಯಿಂದಲೇ ಕಾರ್ಯಪ್ರವೃತ್ತನಾಗುವೆನು. ಆ ಬಗ್ಗೆ ನೀವು ಯೋಚಿಸುವ ಕಾರಣವಿಲ್ಲ; ಆದರೆ ಇದೆಲ್ಲಕ್ಕಿಂತಲೂ ವಿಸ್ಮಯಕರವಾಗಿರುವ ಸಂಗತಿಯನ್ನು ನಾನು ಇದುವರೆಗೂ ನಿಮಗೆ ತಿಳಿಸಿರುವದಿಲ್ಲ. ಇನ್ನು ನಾನು ಅದನ್ನೇ ಹೇಳುವೆನು, ಕೇಳಿಕೊಳ್ಳಿರಿ. ನಿಮಗೆ ಹೊಸ ಹೊಸ ಸಂಗತಿಗಳನ್ನು ತಿಳಿಸುವ ಸಲುವಾಗಿ ನಾನು ನಾನಾ ಸ್ಥಾನಗಳಲ್ಲಿ ಸಂಚರಿಸಿ ಗುಪ್ತ ಸಂಗತಿಗಳನ್ನು ಸಂಗ್ರಹಿಸುವ ಉದ್ಯೋಗಕ್ಕೆ ತೊಡಗಿರುತ್ತೇನೆ. ಹ್ಯಾಕಮನ್ ಸ್ಟ್ರೀಟಿನೊಳಗಿನ ಯಾವ ಮನೆಯೊಳಗೆ ನೀವೂ ಸ್ಮಿತ್ಥನೂ ಕಡು ಸಂಕಟಕ್ಕೀಡಾಗಿದ್ದಿರೋ, ಆ ಮನೆಯ ವಿಷಯವು ನಿಮಗೆ ನೆನಪಿರಬಹುದಾಗಿದೆ. ಆ ಮನೆಯ ಎದುರಿಗೊಂದು ಹಾಳು ಮನೆಯಿದೆ. ಒಂದೆರಡು ದಿನಗಳ ಮುಂಚೆ ನಾನು ಕುತೂಹಲದಿಂದ ಅಲ್ಲಿಗೆ ಹೋಗಿದ್ದೆನು. ಆ ಹಾಳುಮನೆಯ ಕಾಗೇತ್ತಲೆಯಲ್ಲಿ ದುಷ್ಟಜನರು ಗುಂಪುಗೂಡಿರಬೇಕೆಂದು ನನಗೆ ಬಹು ದಿನಗಳಿಂದಲೂ ಅನುಮಾನವಿದ್ದಿತು.

ಮೊನ್ನೆ ರಾತ್ರಿಯಲ್ಲಿ ನಾನು ಆ ಹಾಳು ಮನೆಯ ಪಕ್ಕದ ಕತ್ತಲೆಗವಿದಿರುವ ಚಿಕ್ಕ ಸಂದಿಯಲ್ಲಿ ಹೊಕ್ಕು ಮುಂದಕ್ಕೆ ನಡೆದಿರಲು, ಆ ಮನೆಯೊಳಗೆ ದೀಪವಿದ್ದದ್ದನ್ನು ಕಂಡು ಒಮ್ಮೆಲೆ ಬೆದರಿ ಬಿದ್ದೆನು! ಕೆಲಕ್ಷಣಗಳ ಮೇಲೆ ಅಲ್ಲಿ ಮನುಷ್ಯರ ಕಾಲು ಸಪ್ಪಳವೂ ಮೃದುಧ್ವನಿಯೂ ಕೇಳಿಸಿದವು. ನಾನು ಹಾಗೆಯೇ ಆ ಸಂದಿಯ ಆಚೆಯ ತುದಿಗೆ ಹೋಗಲು, ಅಲ್ಲಿಯ ಬಾಗಿಲದೊಳಗಿಂದ ಮೂರು ಜನ ಚೀನಿಗರನ್ನು ಕಂಡೆನು. ಅವರೊಳಗಿನವನೊಬ್ಬನ ಕೈಯಲ್ಲೊಂದು ಲಾಂದರವಿದ್ದಿತು. ಅವರು ಆ ಹಾಳು ಮನೆಯೊಳಗಿನದೊಂದು ಕೋಣೆಯನ್ನು ಹೊಕ್ಕು ಬಾಗಿಲವನ್ನಿಕ್ಕಿಕೊಂಡರು. ಆ ಕೋಣೆಯಲ್ಲಿ ಅವರು ಎಷ್ಟೋ ಹೊತ್ತಿನವರೆಗಿದ್ದರು; ಆದರೆ ಅವರು ಅಲ್ಲಿ ಏನೇನು ಮಾತನಾಡಿದರೆಂಬದನ್ನು ತಿಳಿಯಲಸಮರ್ಥನಾದೆನು. ನನ್ನ ಮನಸ್ಸಿನಲ್ಲಿ ಹೆಚ್ಚಾಗಿ ಕುತೂಹಲದ ಉದ್ರೇಕವುಂಟಾದ್ದರಿಂದ, ನಾನು ಮೆಲ್ಲಮೆಲ್ಲನೆ ಹೋಗಿ ಆ ಬಾಗಿ

ಲೆದುರಿಗೆ ನಿಂತುಕೊಂಡೆನು; ಆದರೆ ಅಲ್ಲಿ ನನಗಾರ ಇರವೂ ಕಂಡು ಬರಲಿಲ್ಲ. ಬಳಿಕ ನಾನು ನಿಶ್ಶಬ್ದದಿಂದ ಆ ಬಾಗಿಲವನ್ನು ದೂಡಿ ನೋಡಲು, ಆಗ ಅಲ್ಲಿ ಯಾರೂ ಇರಲಿಲ್ಲ. ಆ ಮೂವರೂ ಅಂತರ್ಧಾನವನ್ನು ಹೊಂದಿದ್ದರು! ಆದರೆ ಅವರೆಲ್ಲರೂ ಯಾವ ದಿಕ್ಕಿನಿಂದ ಹೇಗೆ ಅದೃಶ್ಯರಾದರೆಂಬದು ತಿಳಿಯು ವದು ಅಶಕ್ಯವಾಯಿತು.

ಬ್ಲೇಕ:—ಅವರು ಅದೇ ಕೋಣೆಯೊಳಗಿನ ಯಾವುದೊಂದು ಬೇರೆ ಬಾಗಿಲದಿಂದ ಹೊರಟು ಹೋಗಿರಬಹುದು.

ಚಾಲೂ:—ಒಡೆಯರೇ, ಹಾಗಲ್ಲ. ಹಾಗಿರಲಿಕ್ಕಿಲ್ಲೆಂದು ಅನುಮಾನವಾಗು ತ್ತದೆ. ನಾನು ಚೆನ್ನಾಗಿ ಪರಿಕ್ಷಿಸಿ ತಿಳಿದಿರುವದೇನಂದರೆ, ಆ ಕೋಣೆಗೆ ಅದೊಂ ದರ ಹೊರತು ಬೇರೆ ಬಾಗಿಲವೇ ಇಲ್ಲ; ಆದರೆ ಅವರು ಆ ಬಾಗಿಲದಿಂದ ಹೊರ ಬೀಳಲಿಲ್ಲೆಂಬದನ್ನು ನಾನು ಕಣ್ಣಾರೆ ಕಂಡಿರುತ್ತೇನೆ. ಆ ಕೋಣೆಯಲ್ಲಿ ಯಾವ ಕಪಾಟು-ಪೆಟ್ಟಿಗೆ-ಬಾಗಿಲಮಾಡಗಳೂ ಇರುವದಿಲ್ಲಾದ್ದರಿಂದ, ಅವರು ಅವುಗಳೊ ಳಗೆ ಅಡಗಿ ಕುಳ್ಳಿರುವ ಸಂಭವವಿಲ್ಲ.

ಬ್ಲೇಕನು ಕ್ಷಣಕಾಲವೇ ಯೋಚಿಸಿ, ಬಳಿಕ:—ಹಾಗಾದರೆ ಆ ಕೋಣೆಯ ನೆಲದಲ್ಲಿ ಯಾವದೊಂದು ಗುಪ್ತಮಾರ್ಗವಿರಲಿಕ್ಕೆ ಬೇಕು. ಅವರು ಆ ದ್ವಾರ ದಲ್ಲಿ ಸೇರಿ ಭೂಗರ್ಭದೊಳಗಿಂದ ಅದೃಶ್ಯರಾಗಿರುವರು. ಬಹುಶಃ ಅದೇ ನೆಲ ಮಾರ್ಗವೇ ತೇಮ್ಸನದಿಯ ವರೆಗೆ ಹೋಗಿರಬೇಕು.

ಚಾಲೂ:—ನನಗೂ ಹಾಗೆಯೇ ಎನಿಸುತ್ತದೆ. ಈ ಬಗೆಯ ಸಂದೇಹ ಕ್ಕೊಳಗಾಗಿಯೇ ನಾನು ಆ ಕೋಣೆಯನ್ನು ಮತ್ತೊಮ್ಮೆ ಪ್ರವೇಶಿಸಿ ನೋಡಿ ದೆನು; ಆದರೆ ಅಲ್ಲಿಯ ನೆಲದಲ್ಲಿ ಗುಪ್ತಮಾರ್ಗದ ಚಿಹ್ನವೆಷ್ಟೂ ಕಾಣಿಸಲಿಲ್ಲ.

ಬ್ಲೇಕ:—ಆ ಮಾರ್ಗವು ನೆಲದಲ್ಲಿ ಬಹು ಕೌಶಲ್ಯದಿಂದ ಸ್ಥಾಪಿಸಲ್ಪಟ್ಟಿ ರುವದರಿಂದ ನಿನಗೆ ಅದು ಕಂಡಿರಲಿಕ್ಕಿಲ್ಲ. ಆ ವಿದ್ರೋಹಿಗಳು ಹಿಡಿಯಲ್ಪ ಡುವ ಸಂಭವವು ಕಾಣಲು, ಅದೇ ನೆಲಮಾರ್ಗದಿಂದಲೇ ಓಡಿ ಹೋಗುವ ವ್ಯವಸ್ಥೆ ಮಾಡುವರು. ನಾನು ಆ ಗುಪ್ತದ್ವಾರವನ್ನು ಪರೀಕ್ಷಿಸಿ ನೋಡುವೆನು. ಅದು ಎಲ್ಲಿಯವರೆಗೆ ಹೋಗಿರುವದೆಂಬದನ್ನು ತಿಳಕೊಳ್ಳುವದು ಅವಶ್ಯಕವು. ಮಂಗಳವಾರ ರಾತ್ರಿಯಲ್ಲಿ ಝುಡತಿ ಮಾಡುವಾಗ ನಾವು ಆ ಬಾಗಿಲಬಳಿಯಲ್ಲಿ ಪಹರೆಯನ್ನಿರಿಸಲೇಬೇಕು.

ಚಾಲೂ:—ಆದರೆ ಒಡೆಯರೇ, ಇದೆಲ್ಲ ಕೆಲಸವು ಬಹು ವಿಪಜ್ಜನಕವಾ- ದುದು. ಈ ಕೆಲಸದಲ್ಲಿ ನಿಮ್ಮ ಜೀವಕ್ಕೆ ಧಕ್ಕೆಯಾದರೂ ಆಗಬಹುದಾಗಿದೆ.

ಬ್ಲೇಕ:—ಪ್ರಾಣಕ್ಕಂಜಿದರೆ ನಾನು ಕೃತಕಾರ್ಯವಾಗಲಾರೆನು. ಅಲ್ಲಿ

ಸುರಂಗದ ಮಾರ್ಗವಿದ್ದದ್ದೇ ನಿಜವಾದರೆ ನಾನು ಅದರೊಳಗೆ ಪ್ರವೇಶಿಸಲಿಕ್ಕೇ ಬೇಕು. ನಿನ್ನ ಸಹಾಯದಿಂದಲೇ ಆ ಕಾರ್ಯವು ಸಿದ್ಧಿಸುವದೆಂದು ನಾನು ನಂಬಿರುವೆನು. ನಾಳೆ ರಾತ್ರಿಯೇ ನಾನು ಆ ಕೋಣೆಯೊಳಗಿನ ಸುರಂಗವನ್ನು ಪರೀಕ್ಷಿಸುವದಕ್ಕಾಗಿ ನಿನ್ನೆಡೆಗೆ ಬರುತ್ತೇನೆ. ನಾಳೆ ರಾತ್ರಿ ಎಂಟಕ್ಕೆ ನೀನು ನನಲ್ಲಿಗೆ ಬರುವೆಯಾ?

ಚಾಲೂ:—ತಮ್ಮ ಅಪ್ಪಣೆಯಂತೆಯೇ ನಡೆಯುವೆನು. ನಾಳೆ ರಾತ್ರಿ ಎಂಟಕ್ಕೆ ನನಗೆ ಹೇಗೂ ವಿಶ್ರಾಂತಿಯ ಸೂಟಿಯಿರುವದು. ಅದರಿಂದ ನಾನು ಅನಾಯಾಸವಾಗಿ ಬಂದು ನಿಮ್ಮನ್ನು ಕಾಣುತ್ತೇನೆ.

ಚಾಲೂ-ಇಯಾಂಗನು ಬ್ಲೇಕನ ಬಳಿಯಿಂದ ಹೊರಡುವಾಗ ಹೇಳುತ್ತಾನೆ:—ಒಡೆಯರೇ, ತಾವು ನಿಶ್ಚಿಂತರಾಗಿರ್ರಿ. ನನ್ನನ್ನು ನಿಮ್ಮ ಗುಪ್ತ ಅನುಚರನೆಂದು ಯಾರೂ ಅನುಮಾನಿಸುವದಿಲ್ಲ. ನಾಳೆ ರಾತ್ರಿಯಲ್ಲಿ ನಾನು ಇಲ್ಲಿಗೆ ಬಂದು ನಿಮ್ಮನ್ನು ಆ ಹಾಳುಮನೆಗೆ ಕರೆದೊಯ್ಯುತ್ತೇನೆ.

---

## ೧೧ನೇ ತೆರೆ.

## ಸಿಂಹನ ಪಂಜರದಲ್ಲಿ.




ಮವಾರ ರಾತ್ರಿಯ ಏಳು ಗಂಟೆಗೆ ಇನ್ಸಪೆಕ್ಟರ ಡೆಭೆನಟನ ಮಗನಾದ ರಿಚರ್ಡ ಡೆಭೆನಟನು ಆ ಪಪ್ಪಲಿನ ಜೇಲಿನೊಳಗಿನ ಒಂದು ಕೋಣೆಯಲ್ಲಿ ಒಬ್ಬೊಂಟಿಗನಾಗಿ ಕುಳಿತು, ವಿಷಣ್ಣ ಮನಸ್ಸಿನಿಂದ ತನ್ನ ಪ್ರಿಯತಮೆಯಾದ ಮೇರಿಯ ದೈವದುರ್ವಿಪಾಕದ ಬಗ್ಗೆ ಚಿಂತಿಸುತ್ತಿದ್ದನು. ಇನ್ಸಪೆಕ್ಟರ ಡೆಭೆನಟನು ಆಗ ಆ ಜೇಲಿನಲ್ಲಿರಲಿಲ್ಲ. ಬೇರೊಂದು ಕಡೆಯ ಒಂದು ರಹಸ್ಯಪೂರ್ಣವಾದ ಕಳವಿನ ವಿಚಾರಣೆಗಾಗಿ ಹೋಗಿದ್ದವನು ಅದುವರೆಗೂ ಮನೆಗೆ ಹಿಂದಿರುಗಿರಲಿಲ್ಲ. ಏಳು ಗಂಟೆಯ ನಂತರ ಕೆಲ ನಿಮಿಷಗಳ ಮೇಲೆ ಒಬ್ಬ ಸಾರ್ಜಂಟನು ಒಳಗೆ ಬಂದು, ರಿಚರ್ಡನ ಕೈಗೊಂದು ಮೊಹರು ಮಾಡಿದ ಲಕ್ಕೋಟೆಯನ್ನಿತ್ತನು.

ರಿಚರ್ಡನು ಅದನ್ನು ಹೊರಹೊರಳಿಸಿ ನೋಡಿ, ಸಾರ್ಜಂಟನನ್ನು ಕುರಿತು: ಈ ಪತ್ರವು ನಿನಗೆಲ್ಲಿ ದೊರೆಯಿತು?

"ಇದೀಗ ಒಬ್ಬ ಪೋರನು ಬಂದು ಕೊಟ್ಟು ಹೋದನು."

'ಈ ಪತ್ರವನ್ನು ಕೊಟ್ಟು ಅವನು ಬಾಯಿಮಾತನ್ನೇನಾದರೂ ಹೇಳಿದನೇ?'

"ಇಲ್ಲ. 'ರಿಚರ್ಡ ಡೆಭೆನಟರು ಒಳಗೆ ಇರುವರೋ ಇಲ್ಲವೊ?' ಎಂದಿಷ್ಟೇ ಅವನು ಕೇಳಿದನು. ಇರುವರೆಂದು ನಾನು ಹೇಳಲು, ಇದನ್ನು ನನ್ನ ಕೈಗಿತ್ತು ತಮಗೆ ಮುಟ್ಟಿಸಬೇಕೆಂದು ಹೇಳಿ ಹೊರಟು ಹೋದನು."

ಸಾರ್ಜಂಟನು ಆ ಕೋಣೆಯಿಂದ ಹಿಂದಿರುಗಲು, ರಿಚರ್ಡನು ಆ ಲಕ್ಕೋಟೆಯನ್ನೊಡೆದು ಅದರೊಳಗಿನ ಪತ್ರವನ್ನು ತೆಗೆದನು. ಅದರಲ್ಲಿ ಬರೆದ ಸಂಗತಿಯು:

"ಪ್ರಿಯ ಮಹಾಶಯರೇ, ಯಾವ ಆಂಗ್ಲ ಕುಮಾರಿಯು ನಮ್ಮ ಸೆರೆಯಲ್ಲಿರುವಳೋ, ಅವಳ ವಿಷಯದ ಹಲಕೆಲವು ಸಂಗತಿಗಳ ಆಲೋಚನೆಯು ಸಲುವಾಗಿ ನಾನು ನಿಮ್ಮನ್ನೊಮ್ಮೆ ಕಾಣಬೇಕೆಂದಿರುತ್ತೇನೆ. ನನ್ನಿಂದ ಇದುವರೆಗೆ ಆ ಯುವತಿಗೆ ಯಾವ ಬಗೆಯ ಅನಿಷ್ಟವೂ ಆಗಿರುವದಿಲ್ಲ; ಆದರೂ ದಿನದಿನಕ್ಕೆ ಅವಳ ಸ್ವಾಸ್ಥ್ಯವು ಶೋಚನೀಯವಾಗುತ್ತ ನಡೆದಿದೆ. ಅದರಿಂದ ನಾನು ಇನ್ನು ಅವಳನ್ನು ಬಂಧಮುಕ್ತಗೊಳಿಸಬೇಕೆಂತಲೇ ಮನಸ್ಸಿನಲ್ಲಿ ನಿಶ್ಚಯಿಸಿರುತ್ತೇನೆ; ಆದರೆ ಕರಾರು ಬದ್ಧತೆಯಿಲ್ಲದೆ ನಾನು ಅವಳನ್ನು ಬಂಧಮುಕ್ತ ಮಾಡಲಾರೆನು. ನಾನು ಯಾವ ಕರಾರಿನಿಂದ ಅವಳನ್ನು ಬಿಟ್ಟುಬಿಡಬೇಕೆಂದಿರುವೆನೋ, ಆ ಕರಾರನ್ನೊಪ್ಪಿಕೊಳ್ಳಲಿಕ್ಕೆ ನೀವು ಅಸಮ್ಮತಿಪಡಲಾರಿರೆಂದೇ ನನ್ನ ನಂಬಿಕೆಯಿದೆ. ನೀವು ನನ್ನ ಮಾತಿನಲ್ಲಿ ವಿಶ್ವಾಸವಿಟ್ಟು ನನ್ನನ್ನು ಕಾಣಲಿಕ್ಕೆ ಬಂದರೆ, ನಿಮಗಾವ ತೊಂದರೆಯೂ ಆಗಲಿಕ್ಕಿಲ್ಲ. ಆದುದರಿಂದ ನೀವು ನನ್ನೀ ಮಾತನ್ನು ನಂಬಬಹುದಾಗಿದೆ."

ನನ್ನ ಕೆಲ ಜನ ಹಿತೈಷಿಗಳು ತಮ್ಮ ಗಾಡಿಯೊಂದಿಗೆ ನಿಮ್ಮ ಜೇಲಿನ ಒದಿಯ ರಾಜಮಾರ್ಗದಲ್ಲಿ ಕಾದಿರುತ್ತಾರೆ. ನೀವು ಆ ಗಾಡಿಯಲ್ಲೇ ಬಂದರೆ, ನಿಮಗೆ ನನ್ನ ಸಾಕ್ಷಾತ್ಕಾರವಾದೀತು. ನೀವು ನಿಮ್ಮ ಪಪ್ಪಲಿನ ಜೇಲಿನೊಳಗಿಂದ ಹೊರಬೀಳುವಾಗ ಈ ಪತ್ರವನ್ನು ಹರಿದು ಸುಟ್ಟು ಬಿಡಬೇಕು; ಹಾಗು ಎಲ್ಲಿಗೆ ಹೊರಡುತ್ತಿರುವಿರೆಂಬದನ್ನು ಯಾರ ಮುಂದೂ ಉಸುರ ಕೂಡದು. ನೀವು ನನ್ನೀ ಸಲಹೆಯನ್ನು ಅಗ್ರಾಹ್ಯ ಮಾಡಿದರೆ ಅಥವಾ ಯಾವದೊಂದು ಬಗೆಯಿಂದ ವಿಶ್ವಾಸಘಾತ ಮಾಡಿದರೆ, ನಿಮಗೆ ಆ ಮೇರಿ ಕುಮಾರಿಯ ದರ್ಶನವು ಇಹ ಜನ್ಮದಲ್ಲೆಂದೂ ಆಗಲಿಕ್ಕಿಲ್ಲ; ಇಷ್ಟೇ ಅಲ್ಲ, ಅವಳ ಮೃತದೇಹದ ಪತ್ತೆ ಕೂಡ ಹತ್ತಲಿಕ್ಕಿಲ್ಲ. ಇತಿ— ನಿಮ್ಮ ಹಿತಚಿಂತಕ,

ಚಾಯ್ನಾ ಫೀಲ್ಡಿನ ಸಿಂಹ."

ಆ ಪತ್ರವನ್ನೋದಿದ ಕೂಡಲೆ ರಿಚರ್ಡನು ಬಹು ತ್ವೇಷಗೊಂಡನು. ತಮ್ಮ ಜೇಲಿನ ಬಳಿಯಲ್ಲಿ ಬಂದು ನಿಂತಿರುವ ಈ ಚಾಯ್ನಾ ಫೀಲ್ಡಿನ ಸಿಂಹನ ಗಾಡಿಯನ್ನೂ ಅದರಲ್ಲಿಯ ಜನರನ್ನೂ ಒಮ್ಮೆಲೆ ಕೈಸೆರೆ ಹಿಡಿಯಬೇಕೆಂದು

ಅವನಿಗೊಮ್ಮೆ ಅನಿಸಿತು; ಆದರೆ ಪರಕ್ಷಣದಲ್ಲಿಯೇ ತನ್ನೀ ಕೃತಿಯ ಫಲವು ಬಹು ಶೋಚನೀಯವಾಗುವದೆಂದು ಅವನಿಗನಿಸಿತು. ಇದರಿಂದ ಆ ದುರ್ವೃತ್ತರು ಸಿಟ್ಟಿಗೆದ್ದು ಮೇರಿಯನ್ನು ಕೊಲೆಗೆಯ್ಯಬಹುದೆಂದು ಅವನ ಖಾತ್ರಿಯಾಯಿತು. ಬಳಿಕ ರಿಚರ್ಡನು ತನ್ನ ಆಸನದಿಂದೆದ್ದು ಅಧೀರಭಾವದಿಂದ ಆ ಕೋಣೆ ತುಂಬ ಅಡ್ಡಾಡಹತ್ತಿದನು. ಆ ಚಾಯ್ನಾ ಫೀಲ್ಡಿನ ಸಿಂಹನನ್ನು ಭೇಟಿಯಾಗುವದು ಯೋಗ್ಯವೋ-ಅಯೋಗ್ಯವೋ ಎಂಬ ವಿಷಯವೇ ಆಗಿನ ಆತನ ಯೋಜನೆಯ ಸಂಗತಿಯಾಗಿತ್ತು. ಕೆಲ ನಿಮಿಷಗಳ ತರುವಾಯ ಆತನ ಬಳಿಗೆ ಹೋಗುವದನ್ನೇ ಅವನು ನಿರ್ಧರಿಸಿದನು; ಆದರೆ ಯಾವ ಕರಾರಿನಿಂದ ಮೇರಿಯನ್ನು ಬಿಡಿಸಿಕೊಂಡು ಬರಬೇಕೆಂಬದನ್ನು ಮಾತ್ರ ಆತನು ನಿಷ್ಕರ್ಷಿಸದಾದನು. ಯಾವ ಕರಾರೇ ಯಾಕಾಗಲೊಲ್ಲದು, ಮೇರಿಯ ಬಂಧಮುಕ್ತತೆಯ ಈ ಸುಯೋಗವನ್ನು ಕಳಕೊಳ್ಳಬಾರದೆಂಬದೇ ಆಗಿನ ಆತನ ಸಂಕಲ್ಪವಾಯಿತು. ಕೂಡಲೆ ಅವನು ಆ ಪತ್ರವನ್ನು ತಕ್ಕೊಂಡು ಹರಿದು, ಚೂರು ಚೂರಾಗಿ ಮಾಡಿ ಸುಟ್ಟು ಬಿಟ್ಟನು! ಹಾಗು ಆಗ ತಾನು ಎಲ್ಲಿಗೆ ಹೊರಡುತ್ತಿರುವೆನೆಂಬದನ್ನು ಅಲ್ಲಿಯವರಾರಿಗೂ ತಿಳಿಸದೆ, ಬೂಟು-ಕೋಟುಗಳನ್ನೇರಿಸಿ ಆ ಪಪ್ಪಲಿನ ಜೇಲಿನಿಂದ ಹೊರಬಿದ್ದನು. ಈ ಮೊದಲು ಪತ್ರ ತಂದು ಕೊಟ್ಟಿದ್ದ ಸಾರ್ಜಂಟನು ಮುಖ್ಯ ಬಾಗಿಲಲ್ಲಿಯೇ ನಿಂತಿದ್ದನು. ರಿಚರ್ಡನು ಅವನಿಗೇನೂ ಹೇಳದೆ ಸಾಗಿದನು.

ರಾಜಮಾರ್ಗದಲ್ಲೊಂದು ಗಾಡಿಯು ನಿಂತಿತ್ತು. ಅದರ ಬಾಗಿಲವು ಮುಚ್ಚಲ್ಪಟ್ಟಿತ್ತು. ರಿಚರ್ಡನು ಆ ಗಾಡಿಯ ಬಳಿಗೆ ಹೋದ ಕೂಡಲೆ ಅದರ ಬಾಗಿಲವು ತೆರೆಯಲ್ಪಟ್ಟಿತು. ಅದರೊಳಗೆ ಇಬ್ಬರು ಚೀನಿಗರು ಕುಳಿತುಕೊಂಡಿದ್ದರು. ಕತ್ತಲೆಯಲ್ಲಿ ರಿಚರ್ಡನಿಗೆ ಅವರ ಮುಖಚರ್ಯೆಗಳು ಸ್ಪಷ್ಟವಾಗಿ ಕಾಣಿಸಲಿಲ್ಲ.

ರಿಚರ್ಡನು ಗಾಡಿಯ ಬಳಿಗೆ ಹೋಗಿ ಹತ್ತಬೇಕೋ-ಹತ್ತಬಾರದೋ ಎಂಬ ಬಗ್ಗೆ ಯೋಚಿಸತೊಡಗಿದನು. ಅಷ್ಟರಲ್ಲಿ ಬಂಡಿಯೊಳಗಿನ ಆ ಇಬ್ಬರೂ ಚೀನಿಗರು ಆತನನ್ನು ಒಳಗೆ ಜಗ್ಗಿಕೊಂಡರು; ಹಾಗು ಒತ್ತಾಯದಿಂದ ಅವನನ್ನಲ್ಲಿ ಕೂರಿಸಿ, ಬಾಗಿಲವನ್ನಿಕ್ಕಿ ಬಿಟ್ಟರು.

ಆ ಮುತ್ಠಾಳ ಜನರ ಆ ವಿಚಿತ್ರ ವರ್ತನದಿಂದ ರಿಚರ್ಡನು ಕ್ರೋಧಸಂತಪ್ತನಾದನು. ಈತನ ಬಾಯಿಂದ ಶಬ್ದಗಳು ಹೊರಹೊರಡುವ ಮೊದಲೇ ಅವರಲ್ಲೊಬ್ಬನು ಶುದ್ಧವಾದ ಇಂಗ್ಲಿಷಭಾಷೆಯಿಂದ: ಮಹಾನುಭಾವರೇ, ನೀವು ಹೀಗೆ ಸಿಟ್ಟಾಗಬೇಡಿರಿ. ನೀವು ಅಂಜುವ ಕಾರಣವಿಲ್ಲ. ನಾವು ನಿಮಗೆ ಯಾವ ಬಗೆಯಿಂದಲೂ ಅನಿಷ್ಟ ಬಗೆಯುವದಿಲ್ಲ; ಆದರೆ ನಾವು ನಿಮ್ಮನ್ನು ಎಲ್ಲಿಗೆ ಕರೆ

ದೊಯ್ಯುತ್ತಿರುವೆವೆಂಬದನ್ನು ಮಾತ್ರ ನೀವು ತಿಳಿಯಲಾರಿರಿ. ಇದರ ಕಾರಣವನ್ನು ನಾವು ನಿಮಗೆ ತಿಳಿಸಲವಶ್ಯವಿಲ್ಲ.

ಆ ಮೇಲೆ ಆ ಚೀನಿಗರಿಬ್ಬರೂ ಕೂಡಿ ರಿಚರ್ಡನ ಕಣ್ಣುಗಳನ್ನು ತಮ್ಮ ಬಳಿಯ ಅರಿವೆಯಿಂದ ಚೆನ್ನಾಗಿ ಕಟ್ಟಿದರು. ರಿಚರ್ಡನು ಅವರಿಗೆ ಆತಂಕ ಮಾಡಲಿಲ್ಲ. ಈಗ ಆತನ ಮನಸ್ಸಿನಲ್ಲಿ ಸಿಟ್ಟಿನ ಬದಲು ವಿಸ್ಮಯವು ಪ್ರಾದುರ್ಭವಿಸಿತು. ಇಷ್ಟರಲ್ಲಿ ಆ ಮೋಟಾರಕಾರು ಹಲವು ದಾರಿಗಳನ್ನು ಸುತ್ತಿ ಧೃತಗತಿಯಿಂದ ತಾನು ಹೋಗತಕ್ಕಲ್ಲಿಗೆ ನಡೆದಿತ್ತು.

ಕಣ್ಣು ಕಟ್ಟಿಸಿಕೊಂಡು ಕೈದಿಯಂತೆ ಕುಳಿತಿದ್ದ ರಿಚರ್ಡನ ಮನಸ್ಸಿನಲ್ಲಿ ಬಗೆಬಗೆಯ ವಿಚಾರಗಳು ತಲೆದೋರಹತ್ತಿದವು ಆ ದುರ್ವೃತ್ತನಾದ ಚಾಯ್ನಾ ಫೀಲ್ಡಿನ ಸಿಂಹನ ಮಾತನ್ನು ನಂಬಿ, ತಾನು ಚೆನ್ನಾಗಿ ವಿಚಾರ ಮಾಡದೆ ಇವರ ಕೈವಶವಾದದ್ದು ಯೋಗ್ಯವೋ-ಅಯೋಗ್ಯವೋ ಎಂಬದನ್ನು ಅವನು ಸ್ಥಿರಪಡಿಸದಾದನು. ಇವರ ಕೈಸೇರಿದ್ದು ಯೋಗ್ಯವಾಗಲಿಲ್ಲೆಂದೂ ಈ ನೀಚರ ನಂಬಿಗೆಯು ತಕ್ಕದ್ದಲ್ಲೆಂದೂ ಇವರು ತನ್ನನ್ನು ತಮ್ಮ ಬಿಡಾರಕ್ಕೊಯ್ದುಕೊಂದುಬಿಟ್ಟರೆ, ತಾನು ಮಾಡುವದೇನೆಂದೂ ಆತನಿಗೊಮ್ಮೆ ಅನಿಸಿದರೆ, ಮೇರಿಯ ಉದ್ಧಾರಕ್ಕಾಗಿ ತಾನು ಮರಣಕ್ಕೆದುರಾಗಲೇ ಬೇಕಾಗಿರುವದರಿಂದ ತಾನು ಇವರೊಡನೆ ಬಂದದ್ದೇ ವಿಹಿತವಾಯಿತೆಂದು ಮತ್ತೊಮ್ಮೆ ಅನಿಸುತ್ತಿತ್ತು. ಮೇರಿಯ ದರ್ಶನದ ಸುಯೋಗವನ್ನು ತ್ಯಜಿಸುವದು ಯಾವ ಕಾರಣದಿಂದಲೂ ಅವನಿಗೆ ಯೋಗ್ಯವೆನಿಸಲಿಲ್ಲ.

ಎಷ್ಟೋ ಹೊತ್ತಿನ ಮೇಲೆ ಆ ಗಾಡಿಯು ಒತ್ತಟ್ಟಿಗೆ ಹೋಗಿ ನಿಂತುಕೊಂಡಿತು. ರಿಚರ್ಡನ ಸಂಗಡಿಗರಿಬ್ಬರೂ ಬಂಡಿಯಿಂದಿಳಿದು, ಆತನನ್ನೂ ಇಳಿಸಿಕೊಂಡರು. ಕಣ್ಣು ಕಟ್ಟಿದ ಸ್ಥಿತಿಯಲ್ಲಿ ಕೈಹಿಡಿದುಕೊಂಡು ತನ್ನನ್ನೆಲ್ಲಿಗೆ ಕರೆದೊಯ್ಯುತ್ತಿರುವರೆಂಬದನ್ನು ಆತನು ತಿಳಿಯದಾದನು; ಆದರೆ ತನ್ನ ಎಡಬಲಗಳಲ್ಲಿಯ ಹಲವರ ಅಸ್ಫುಟ ಮಾತುಗಳು ಅವನಿಗೆ ಕೇಳಿಸುತ್ತಿದ್ದವು. ಆತನ ಸಂಗಡಿಗರಿಬ್ಬರೂ ಅವನ ಎರಡೂ ಕೈಗಳನ್ನು ಹಿಡಿದುಕೊಂಡು ಅವನನ್ನು ಜಗ್ಗುತ್ತ ಎಷ್ಟೋ ದಾರಿಯನ್ನು ಕ್ರಮಿಸಿದರು. ಆತನು ಎರಡು-ಮೂರು ಸಾರೆ ಹಲವು ಮೆಟ್ಟಿಲುಗಳನ್ನು ಹತ್ತಿ ಇಳಿಯಬೇಕಾಯಿತು. ತದನಂತರ ಆತನೆದುರಿಗಿನ ಒಂದು ಕೋಣೆಯ ಬಾಗಿಲವು ಒಳ್ಳೇ ಕಸುವಿನಿಂದ ತೆರೆಯಲ್ಪಟ್ಟದ್ದರಿಂದ, ಆ ಕದದ ಕಿರ್ರೆಂಬ ಸಪ್ಪಳವು ಕೇಳಿಸಿತು. ಅಲ್ಪಾವಕಾಶದಲ್ಲಿಯೇ ಆ ಕದವು ಮತ್ತೆ ಮುಚ್ಚಲ್ಪಟ್ಟಂತೆ ತನ್ನ ಹಿಂದಿನಿಂದ ಕೇಳಿಸಿದ ಸಪ್ಪಳದಿಂದ ಅವನಿಗೆ ಗೊತ್ತಾಯಿತು. ಅದರಿಂದ ತಾನೊಂದು ಕೋಣೆಯಲ್ಲಿ ಪ್ರವೇಶಿಸಿದೆ

ನೆಂದು ರಿಚರ್ಡನು ಅಂದುಕೊಂಡನು. ಆ ಕೂಡಲೆ ಆತನ ಕಣ್ಣುಗಳ ಮೇಲಿನ ಅರಿವೆಯು ಬಿಚ್ಚಲ್ಪಟ್ಟಿತು. ಅವನು ವಿಸ್ಮಯಭರದಿಂದ ನೋಡುತ್ತಾನೆ, ತಾನೊಂದು ಶೃಂಗರಿಸಲ್ಪಟ್ಟ ವಿಸ್ತೃತವಾದ ಬೈಠಕಖಾನೆಯಲ್ಲಿ ಬಂದು ನಿಂತಿರುವನು. ಇದೇ ಈ ಮನೆಯೇ ಚಾಯ್ನಾ ಫೀಲ್ಡಿನ ಸಿಂಹನ ಮನೆಯೆಂಬದು ರಿಚರ್ಡನಿಗೆ ಗೊತ್ತಾಯಿತು. ಆ ದಿವಾಣಖಾನೆಯು ಸಮ್ರಾಟನ ದಿವಾಣಖಾನೆಯಂತೆ ಬಹುಮೂಲ್ಯವಾದ ವಸ್ತು-ಒಡವೆಗಳಿಂದ ಸುಸಜ್ಜಿತವಾಗಿತ್ತು. ಸುವಿಷ್ಟವಾದ ಸುಗಂಧದಿಂದ ಆ ಪ್ರದೇಶದೊಳಗಿನ ವಾಯು ಲಹರಿಗಳು ಘಮಘಮಿಸುತ್ತಿದ್ದವು. ಆ ದಿವಾಣಖಾನೆಯೊಳಗಿನ ಒಂದು ಅಮೂಲ್ಯವಾದ ಆಸನದಲ್ಲೊಬ್ಬ ಚೀನೀಯ ತರುಣನು ಕುಳಿತುಕೊಂಡಿದ್ದನು. ಆತನ ವೇಷಭೂಷಣಗಳ ಆಡಂಬರವನ್ನು ಕಂಡು, ಈತನೇ ಈ ಚಾಯ್ನಾ ಫೀಲ್ಡಿನ ಸಿಂಹನಾದ ಉಷಂಡ ಚಂಡನೆಂದು ರಿಚರ್ಡನಿಗನಿಸಿತು. ಆತನ ಮುಖಕಾಂತಿಯು ಹಳದಿ ಮಿಶ್ರ ಬಿಳೀ ಬಣ್ಣದ್ದಾಗಿತ್ತು. ಅಂದರೆ ಸರ್ವಸಾಧಾರಣ ಚೀನಿಗರಿಗಿಂತಲೂ ಗೌರಕಾಂತಿಯುಳ್ಳದ್ದಾಗಿತ್ತು. ಆತನ ಕಣ್ಣು-ಮೋರೆಗಳಿಂದ ತೇಜವೂ, ದಂಭವೂ ಹೊರಚಿಮ್ಮುತ್ತಿದ್ದವು. ಆತನ ದೃಷ್ಟಿಯಲ್ಲಿ ಕೋಮಲತೆಯು ಅಥವಾ ಸದಯತೆಯು ಲವಲೇಶವೂ ಇರಲಿಲ್ಲ.

ವಿದ್ರೋಹಿಗಳ ದಳಪತಿಯಾದ ಉಷಂಡ ಚಂಡನು ರಿಚರ್ಡನ ಮುಖದ ಕಡೆಗೆ ಟಕಮಕವೆಂದು ನೋಡುತ್ತ, ಗಂಭೀರ ಸ್ವರದಿಂದ:—ರಿಚರ್ಡ ಡೆಭೆನಟರೇ, ನೀವು ನನ್ನ ಮಾತಿನಲ್ಲಿ ವಿಶ್ವಾಸವಿಟ್ಟು ಇಲ್ಲಿಯ ವರೆಗೆ ಒಂದದ್ದಕ್ಕಾಗಿ ನಾನು ಬಹು ಮೋದಗೊಂಡಿರುತ್ತೇನೆ. ನಾನು ನಿಮಗೆ ಯಾವ ಉಪದೇಶ ಕೊಟ್ಟಿದ್ದೆನೋ, ಅದನ್ನು ಪಾಲಿಸಿರುವಿರಷ್ಟೆ? ಆ ಪತ್ರವನ್ನು ನಾಶಪಡಿಸಿರುವಿರಾ? ಮತ್ತು ಎಲ್ಲಿಗೆ ಹೊರಡುತ್ತಿರುವಿರೆಂಬದನ್ನು ಯಾರ ಮುಂದೂ ಹೇಳಿಲ್ಲವಷ್ಟೇ ?

ರಿಚರ್ಡನು ದೃಢಸ್ವರದಿಂದ:—ಅಹುದು; ಆ ಪತ್ರವನ್ನು ನಾಶಪಡಿಸಿರುತ್ತೇನೆ; ಮತ್ತು ನಾನು ಎಲ್ಲಿಗೆ ಹೊರಟಿರುತ್ತೇನೆಂಬದನ್ನು ಯಾರ ಮುಂದೂ ಹೇಳಿರುವದಿಲ್ಲ. ಮೇರಿಯನ್ನು ಬಂಧಮುಕ್ತಪಡಿಸುವೆನೆಂದು ತಿಳಿಸಿದ ನಿನ್ನ ವಚನವನ್ನು ನಂಬಿ, ನಿನ್ನ ಉಪದೇಶವನ್ನು ಪರಿಪಾಲಿಸಿರುತ್ತೇನೆ. ನೀನು ಅವಳನ್ನು ಈಗಲೆ ನನ್ನೊಡನೆ ಕಳಿಸಿಬಿಡಬೇಕೆಂದು ಬಯಸುತ್ತೇನೆ.

ಉಷಂಡ:—ನೀನು ನನ್ನ ಕರಾರಿಗೆ ಒಪ್ಪುವದಾದರೆ, ನಿನ್ನ ಮನೋಬಯಕೆಯು ಈಡೇರುವದು.

ರಿಚರ್ಡ:—ಯಾವ ಕರಾರಿನ ಮೇರೆಗೆ ನೀನು ಅವಳನ್ನು ಬಿಟ್ಟುಬಿಡುವೆ

ಯೆಂಬದು ನಿನ್ನ ಆ ಪತ್ರದಲ್ಲೆಲ್ಲೂ ಉಲ್ಲೇಖಿಸಿರಲಿಲ್ಲ.

ಉಷಂಡ:—ಯಾವ ಕರಾರಿನ ಮೇಲೆ ನಾನು ಅವಳನ್ನು ಬಂಧಮುಕ್ತ ಗೊಳಿಸೇನೆಂಬದನ್ನು ನೀನು ಅನುಮಾನಿಸಲಾರೆಯಾ?

ರಿಚರ್ಡ:—ಕೆಲ ವಾರಗಳ ಮುಂಚೆ ನೀನು ನನಗಾವ ಪತ್ರವನ್ನು ಬರೆದಿದ್ದೆಯೋ, ಅದರಲ್ಲಿ ನಾನೂ ನನ್ನ ತಂದೆಯೂ ನಿನ್ನ ಮತ್ತು ನಿನ್ನ ಅನುಚರರ ಚಲನವಲನದ ಮೇಲೆ ಲಕ್ಷ್ಯವಿರಿಸಿದರೆ ಅಥವಾ ನಿಮ್ಮಗಳಿಗೆ ಕೇಡು ಬಗೆಯಲಿಕ್ಕೆ ಪ್ರಯತ್ನಿಸಿದರೆ, ನೀನು ಮೇರಿಯ ಹತ್ಯೆಗೆಯ್ಯಲಿಕ್ಕೆ ಹಿಂದುಮುಂದು ನೋಡಲಿಕ್ಕಿಲ್ಲೆಂದು ತಿಳಿಸಿ, ನನ್ನನ್ನು ಅಂಜಿಸಿಬಿಟ್ಟಿದ್ದೆ. ನಿನ್ನಿಂದ ಮೇರಿಗೆ ಯಾವ ಕೇಡೂ ಉಂಟಾಗಬಾರದೆಂದು, ನಾವು ಇದುವರೆಗೂ ನಿನ್ನ ಪತ್ರದಂತೆ ನಡೆದಿರುತ್ತೇವೆ. ನಾವು ಇದೇ ಕರಾರಿನಂತೆ ಇನ್ನು ಮುಂದೆಯೂ ನಡೆಯಬೇಕೆಂಬುದೇ ನಿನ್ನ ಮನೀಷೆಯಿರಬೇಕೆಂದು ನನ್ನ ಅನುಮಾನವಿರುತ್ತದೆ. ನಾವು ಹಾಗೆ ನಡೆಯಲಿಕ್ಕೆ ಒಪ್ಪಿದರೇ ನೀನು ಆಕೆಯನ್ನು ಬಿಡಬಹುದಾಗಿದೆ; ಆದರೆ ಈ ಲಂಡನ್ನಿನ ಎಲ್ಲ ಪೋಲೀಸರೂ ನಿನ್ನೀ ಆಜ್ಞೆಯಂತೆ ನಡೆಯಬೇಕೆಂದು ನೀನು ಬಯಸುತ್ತೀಯೇನು?

ಉಷಂಡ:—ಅಹುದು; ನನ್ನ ಕರಾರಿನ ಒಂದು ಭಾಗವು ಹಾಗೆಯೇ ಆಗಿರುತ್ತದೆ. ಇದರ ಹೊರತು ಬೇರೊಂದು ಕರಾರೂ ಇರುತ್ತದೆ. ನಾನು ಅದನ್ನೇ ನಿನಗೀಗ ಹೇಳುತ್ತೇನೆ. ನನ್ನ ವಿಷಯವಾಗಿ ನಿನಗೇನೆನಿಸಿದೆಯೆಂಬುದನ್ನು ನಾನು ಹೇಳಲಾರೆನು; ಆದರೆ ನಾನು ಬುದ್ಧಿಗೇಡಿಯಲ್ಲ; ಕುರುಡನೂ ಅಲ್ಲೆಂಬದನ್ನು ನೀನು ಚೆನ್ನಾಗಿನಂಬಬಹುದಾಗಿದೆ. ನಾನು ಯಾವುದನ್ನು ಸ್ವಂತ ಕಣ್ಣುಗಳಿಂದ ಕಾಣಲಿಕ್ಕಿಲ್ಲವೋ, ಅದು ನನ್ನ ಪರಮ ವಿಶ್ವಾಸಕರೂ, ಸುದಕ್ಷರೂ ಆಗಿರುವ ಅನುಚರರ ದೃಷ್ಟಿಗೆ ಬೀಳದಿರಲಾರದು. ಅಂತೆಯೇ ಲಂಡನ್ನಿನ ಸುಪ್ರಸಿದ್ಧ ಪತ್ತೆಗಾರನಾದ ರಾಬರ್ಟ ಬ್ಲೇಕನು ನನ್ನ ಪತ್ತೆಗಾಗಿ ನಿಯೋಜಿಸಲ್ಪಟ್ಟಿರುತ್ತಾನೆಂಬದನ್ನು ನಾನು ಚೆನ್ನಾಗಿ ಬಲ್ಲೆನು.

ಉಷಂಡ ಚಂಡನ ಆ ನುಡಿಯನ್ನು ಕೇಳಿ ರಿಚರ್ಡನು ಬೆಚ್ಚಿಬಿದ್ದನು! ಯಾವುದೋ ಒಂದು ಅಜ್ಞಾತ ಭಯದಿಂದ ಆತನ ಹೃದಯವು ಥರಥರನೆ ನಡುಗಹತ್ತಿತು. ಬ್ಲೇಕನನ್ನು ಆತನ ಕೃತಸಂಕಲ್ಪದಿಂದ ಪರಾಙ್ಮುಖಗೊಳಿಸಬೇಕೆಂದು ಈತನು ತನ್ನನ್ನು ಒತ್ತಾಯ ಪಡಿಸದಿರನು; ಆದರೆ ಹಾಗೆ ಮಾಡಲಿಕ್ಕೆ ಅಂಗೀಕರಿಸುವದು ತನ್ನಿಂದ ಶಕ್ಯವಲ್ಲೆಂಬದನ್ನು ತಿಳಿದೇ ಅವನು ಬಹು ಚಂಚಲನಾದನು; ಆದರೂ ಆಗ ರಿಚರ್ಡನು ಏನನ್ನೂ ಉಸುರಲಿಲ್ಲ.

ಬಳಿಕ ಉಷಂಡ ಚಂಡನು:—ರಾಬರ್ಟ ಬ್ಲೇಕನು ನನ್ನ ಪತ್ತೆ ಹಚ್ಚುವ

ಸಲುವಾಗಿ ಸಂಧಾನ ನಡಿಸಿರುವನೆಂಬದನ್ನು ನಾನು ಚೆನ್ನಾಗಿ ಬಲ್ಲೆನು. ಚಾಊ-ಇಯಾಂಗನೆಂಬ ಹೆಸರಿನ ನಮ್ಮ ಸ್ವಜನದ್ರೋಹಿಯಾದ ಚೀನಿಗನು ಲಂಡನ್ನಿನ ಸುಪ್ರಸಿದ್ಧ ಪತ್ತೇದಾರಿಯ ಅಡ್ಡೆಯಾದ ಸ್ಕಾಟಲಂಡ ಯಾರ್ಡಿನ ಗುಪ್ತಪೋಲೀಸರಿಂದ ನನ್ನ ಪತ್ತೆಗಾಗಿ ನಿಯೋಜಿಸಲ್ಪಟ್ಟಿದ್ದನು; ಆದರೆ ಅವರ ಆ ಗುಪ್ತ ಚರನು ನನ್ನ ಕಣ್ಣಲ್ಲಿ ಮಣ್ಣು ತೂರಲಿಕ್ಕೆ ಅಸಮರ್ಥನಾದನು. ನಾನು ಆ ಪತ್ತೆದಾರನ ಕೊಲೆ ಮಾಡಿಸಿ, ಅವನನ್ನು ಪರಲೋಕದೊಳಗಿನ ಗುಪ್ತಪೋಲೀಸ ಖಾತೆಗೆ ವರ್ಗಮಾಡಿಸಿ ಬಿಟ್ಟೆನು! ಚಾಊ-ಇಯಾಂಗನ ಗತಿಯು ಹಾಗಾಗಲು, ಸ್ಕಾಟಲಂಡ ಯಾರ್ಡಿನವರು ರಾಬರ್ಟ-ಬ್ಲೇಕನನ್ನು ನನ್ನ ಅನುಸಂಧಾನಕ್ಕೆ ನಿಯಮಿಸಿರುತ್ತಾರಂತೆ. ಬ್ಲೇಕನು ಎಷ್ಟು ಧೂರ್ತನಾಗಿರುವನೋ, ಅಷ್ಟೇ ಕುಶಲನಾಗಿರುತ್ತಾನೆ. ನಾನು ಅವನಿಗೆ ಅಂಜುವೆನೆಂಬದನ್ನು ಒಪ್ಪದಿರಲಾರೆನು. ಆತನ ಹೊರತು ಈ ಲಂಡನ್ನಿನೊಳಗಿನ ಬೇರೆ ಯಾವ ಪತ್ತೆದಾರರನ್ನೂ ನಾನು ಲೆಕ್ಕಿಸುವದಿಲ್ಲ. ನೀನು ನಿನ್ನ ತರುಣ ಪ್ರಣಯಿನಿಯ ಬಂಧವಿಮೋಚನೆಯನ್ನಪೇಕ್ಷಿಸುತ್ತಿದ್ದರೆ, ನೀನು ಕೂಡಲೆ ಬ್ಲೇಕನನ್ನು ಕಂಡು, ಅವನು ಇನ್ನು ಮುಂದೆ ನನ್ನ ಹಾಗು ನನ್ನ ಅನುಚರರ ಅನುಸರಣವನ್ನು ಬಿಟ್ಟುಬಿಡುವಂತೆಯೂ ನಮ್ಮಗಳಿಗೆ ಕೇಡು ಬಗೆಯದಂತೆಯೂ ಅವನಿಂದ ವಚನ ಪಡೆಕೋ. ನೀನು ಹೀಗೆ ಮಾಡಿದರೇ ನಾನು ಮೇರಿಯನ್ನು ಬಂಧಮುಕ್ತಗೊಳಿಸುತ್ತೇನೆ.

ರಿಚರ್ಡ:—ನಾನು ನಿನ್ನೀ ಹೊಸ ಕರಾರಿನಂತೆ ನಡೆಯಲಿಕ್ಕೆ ಸಿದ್ಧನಾಗುವದು ತೀರ ಅಸಂಭವವು. ನಿನ್ನ ಮೊದಲಿನ ಕರಾರಿನಂತೆ ಕೆಲಸ ನಡಿಸುವದರಲ್ಲಿ ನನಗೆ ಆಪತ್ತಿಯಿಲ್ಲ; ಯಾಕಂದರೆ ಅದು ನನ್ನ ಸ್ವಂತದ ವಿಷಯವಾಗಿರುತ್ತದೆ; ಆದರೆ ನನ್ನ ಸ್ವಾರ್ಥದ ಸಲುವಾಗಿ ರಾಬರ್ಟ ಬ್ಲೇಕನು ತನ್ನ ಕೃತಸಂಕಲ್ಪವನ್ನು ತ್ಯಜಿಸಿಯಾನೆಂಬದನ್ನು ನಾನು ಹೇಗೆ ಆಶಿಸಬೇಕು? ನನ್ನ ಈ ಬಗೆಯ ಮಾತನ್ನು ಆತನು ತನ್ನ ಕಿವಿಯ ಮೇಲಾದರೂ ಏಕೆ ಹಾಕಿಕೊಂಡಾನು? ನನ್ನ ಲಾಭ ನಷ್ಟಗಳ ಪರಿವೆಯು ಅವನಿಗೇಕಿರಬೇಕು?

ಉಷಂಡ ಛಂಡ:—ಅದನ್ನೆಲ್ಲ ನಾನು ಕೇಳಲಿಚ್ಛಿಸುವದಿಲ್ಲ. ಏನು ಬೇಕಾದ ಹಂಚಿಕೆ ಮಾಡ್ಯಾದರೂ ನೀನು ಅವನನ್ನು ನಾನು ಆಗಲೆ ಹೇಳಿದ ಆದೇಶದಂತೆ ನಡೆಯಹಚ್ಚು. ಒಬ್ಬ ನಿರಪರಾಧಿಯಾದ ಯುವತಿಯ ಪ್ರಾಣರಕ್ಷಣೆಗಾಗಿ ಅವನು ನಾನು ಹೇಳಿದಂತೆ ನಡೆದಾನೆಂದು ನನಗೆ ಭರವಸೆಯೆನಿಸುತ್ತದೆ. ನೀನು ನನ್ನ ಆಜ್ಞೆಯನ್ನು ಪಾಲಿಸತಕ್ಕವನೋ-ಇಲ್ಲವೋ? ಎಂಬದನ್ನು ತಿಳಿಯಲಿಚ್ಛಿಸುತ್ತೇನೆ. ನಿನ್ನ ಸಂಗಡ ವೃಥಾ ವಾದಿಸಾಡಲಿಕ್ಕೆ ನನಗೆ ಸಮಯವಿಲ್ಲ.

ರಿಚರ್ಡ:-ಬ್ಲೇಕನನ್ನು ನಿನ್ನ ಕರಾರಿನಂತೆ ನಡೆಯಹಚ್ಚುವದು ನನ್ನಿಂದಾ

ಗುವದಿಲ್ಲ. ಯಾವ ಕಾರಣದಿಂದಲೂ ಅವನು ನನ್ನ ಮಾತಿಗೆ ಒಡಂಬಡಲಾರನು.

ಉಷಂಡ: — ಆದರೆ ನೀನು ನಿನ್ನ ಪ್ರಾಣಪ್ರಿಯಳ ಜೀವರಕ್ಷಣೆಗಾಗಿ ಯಾದರೂ ಆ ಬಗೆಯ ಪ್ರಯತ್ನವನ್ನು ಯಥಾಶಕ್ತಿಯಿಂದ ಮಾಡಲಾರೆಯಾ? ಬ್ಲೇಕನಿಗೆ ಹಾಗೆಂದು ಹೇಳಲಿಕ್ಕೆ ಕೂಡ ಅಂಜುವೆಯೇನು?

ರಿಚರ್ಡ:—ನಿರರ್ಥಕವಾಗಿ ಹೇಳುವದರಿಂದ ಪ್ರಯೋಜನವೇನು? ಅವನು ನನ್ನೀ ಮಾತಿಗೆ ಕಿವಿಗೊಡದೆ, ನನ್ನನ್ನೇ ಹಿಯ್ಯಾಳಿಸುವನು; ಅದರಿಂದಲೇ ನಾನವನಿಗೆ ಈ ಬಗ್ಗೆ ಏನೂ ಹೇಳಲಾರೆನು.

ಉಷಂಡ: — ಹಾಗಾದರೆ ನೀನು ಮೇರಿಯ ಬಂಧವಿಮೋಚನೆಯ ಆಶೆಯನ್ನೇ ತ್ಯಜಿಸು. ನಾನು ಅವಳನ್ನು ಕೊಲ್ಲಿಸಲುದ್ಯುಕ್ತನಾಗುತ್ತೇನೆ.

ರಿಚರ್ಡ:—ನೀನು ನನಗೆ ಸುಮ್ಮನೆ ಆ ಅಂಜಿಕೆಯನ್ನು ತೋರುತ್ತಿರುವೆ. ಮೇರಿಯನ್ನು ಕೊಲ್ಲಿಸುವ ಸಾಹಸವು ನಿನಗಾದೀತೇನು? ಒಂದು ವೇಳೆ ನೀನು ಅವಳನ್ನು ಕೊಲ್ಲಿಸಿದರೆ, ಬ್ರಿಟಿಶ ಕಾಯಿದೆಯ ಪ್ರಕಾರ ನಿನಗೂ ಪ್ರಾಣ ದಂಡಣದ ಕಠಿಣ ಶಿಕ್ಷೆಯಾಗುತ್ತದೆ. ನೀನು ಇನ್ನೆಷ್ಟು ದಿನ ಈ ಲಂಡನ್ನಿನ ಪೋಲೀಸರ ಕಣ್ಣು ತಪ್ಪಿಸಿ ಅಡಗಿ ಕೂಡ್ರುವೆ? ಇಲ್ಲಿಯ ಪೋಲೀಸರು ಶೀಘ್ರವೇ ನಿನ್ನೀ ಚಾಯ್ನಾ ಫೀಲ್ಡನ್ನು ಹೊಂದು ಹಿಡಿದು ಶೋಧಿಸಿ, ನಿನ್ನೀ ಗುಪ್ತಗವಿಯೊಳಗಿಂದ ನಿನ್ನನ್ನು ಹಿಡಿದೆಳೆದು ಸೆರೆಹಿಡಿದೊಯ್ಯುವರು. ಈ ಬಗೆಯಾಗಿ ಪಟ್ಟಣಿಗರ ಸರ್ವನಾಶ ಮಾಡಲಿಕ್ಕೆ ನಿನಗೆ ಇನ್ನು ಹೆಚ್ಚು ದಿನಗಳ ಅವಕಾಶವು ಸಿಗಲಿಕ್ಕಿಲ್ಲ. ನೀನು ಮೇರಿಗೇನಾದರೂ ಕೇಡು ಬಗೆದದ್ದೇ ಆದರೆ, ನಾನೇ ಸ್ವತಃ ಪೋಲೀಸ ಸೈನ್ಯದೊಡನೆ ಬಂದು, ನಿನ್ನೆದುರಿಗೆ ಯುದ್ಧಕ್ಕೆ ನಿಲ್ಲುತ್ತೇನೆ.

ಉಷಂಡ ಚಂಡನು ರಿಚರ್ಡನ ನುಡಿಯನ್ನು ಕೇಳಿ, ಕ್ರೋಧಭರದಿಂದ ಗರ್ಜಿಸಿ:—ಎಲೈ ಸೈತಾನಾ! ನಾನು ನಿನ್ನ ಮಾತಿಗೆ ಬೆದರುವೆನೆಂದು ತಿಳಿದಿರುವೆಯೇನು? ಪೋಲೀಸರನ್ನು ಕಟ್ಟಿಕೊಂಡು ಇಲ್ಲಿಗೆ ಬಂದು ನನ್ನನ್ನು ಸೆರೆ ಹಿಡಿಯುವದು ನಿನ್ನ ಯೋಗ್ಯತೆಯೇ? ನಾನು ಈಗಲೆ ನಿನ್ನನ್ನು ಸೆರೆ ಹಿಡಿಯುತ್ತೇನೆ.

ರಿಚರ್ಡ:—ನೀನು ನನ್ನನ್ನು ಸೆರೆ ಹಿಡಿಯುವೆಯಾ? ಇದೇ ನಿನ್ನ ವಚನ ಪರಿಪಾಲನೋಣವೇನು? ವಿಶ್ವಾಸ ಘಾತುಕಾ! ನೀಚಾ!!

ಉಷಂಡ: — ವೈರಿಯೊಡನೆ ವಚನ ಪಾಲಿಸುವದೆಂದರೇನು? ಏನಕೇನ ಪ್ರಕಾರಗಳಿಂದ ಹಗೆಯನ್ನು ಕೊಲ್ಲುವದೇ ಬುದ್ಧಿವಂತರ ಕೆಲಸವಲ್ಲವೆ? ಈಗ ನಿನ್ನನ್ನು ಬಂಧಮುಕ್ತ ಮಾಡಿದರೆ, ನೀನು ನನಗೆ ತಪ್ಪದೆ ಕೇಡು ಬಗೆಯುತ್ತಿರುವೆಯೆಂಬದನ್ನು ತಿಳಿದೂ ತಿಳಿದು, ನಾನು ನಿನ್ನನ್ನು ಬಂಧಮುಕ್ತ ಮಾಡಲಿಕ್ಕೆ ಅಂಥ ಮೂರ್ಖನೂ ಅಲ್ಲ; ಕೈಲಾಗದ ಹೇಡಿಯೂ ಆಗಿಲ್ಲ. ನಾನು ನಿನ್ನನ್ನು ಸಂಹರಿ

ಸುವೆನು. ಅಂದರೆ ಪರಲೋಕದಲ್ಲಿ ಮೇರಿಯು ನಿನಗೆ ಭೇಟಿಯಾಗುವಳು.

ರಿಚರ್ಡನ ಸಿಟ್ಟು ತಡೆಯಲಿಕ್ಕಾಗಲಿಲ್ಲ. ಆದರಿಂದ ಅವನು ಒಮ್ಮೆಲೆ ಟಣ್ಣನೆ ಜಿಗಿದು ಉಷಂಡ ಚಂಡನನ್ನು ಆಕ್ರಮಿಸಿದನು. ಆತನ ಮುಂಗುರುಳುಗಳನ್ನು ಹಿಡಿದು ನೆಲಕ್ಕೆ ಕೆಡಹಿದನು; ಹಾಗು ಆತನ ಎದೆಯ ಮೇಲೆ ಕುಳಿತು, ಗಟ್ಟಿಯಾಗಿ;—ನನ್ನನ್ನು ಕೊಲ್ಲುವದಾದರೆ ಕೊಲ್ಲು; ಆದರೆ ಅದಕ್ಕೂ ಮೊದಲು ನಿನ್ನನ್ನು ಇಲ್ಲಿಯೇ ಕೊಲ್ಲುತ್ತೇನೆ, ಎಂದು ಗರ್ಜಿಸಿದನು.

ಇಷ್ಟರಲ್ಲಿ ಉಷಂಡ ಚಂಡನ ಎರಡು-ಮೂರು ಜನ ಹಸ್ತಕರು ಧಾವಿಸಿ ಬಂದು, ರಿಚರ್ಡನನ್ನು ಹಿಡಿದೆಳೆದು ದೂರಕ್ಕೊಯ್ದರು; ಮತ್ತು ಅವನನ್ನು ಒದ್ದು ಒದ್ದು ನುಗ್ಗು ಮಾಡತೊಡಗಿದರು.

ಇತ್ತ ಉಷಂಡ ಚಂಡನು ಸಾವಕಾಶವಾಗಿ ಎದ್ದು ಕುಳಿತನು. ಆತನ ಸ್ವಾಭಾವಿಕವಾದ ಕೆಂಗಣ್ಣುಗಳು ಜ್ವಾಲಾಮುಖಿಯಂತೆ ಬೆಂಕಿಯನ್ನು ಕಾರಹತ್ತಿದವು. ಇದುವರೆಗೆ ನಡೆದ ಪ್ರಕಾರದಿಂದ ಅವನು ಸ್ವಲ್ಪವೂ ಚಂಚಲನಾಗದೆ, ಧೀರಗಂಭೀರ ಧ್ವನಿಯಿಂದ:-"ಈ ಆಂಗ್ಲ ನಾಯಿಯನ್ನು ಇಲ್ಲಿಂದ ತಕ್ಕೊಂಡು ಹೋಗಿರಿ. ಇಲ್ಲಿಂದ ಓಡಿ ಹೋಗದಂತೆ ಇವನನ್ನು ಬಂಧನದಲ್ಲಿಡಿರಿ. ಈತನನ್ನು ಹೆಚ್ಚಾಗಿ ಹಿಂಸಿಸಿ, ೨-೩ ದಿನಗಳಲ್ಲಿ ನಾನೇ ಕೊಲ್ಲುವೆನು."

ಹೀಗೆ ರಿಚರ್ಡನು ತಾನಾಗಿ ಹೋಗಿ ಆ ಸಿಂಹನ ಬಲೆಯಲ್ಲಿ ಸಿಕ್ಕುಬಿದ್ದನು.

---

೧೨ನೇ ತೆರೆ.

## ಸುರಂಗದ ನೆಲಮಾರ್ಗದಲ್ಲಿ.



ಯಾವ ದಿನದ ರಾತ್ರಿಯಲ್ಲಿ ರಿಚರ್ಡನು ಉಷಂಡ ಚಂಡನ ಬಲೆಯಲ್ಲಿ ಸಿಕ್ಕು ಸೆರೆಯಾಳಾದನೋ, ಅಂದೇ ರಾತ್ರಿಯ ಎಂಟು ಗಂಟೆಗೆ ಸರಿಯಾಗಿ ಬ್ಲೇಕನು ಬ್ಲ್ಯಾಕ್ಸಮನ್ ಸ್ಟ್ರೀಟಿನೊಳಗಿನ ಈ ಮೊದಲು ವರ್ಣಿಸಿದ ಚಾಊ-ಇಯಾಂಗನ ಮನೆಯ ಬಾಗಿಲಿಗೆ ಬಂದನು. ಆತನು ಆ ಇಕ್ಕಿದ ಬಾಗಿಲ ಮೇಲೆ ಮೆಲ್ಲನೆ ಬಡಿದ ಕೂಡಲೆ ಚಾಊ-ಇಯಾಂಗನು ಬಾಗಿಲವನ್ನು ತೆರೆದು, ಆತನನ್ನು ಮನೆಯೊಳಗೆ ಕರೆದೊಯ್ದನು. ಆ ಮನೆಯಲ್ಲಿ ಒಂದು ಸಣ್ಣ ದೀಪವು ಮಿಣಕುಮಿಣಕಾಗಿ ಉರಿಯುತ್ತಿತ್ತು. ಬಳಿಕ ಚಾಊ-ಇಯಾಂಗನು ಬ್ಲೇಕನನ್ನು ಕುರಿತು ಮೆಲ್ಲನೆ:—ಒಡೆಯರೇ, ನಾವಿಲ್ಲಿ ಸಂಪೂರ್ಣ ನಿರ್ಭಯರಾಗಿರುತ್ತೇವೆ. ನಿಮಗೆ

ಎಷ್ಟೋ ಸಂಗತಿಗಳನ್ನು ತಿಳಿಸತಕ್ಕದ್ದಿದೆ. ಉಷಂಡ ಚಂಡನ ಒಬ್ಬಿಬ್ಬ ಅನುಚರರು ಈ ಮನೆಯಲ್ಲಿ ವಾಸಿಸುತ್ತಿರುವುದೇನೋ ನಿಜ.; ಆದರೆ ಅವರು ಹಗಲೆಲ್ಲ ಬೇರೆ ಕೆಲಸಗಳಿಗಾಗಿ ಎಲ್ಲಿಯೋ ಹೋಗುತ್ತಿರುತ್ತಾರೆ; ಮಧ್ಯರಾತ್ರಿಯ ನಂತರ ಮಾತ್ರ ಅವರು ಇಲ್ಲಿಗೆ ಬರುತ್ತಾರೆ.

ಬ್ಲೇಕ:—ನಿನಗೆ ಮತ್ತೆ ಹೊಸ ಸಂಗತಿ ಯಾವುದಾದರೂ ತಿಳಿದಿದೆಯೇನು? ನಾಳೆ ರಾತ್ರಿಯಲ್ಲಿ ಚೀನೀ ರಾಜದ್ರೋಹಿಗಳ ಯಾವ ಸಭೆಯು ಕೂಡಲಿರುವದೋ, ಆ ಬಗ್ಗೆ ನಿನಗೆ ಮತ್ತೆ ಏನಾದರೂ ತಿಳಿದಿರುತ್ತದೇನು?

ಚಾಲೂ:—ಒಡೆಯರೇ, ತಿಳಿದಿದೆ. ನಿನ್ನೆ ಹೇಳಿದಂತೆ ಆ ಸಭೆಯು ನಾಳೆ ರಾತ್ರಿಯೇ ನೆರೆಯುವದು ಖಂಡಿತವು. ಹಾಂಗಕಾಂಗದಿಂದ ಬಂದಿರುವ ಆ ಮಹಾತ್ಮನೂ ಆ ಸಭೆಗೆ ಹಾಜರಿರುವನು. ಅದು ನಾಳೆ ರಾತ್ರಿ ಒಂಬತ್ತಕ್ಕೆ ತುಸ ಪೂರ್ವದಲ್ಲಿಯೇ ಕೂಡುವದು.

ಬ್ಲೇಕ:—ಒಳ್ಳೇದು, ನಾನು ಯಥಾ ಕಾಲಕ್ಕೆ ಪೋಲೀಸರ ದಳದೊಡನೆ ಇಲ್ಲಿಗೆ ಬರುತ್ತೇನೆ. ನೀನು ಮಾತ್ರ ನಮಗೆ ಆ ದಾರಿಯನ್ನು ತೋರು. ಚಾಲೂ-ಇಯಾಂಗಾ, ನಿನಗೆ ಆ ಉಷಂಡ ಚಂಡನ ಗುಪ್ತ ಗೃಹದ ಪತ್ತೆ ಹತ್ತಿತೇನು?

ಚಾಲೂ:—ಅಹುದು. ನಿನ್ನೆ ರಾತ್ರಿಯಲ್ಲಿ ನಾನು ಆತನ ಮನೆಯ ಪಹರೆಯವನನ್ನು ಅನುಸರಿಸಿ ಹೋಗಿ, ಗೌಪ್ಯದಿಂದ ಆ ಮನೆಯನ್ನು ನೋಡಿ ಬಂದಿರುತ್ತೇನೆ; ಆದರೆ ನಾನು ಅಲ್ಲಿಯ ಪರದೆಯ ಒಳಗೆ ಹೋಗದೆ, ಅಲ್ಲಿಂದಲೇ ಹಿಂದಿರುಗಿ ಬಂದೆನು. ಇಂದು ರಾತ್ರಿಯಲ್ಲಿ ಪಹರೆ ಮಾಡುವಾಗ ಇನ್ನೊಂದು ಸಲ ಅಲ್ಲಿಗೆ ಹೋಗುವೆನು. ಇಂದು ಆ ಪರದೆಯ ಒಳಗೆ ಹೋಗಿ, ಅಲ್ಲಿಯ ಎಲ್ಲ ಸಂಗತಿಯನ್ನು ತಿಳಿದೇ ಬರುತ್ತೇನೆ. ಅಂದರೆ ನಾಳೆ ರಾತ್ರಿಯಲ್ಲಿ ನಿಮ್ಮನ್ನು ಗುಪ್ತಸ್ಥಳಕ್ಕೆ ಒಯ್ದು ಮುಟ್ಟಿಸಲಿಕ್ಕೆ ಅನುಕೂಲವಾದೀತೆಂದು ನನ್ನ ನಂಬಿಕೆಯಿದೆ.

ಬ್ಲೇಕ:-ನಾಳೆ ಸಾಯಂಕಾಲದೊಳಗೆ ನೀನು ನನಗೆ ಭೇಟಿಯಾಗಬೇಕು.

ಚಾಲೂ:—ಹಾಗೆಯೇ ಆಗಲಿ. ಈಷ್ಟ ಇಂಡಿಯಾ ಡಕ್ಕ ರೋಡಿನೊಳಗಿನ ಕಲ್ಕತ್ತಾ ಕೋರ್ಟಿನ ಪಕ್ಕದ ಮನೆಯೊಳಗೆ ಜೂಜಿನ ಅಡ್ಡೆಯಿದೆಯೆಂಬದು ನಿಮಗೆ ಗೊತ್ತೇ ಇದೆ.

ಬ್ಲೇಕ:—ಅಹುದು. ನಾನು ಆ ಅಡ್ಡೆಗೊಮ್ಮೆ ಹೋಗಿದ್ದೆನು.

ಚಾಲೂ:—ಅದೇ ಮನೆಯಲ್ಲಿ ನಾಳೆ ಸಂಜೆಯ ಆರೂವರೆ ಗಂಟೆಗೆ ನೀವು ನನ್ನನ್ನು ಕಾಣಬಹುದು. ಅದುವರೆಗೆ ನಾನು ಯಾವ ಸುದ್ದಿಗಳನ್ನು ತಿಳಿಯುವೆನೋ, ಅವನ್ನೆಲ್ಲ ನಿಮಗೆ ಅಲ್ಲಿ ಹೇಳುವೆನು.

ಬ್ಲೇಕ:—ನಾನು ನಾಳೆ ೭|| ಗಂಟೆಗೆ ಅಲ್ಲಿಗೆ ತಪ್ಪದೆ ಬರುತ್ತೇನೆ. ಈಗ ನೀನು ನನ್ನನ್ನು ಆ ಹಾಳು ಮನೆಗೆ ಕರೆದುಕೊಂಡು ನಡೆ. ಯಾವ ಕೋಣೆ ಯಲ್ಲಿ ಆ ಮೂವರು ಚೀನಿಗರು ಅದೃಶ್ಯರಾದರೋ ಆ ಕೋಣೆಯನ್ನು ನೋಡ ಬೇಕಾಗಿದೆ.

ಚಾಲೂ:—ನಾನು ನಿಮ್ಮನ್ನು ಅಲ್ಲಿಗೇ ಕರೆದೊಯ್ಯುತ್ತೇನೆ; ಆದರೆ ಅಲ್ಲಿ ಆಕಸ್ಮಿಕವಾಗಿ ಯಾವದೊಂದು ಗಂಡಾಂತರ ಉಂಟಾಗುವದು ವಿಚಿತ್ರವಾಗಿಲ್ಲ.

ಬ್ಲೇಕ:—ಮತ್ತಾವ ಸಂಕಟವುತ್ಪನ್ನವಾಗುವದು? ವಿಪತ್ತಿನ ಆಶಂಕೆಯು ತೋರುತ್ತಿದ್ದರೂ ಆ ಕೋಣೆಯನ್ನು ಪರೀಕ್ಷಿಸದ ಹೊರತು ನಡೆಯುವಂತಿಲ್ಲ. ಅಲ್ಲಿ ಗುಪ್ತಮಾರ್ಗವಿರುವದೋ-ಇಲ್ಲವೋ ಎಂಬದನ್ನು ನೋಡಲೇಬೇಕಾಗಿದೆ. ನಡೆ, ಇನ್ನು ಹೀಗೆ ಸುಮ್ಮನೆ ಮಾತಿನಲ್ಲಿ ವೇಳೆಗಳೆದರೆ ಪ್ರಯೋಜನವಿಲ್ಲ.

ಚಾಲೂ-ಇಯಾಂಗನು ಜುಕ್ಕುಜುಲುಮೆಯಿಂದ ಬ್ಲೇಕನ ಮಾತಿಗೆ ಒಪ್ಪ ಬೇಕಾಯಿತು. ಕೂಡಲೆ ಆತನು ತನ್ನ ಮನೆಯೊಳಗಿನ ದೀಪವನ್ನು ನಂದಿಸಿ, ಬ್ಲೇಕನ ಕೈ ಹಿಡಿದುಕೊಂಡು ಕತ್ತಲಲ್ಲಿಯೇ ನಡೆದನು. ಕೆಲ ನಿಮಿಷಗಳ ಮೇಲೆ ಅವನು ಒಂದು ಬಾಗಿಲ ತೆರೆದು ಆ ಒಳಗೆ ಹೊಕ್ಕು, ಆ ಬಾಗಿಲವನ್ನು ಒಳಗಿನಿಂದ ಭದ್ರವಾಗಿ ಇಕ್ಕಿಕೊಂಡನು. ಕೂಡಲೆ ಬ್ಲೇಕನು ತನ್ನ ಬಕ್ಕಣ ದೊಳಗಿನ ವಿದ್ಯುತ್ ಬ್ಯಾಟರಿಯನ್ನು ತೆಗೆದು ಕೀಲವನ್ನೊತ್ತಿದನು. ಆ ಬೆಳಕಿ ನಲ್ಲಿ ಆ ಕೋಣೆಯೊಳಗೆ ಯಾವ ಕಿಟಕಿ-ಕಪಾಟುಗಳೂ ಕಾಣಿಸಲಿಲ್ಲ. ಆ ಕೋಣೆಯ ಮಧ್ಯದಲ್ಲಿ ನೆಲದ ಮೇಲೊಂದು ಚಿಕ್ಕ ಚಾಪೆಯು ಹಾಸಲ್ಪಟ್ಟಿತ್ತು. ಬ್ಲೇಕನು ಆ ಚಾಪೆಯನ್ನು ತೆಗೆಯ ಹೋಗಲು, ಅದು ಅದರ ಕೆಳಗಿನ ನೆಲ ದೊಡನೆ ಆಬದ್ಧವಾಗಿರುವಂತೆ ತೋರಿಬಂದಿತು. ಬಳಿಕ ಆತನು ಆ ಚಾಪೆಯ ಒಂದು ತುದಿಯನ್ನು ತನ್ನ ಎರಡೂ ಕೈಗಳಿಂದ ಹಿಡಿದು ಜಗ್ಗಹತ್ತಿದನು. ಕೂಡಲೆ ಫಡ್ದ-ಫಡ್ದ ಎಂಬ ಸಪ್ಪಳ ಮಾಡುತ್ತ ಅದು ಕಿತ್ತು ಹೋಯಿತು. ಬ್ಲೇಕನು ತನ್ನ ಬಕ್ಕಣದೊಳಗಿನ ಬ್ಯಾಟರಿಯನ್ನು ಮತ್ತೆ ಹಚ್ಚಿ ನೋಡಲು, ಅದರ ಕೆಳಗೊಂದು ಹಲಿಗೆಯಿರುವಂತೆ ಕಾಣಿಸಿತು. ಅದನ್ನು ಎತ್ತಿ ನೋಡಲು ಅದರ ಕೆಳಗೊಂದು ಗವಿಯಿದ್ದಿತು. ಅವನು ಆ ಗವಿಯೊಳಗೆ ಕೈ ನೀಡಿ ನೋಡಲು ಅದರೊಳಗೆ ಹಗೆಯೊಳಗಿನಂತೆ ಉಷ್ಣ ಮತ್ತು ದುರ್ಗಂಧ ವಾಯುವಿರದೆ, ತಂಪಾದ ಗಾಳಿಯು ಬರುತ್ತಿತ್ತು. ಚಾಲೂ-ಇಯಾಂಗನು ವಿಸ್ಫಾರಿತ ನೇತ್ರ ಗಳಿಂದ ಆ ಗವಿಯ ಕಡೆಗೆ ನೋಡುತ್ತ ನಿಂತುಕೊಂಡಿದ್ದನು. ಕೆಲ ಕ್ಷಣಗಳ ನಂತರ ಆತನು ವಿಸ್ಮಯಭರದಿಂದ:—"ಇದೊಳ್ಳೇ ಅದ್ಭುತ ವ್ಯಾಪಾರ ವಾಗಿರುತ್ತದೆ!"

ಬ್ಲೇಕ:—ಇದನ್ನು ಕಂಡು ನನಗಂತಹ ಆಶ್ಚರ್ಯವೆನಿಸಿಲ್ಲ. ಈ ಗವಿಯೊಳಗಿಂದಲೇ ನೆಲಮಾರ್ಗವಿರಬೇಕೆಂದು ನನ್ನ ನಂಬಿಕೆಯಿದೆ. ಏನಾದರೂ ವಿಪತ್ತು ಪ್ರಾಪ್ತವಾದರೆ ಉಪಂಡ ಚಂಡನು ತನ್ನ ಅನುಚರರೊಡನೆ ಈ ನೆಲಮಾರ್ಗದಿಂದಲೇ ಪಲಾಯನಸೂಕ್ತ ಪರಿಸುವನು.

ಚಾಉ: ಹಾಗಿರುವ ಸಂಭವವು ತೋರುತ್ತಿದೆ. ಈ ನೆಲಮಾರ್ಗವು ತೇಮ್ಸನದಿಯ ವರೆಗೂ ಹೋಗಿರಬಹುದಾಗಿದೆ. ಇದರ ಎರಡನೇ ತುದಿಗೆ ಇದೇ ಬಗೆಯ ಬೇರೆ ದ್ವಾರವಿರಲಿಕ್ಕೆ ಬೇಕು.

ಬ್ಲೇಕ:—ಈ ಗವಿಯಲ್ಲಿಳಿದು ಪರೀಕ್ಷಿಸಿದರೆ ಅದೆಲ್ಲವೂ ಚೆನ್ನಾಗಿ ಗೊತ್ತಾಗುವದು. ಇದರೊಳಗೆ ನಿಶ್ಚಿತವಾಗಿಯೂ ಮೆಟ್ಟಿಲುಗಳಿರಲಿಕ್ಕೆಬೇಕು. ನನ್ನೊಡನೆ ನೀನೂ ಇದರೊಳಗೆ ಇಳಿಯುತ್ತೀಯೇನು?

ಚಾಉ-ಇಯಾಂಗನು ಬ್ಲೇಕನ ಮಾತಿಗೆ ಒಪ್ಪಲು, ಬ್ಲೇಕನು ಏನನ್ನೋ ಯೋಚಿಸಿ:-ಬೇಡ; ನೀನು ನನ್ನೊಡನೆ ಬರಬೇಡ. ನಾನೊಬ್ಬನೇ ಇಳಿದು ಪರೀಕ್ಷಿಸಿ ಬರುವೆನು. ನೀನೂ ನನ್ನೊಡನೆ ಬಂದರೆ, ನಿನ್ನ ಕಾರ್ಯಕ್ಕೆ ಹೋಗಲಿಕ್ಕೆ ನಿನಗೆ ತಡವಾಗಬಹುದು. ನನ್ನ ಸಲುವಾಗಿ ನೀನು ಇಲ್ಲಿ ಕಾದುಕೊಂಡಿರುವ ಅವಶ್ಯಕತೆಯೂ ಇರುವದಿಲ್ಲ. ಯಾಕಂದರೆ, ನಾನು ಇದೇ ದಾರಿಯಿಂದ ಹಿಂತಿರುಗಿ ಬರುವದಿಲ್ಲ. ನಾನು ಈ ಸುರಂಗದ ಎರಡನೇ ಕಡೆಯ ಮಾರ್ಗದಿಂದಲೇ ಹೊರಟು ಹೋಗುವೆನು ನೀನು ನಾಳೆ ಸಾಯಂಕಾಲಕ್ಕೆ ಆರೂವರೆ ಗಂಟೆಗೆ ನನಗೆ ಭೇಟಿಯಾಗಲಿಕ್ಕೆ ಮಾತ್ರ ಮರೆಯಬೇಡ.

ಹೀಗೆಂದು ಹೇಳಿ ಬ್ಲೇಕನು ಆ ಕೂಡಲೆ ಆ ಗವಿಯಲ್ಲಿ ಇಳಿದುಬಿಟ್ಟನು. ಆತನ ಅಪ್ಪಣೆಯ ಮೇರೆಗೆ ಚಾಉ-ಇಯಾಂಗನು ಆ ಗವಿಯ ಬಾಗಿಲವನ್ನು ಮೊದಲಿನಂತೆ ಇಕ್ಕಿ, ಅದರ ಮೇಲೆ ಆ ಚಾಪೆಯನ್ನೂ ಸರಿಸಿ ಬಿಟ್ಟನು. ಬ್ಲೇಕನು ಆ ಗವಿಯೊಳಗಿನ ಕತ್ತಲೆಯಲ್ಲಿ ಅಲ್ಲಿಯ ನೆಲಮಾರ್ಗವನ್ನು ಹುಡುಕ ಹತ್ತಿದನು. ಚಾಉ ಇಯಾಂಗನು ಬಾಗಿಲವನ್ನಿಕ್ಕಿ ಹೊರಟು ಹೋದ ಬಳಿಕ ಬ್ಲೇಕನು ತನ್ನ ಬಳಿಯ ಬ್ಯಾಟರಿಯನ್ನು ಹೊತ್ತಿಸಿಕೊಂಡು ಒಳ್ಳೇ ಎಚ್ಚರಿಕೆಯಿಂದ ಮೆಲ್ಲಮೆಲ್ಲನೆ ಆ ನೆಲಮಾರ್ಗವನ್ನು ಹಿಡಿದು ಸಾಗಹತ್ತಿದನು. ಹೋಗುವಾಗ ಆತನಿಗೆ ಅನಿಸಿದ್ದೇನಂದರೆ, ತಾನು ತೇಮ್ಸನದಿಯ ಸಮಾಂತರದಲ್ಲಿಯೇ ನಡೆಯುತ್ತಿರುವೆನೆಂದು. ಸಾಧಾರಣವಾಗಿ ೫-೬ ನೂರು ಹೆಜ್ಜೆ ನಡೆಯುವಷ್ಟರಲ್ಲಿ ಆತನು ಎದುರಿಗಿನ ಮೆಟ್ಟಿಲುಗಳನ್ನು ಕಂಡನು. ಅವನು ಅವುಗಳನ್ನು ಏರಿ ಹೋಗಲು ಆ ಗವಿಯ ಮುಖಕ್ಕೆ ಬಂದನು.

ಆ ಎರಡನೇ ತುದಿಗೂ ಮೊದಲಿನಂತಹದೊಂದು ಗವಿಯು. ಅದರ

ಬಾಯಿಗೂ ಹಲಿಗೆ-ಚಾಪಿಗಳಿದ್ದವು. ಕೂಡಲೆ ಬ್ಲೇಕನು ತನ್ನ ಕೈಯೊಳಗಿನ ಬ್ಯಾಟರಿಯನ್ನು ನಂದಿಸಿ ಬಕ್ಕಣದೊಳಗಿರಿಸಿಕೊಂಡು, ನಂತರ ತನ್ನ ಎರಡೂ ಕೈಗಳಿಂದ ಆ ಹಲಿಗೆಯನ್ನು ಎತ್ತಿದನು. ಕೂಡಲೆ ಆ ಬಾಗಿಲವು ತೆರೆದು ಬಿಟ್ಟಿತು. ಆ ಮೇಲೆ ಅವನು ಆ ಗವಿಯೊಳಗಿಂದ ಮೇಲಕ್ಕೆ ಬಂದು, ಮತ್ತೆ ಬ್ಯಾಟರಿಯನ್ನು ಹೊತ್ತಿಸಿದನು. ಆ ದೀಪದ ಬೆಳಕಿನಲ್ಲಿ ತಾನೊಂದು ಚಿಕ್ಕ ಕೋಣೆಯಲ್ಲಿ ಇರುವಂತೆ ಅವನಿಗೆ ಗೊತ್ತಾಯಿತು. ಈ ಕೋಣೆಯಾದರೂ ಚಾಲೂ-ಇಯಾಂಗನ ಮನೆಯ ಬಳಿಯ ಹಾಳು ಮನೆಯೊಳಗಿನ ಕೋಣೆಯಂತೆ ಸೌಕರ್ಯವಿಹೀನವಾದದ್ದು. ಬ್ಲೇಕನಿಗೆ ಆ ಕೋಣೆಯೊಳಗೆ ಬೇರೆ ಯಾರದೋ ಕಾಲಸಪ್ಪಳವು ಕೇಳಿಸಲು, ಅವನು ಬೆಚ್ಚಿಬಿದ್ದನು; ಹಾಗು ಆ ಸಪ್ಪಳವನ್ನು ಮತ್ತಿಷ್ಟು ಕಿವಿಗೊಟ್ಟು ಕೇಳಹತ್ತಿದನು. ಬ್ಲೇಕನು ಒಂದೆರಡು ಹೆಜ್ಜೆ ಮುಂದೆ ಹೋಗುವಷ್ಟರಲ್ಲಿ, ಅಲ್ಲಿ ಅವನಿಗೊಬ್ಬ ಜವಾನೀ ಯುವಕನು ಕಾಣಿಸಿಕೊಂಡನು. ಆಗ ಅವನು ಮುಂದುಗಾಣದೆ ಸ್ತಂಭಿತನಾಗಿ ನಿಂತುಕೊಂಡು ಅನ್ನುತ್ತಾನೆ: "ಏನು ವಿಚಿತ್ರವಿದು?"

ಆ ಯುವಕನಾದರೂ ವಿಸ್ಮಯದಿಂದಲೂ, ಆನಂದದಿಂದಲೂ ಉಕ್ಕೇರಿದವನಾಗಿ:"ಇದೆಂಥ ಆಶ್ಚರ್ಯವು! ಒಡೆಯರೇ, ತಾವು ಇಲ್ಲಿಗೆ ಹೇಗೆ ಬಂದಿರಿ?"

ಬ್ಲೇಕ:—ತಮ್ಮಾ, ಸ್ಮಿತ್ಥಾ; ನೀನು ಇಲ್ಲಿಗೆ ಬಂದುದು ಹೇಗೆ?

ಸ್ಮಿತ್ಥ:—ನೀವು ಇಲ್ಲಿಗೆ ಬಂದದ್ದು ಹೇಗೆಂಬದನ್ನು ಮೊದಲು ಹೇಳಿರಿ.

ಬ್ಲೇಕನು ಸ್ಮಿತ್ಥನಿಗೆ ನಡೆದ ಸಂಗತಿಯನ್ನೆಲ್ಲ ಮೆಲ್ಲನೆ ವಿಸ್ತೃತವಾಗಿ ತಿಳಿಸಿದನು. ಬಳಿಕ ಸ್ಮಿತ್ಥನು: ನಾನು ಇಲ್ಲಿಗೆ ಹೇಗೆ ಬಂದದ್ದೆಂಬದನ್ನು ತಿಳಿಯುವ ಸಲುವಾಗಿ ನೀವು ಬಹು ಆತುರಗೊಂಡಿರಬಹುದಾಗಿದೆ ನಾನು ತೀರ ಸಹಜವಾಗಿಯೇ ಇಲ್ಲಿಗೆ ಬಂದಿರುತ್ತೇನೆ. ನೀವು ಮನೆಗೆ ಹಿಂದಿರುಗುವ ಮೊದಲೇ ನಾನೂ ಮನೆಗೆ ಹೋಗಬೇಕೆಂದು ಅಂದುಕೊಂಡು, ತುಸ ಅಡ್ಡಾಡಲಿಕ್ಕೆಂದು ಮನೆಯಿಂದ ಹೊರಬಿದ್ದೆನು. ನಾನು ಸಿಂಗಾಪುರ ಸ್ಟ್ರೀಟಿನೊಳಗಿನ ಒಂದು ಹೋಟಲನ್ನು ಹೊಕ್ಕು ತುಸ ಉಪಾಹಾರ ಮಾಡತೊಡಗಿದೆನು. ನನ್ನ ಪಕ್ಕದ ಮೇಜಿನ ಬಳಿಯಲ್ಲಿಬ್ಬರು ಚೀನಿಗರು ಕುಳಿತಿದ್ದರು. ಅವರ ಮಾತು ಕಥೆಗಳನ್ನು ಕೇಳಿಕೊಳ್ಳುತ್ತಿರಲಿಕ್ಕೆ ಅವರು ಈ ಚಾಯ್ನಾ ಫೀಲ್ಡಿನ ಸಿಂಹನ ಅನುಚರರೆಂಬದು ತಿಳಿದು ಬಂತು. ಬಳಿಕ ನಾನು ಅವರ ಮೇಲೆ ದೃಷ್ಟಿಯನ್ನಿರಿಸಿದೆನು. ಅವರು ಅಲ್ಲಿಂದೆದ್ದು ಹೋಗಲು, ನಾನೂ ಅವರನ್ನು ಹಿಂಬಾಲಿಸಿ ಹೋಗಿ ನೋಡಲು, ಅವರು ಈ ಮನೆಯಲ್ಲಿ ಹೊಕ್ಕದ್ದನ್ನು ಕಂಡೆನು. ಕೆಲ ಕ್ಷಣಗಳ ನಂತರ ಅವರಿಬ್ಬರೂ ಈ ಕೋಣೆಯಿಂದ ಹೊರ

ಬಿದ್ದು ಹೋಗಲು, ನಾನು ಮೆಲ್ಲಮೆಲ್ಲನೆ ಈ ಕೋಣೆಯನ್ನು ಪ್ರವೇಶಿಸಿದೆನು. ನಾನು ನನ್ನಲ್ಲಿಯ ದೀಪದ ಪೆಟ್ಟಿಗೆಯೊಳಗಿನ ಕಡ್ಡಿಯನ್ನು ಕೆರೆದು, ಈ ಕೋಣೆಯ ಅಂತರ್ಭಾಗವನ್ನು ಪರೀಕ್ಷಿಸುತ್ತಿರಲು, ಇಲ್ಲಿ ನೆಲದಲ್ಲಿ ಸಪ್ಪಳವಾಗುತ್ತಿರುವದನ್ನು ಕೇಳಿ ಬಹು ವಿಸ್ಮಿತನಾದೆನು. ನಾನು ಇಲ್ಲಿ ಎಲ್ಲಿಯಾದರೂ ಅಡಗಿಕೊಳ್ಳಬೇಕೆಂದು ಹವಣಿಸುತ್ತಿರುವಷ್ಟರಲ್ಲಿ ನೀವು ನಿಮ್ಮ ಬ್ಯಾಟರಿಯನ್ನು ಹೊತ್ತಿಸಿಕೊಂಡು ಈ ಕೋಣೆಯಲ್ಲಿ ಒಮ್ಮೆಲೆ ಒಡಮೂಡಿ ಬಿಟ್ಟಿರಿ! ನಿಮ್ಮನ್ನು ಗುರ್ತಿಸಿದ ಮೇಲಂತೂ ನನ್ನ ವಿಸ್ಮಯಕ್ಕೆ ಮೇರೆಯೇ ಉಳಿಯಲಿಲ್ಲವು.

ಬ್ಲೇಕ:—ಸ್ಮಿತ್ಥಾ, ನೀನು ಬಹು ದುಸ್ಸಾಹಸದ ಕಾರ್ಯವನ್ನು ಮಾಡಿರುತ್ತೀ. ಸುದೈವದಿಂದ ವಿಪತ್ತಿಗೊಳಪಟ್ಟಿಲ್ಲೆಂಬದೇ ವಿಹಿತವು. ಅದು ಏನೇ ಇರಲಿ; ಇದು ಯಾವ ಸ್ಥಳವು?

ಸ್ಮಿತ್ಥ:—"ಇದು ಸಿಂಗಾಪೂರ ಸ್ಟ್ರೀಟಿನೊಳಗಿನ ಸ್ಯಾಂಡವೇರ ಲೇನಿನ ೧೫ನೇ ನಂಬರಿನ ಮನೆಯು."

ಬ್ಲೇಕ:-ಇದು ಸ್ಯಾಂಡವೇರ ಲೇನೇ! ಬ್ಲ್ಯಾಕಮನ್ಸ ಸ್ಟ್ರೀಟು ಇಲ್ಲಿಂದ ೫೦ ನೂರು ಮೊಳಗಳಿಗಿಂತ ಹೆಚ್ಚು ದೂರದಲ್ಲಿಲ್ಲ. ನಾವು ಇಂದು ಯಾವ ಗುಪ್ತರಹಸ್ಯವನ್ನು ಕಂಡು ಹಿಡಿದಿರುವೆವೋ, ಇದು ಬಹು ಅಮೂಲ್ಯವಾಗಿರುವದು. ನಾಳೆ ರಾತ್ರಿಯಲ್ಲಿ ಆ ವಿದ್ರೋಹಿಗಳು ಈ ದಾರಿಯಿಂದ ಓಡಿ ಹೋಗಹತ್ತಿದರೆ ಅವರು ನಿಶ್ಚಯವಾಗಿಯೂ ನಮ್ಮ ಕೈಸೇರುವರು. ನಾವು ಇನ್ನು ಮೇಲೆ ಇಲ್ಲಿ ಹೆಚ್ಚು ವೇಳೆ ನಿಲ್ಲುವದು ಉಚಿತವಾಗಲಾರದು. ನಡೆ, ಬೇಗನೆ ಮನೆಗೆ ಹೋಗೋಣ. ನಾವು ಈ ಕೋಣೆಯ ಬಾಗಿಲವನ್ನು ತೆರೆಯುವ ಗೊಡವೆಗೆ ಹೋಗದೆ, ಇದರೊಳಗಿನ ಕಿಟಕಿಯಿಂದಲೇ ಹೊರಹೊರಡೋಣ. ಮನೆಗೆ ಹೋದ ಬಳಿಕ ನಮ್ಮ ಮುಂದಿನ ಬೇತನ್ನೆಲ್ಲ ನಿನಗೆ ತಿಳಿಸುತ್ತೇನೆ.



೧೩ನೇ ತೆರೆ.

## ಗುಪ್ತ ಬೇತು.



ಮಂಗಳವಾರ ಬೆಳಿಗ್ಗೆ ಬ್ಲೇಕನು ತನ್ನ ಮನೆಯಲ್ಲೇ ಇದ್ದು ಕೊಂಡು, ಆ ಚೀನೀ ವಿದ್ರೋಹಿಗಳನ್ನು ಹೇಗೆ ಸೆರೆ ಹಿಡಿಯು ಬೇಕೆಂಬ ಬಗ್ಗೆ ಸ್ಮಿತ್ಥನೊಡನೆ ಆಲೋಚಿಸಹತ್ತಿದನು. ಅಂದೇ ಮಧ್ಯಾಹ್ನದಲ್ಲಿ ತಾನೊಬ್ಬನೇ ಪಪ್ಪಲಿನ ಜೇಲಿಗೆ ಹೊರಟು ಹೋದನು. ಅಲ್ಲಿಗೆ ಹೋದಾಗ ಇನ್ಸಪೆಕ್ಟರ ಡೆಭೆನಟನು ಅತ್ಯಂತ ವ್ಯಾಕುಲನಾಗಿ ತನ್ನ ಕೋಣೆಯೊಳಗೆ ಅಡ್ಡಾಡುತ್ತಿದ್ದನು. ಬ್ಲೇಕನು ಆತನ ಉತ್ಕಂಠಿತ ಮುಖಮುದ್ರೆಯನ್ನು ಕಂಡು ಬಹು ವಿಸ್ಮಯ ಗೊಂಡನು.

ಆಗ ಇನ್ಸಪೆಕ್ಟರನು ಬ್ಲೇಕನನ್ನು ಕಂಡು: "ನೀವು ಈಗ ಇಲ್ಲಿಗೆ ಬಂದದ್ದು ವಿಹಿತವಾಯಿತು. ನಮ್ಮ ರಿಚರ್ಡನ ಸಲುವಾಗಿ ನಾನು ಬಹು ಪೇಚಾಡುತ್ತಿರು ವೆನು. ಅವನು ಈಗ ಬಹು ಮೂರ್ಖತನದ ಕೆಲಸ ಮಾಡಿರುತ್ತಾನೆ. ಅದ ರಿಂದ ನಾವು ಅವನನ್ನು ಇನ್ನು ಜೀವಂತವಾಗಿ ಕಂಡೇವೆಂಬ ಭರವಸೆಯೇ ಉಳಿ ದಿರುವದಿಲ್ಲ! '

ಬ್ಲೇಕ:—"ಅದೇಕೆ? ಆಗಿರುವದಾದರೂ ಏನು? ಮತ್ತಾವ ಸಂಕಟವು ಪ್ರಾಪ್ತವಾಯಿತು?

ಇನ್ಸಪೆಕ್ಟರನು ತನ್ನ ಡೆಸ್ಕಿನ ಮೇಲಿಡಲ್ಪಟ್ಟಿದ್ದ ಚೂರುಗಳನ್ನೆಲ್ಲ ಒಟ್ಟು ಗೂಡಿಸಿ ಹಚ್ಚಲ್ಪಟ್ಟ ಒಂದು ಪತ್ರದ ಕಡೆಗೆ ಬೊಟ್ಟು ತೋರಿಸಿ:— ಈ ಚೀಟಿ ಯನ್ನೋದಿಕೊಂಡರೆ ನಿಮಗೆ ಎಲ್ಲವೂ ಸ್ಪಷ್ಟವಾಗುವದು. ನನ್ನ ಮನಸ್ಸಿನ ಸ್ಥಿತಿಯು ಎಷ್ಟು ಶೋಚನೀಯವಾಗಿದೆಯೆಂಬದನ್ನು ನಾನು ನಿಮಗೆ ತಿಳಿಸಲಸ ಮರ್ಥನಾಗಿದ್ದೇನೆ.

ಬ್ಲೇಕನು ಚೂರು ಚೂರುಗಳನ್ನು ಹಚ್ಚಿದ್ದ ಆ ಪತ್ರವನ್ನು ಓದಿಕೊಂಡು, ಒಂದು ನಿಟ್ಟುಸಿರುಗರೆದನು. ತದನಂತರ ಮೆಲ್ಲಮೆಲ್ಲನೆ: ಇದಂತೂ ಆ ಚಾಯ್ನಾ ಫೀಲ್ಡಿನ ಸಿಂಹನಾದ ಉಪಂಡ ಚಂಡನ ಪತ್ರವು. ಇದು ನಿಮಗೆಲ್ಲಿ ದೊರಕಿತು?

"ಇದು ಈ ಕಸದ ಬುಟ್ಟಿಯಲ್ಲಿ ಚೂರು ಚೂರಾಗಿ ಬಿದ್ದಿತ್ತು. ನಾನು ಆ ಚೂರುಗಳನ್ನೆಲ್ಲ ಹೊಂದಿಸಿ ಕೆಳಗೆ ಅಂಟು ಕಾಗದವನ್ನು ಹಚ್ಚಿರುತ್ತೇನೆ."

"ಇದು ಎಲ್ಲಿಂದ ಬಂತು?''

"ನಿನ್ನೆ ಸಂಜೆಯ ನಂತರ ಒಬ್ಬ ಹುಡುಗನು ಈ ಪತ್ರವನ್ನು ತಂದು ನಮ್ಮ ಜೇಲಿನ ಬಾಗಿಲ ಕಾಯುವ ಸಾರ್ಜಂಟನ ಕೈಗಿತ್ತಿದ್ದನಂತೆ. ಆ ಸಾರ್ಜಂಟನು ಇದನ್ನು ರಿಚರ್ಡನ ಕೈಗಿತ್ತಿದ್ದನಂತೆ."

ಬ್ಲೇಕ:—"ನಿಮ್ಮ ಮಗನು ಮಹಾ ಮೂರ್ಖನಿರುವನು. ಅವನು ಈ ಪತ್ರವನ್ನು ನಂಬಿ......."

ಇನ್ಸಪೆಕ್ಟರನು ಆತನನ್ನು ಹೆಚ್ಚು ಮಾತಾಡಗೊಡದೆ, "ಅಹುದು; ಆ ಮೂರ್ಖನು ಈ ಪತ್ರವನ್ನು ನಂಬಿ, ಇದರಲ್ಲಿ ಬರೆದಂತೆ ಯಾರಿಗೂ ಏನೂ ಹೇಳದೆ ಹೊರಟು ಹೋಗಿ ಬಿಟ್ಟಿದ್ದಾನೆ ಆ ಉಪಂಡ ಚಂಡನ ಅನುಚರರು ಈತನ ಸಲುವಾಗಿ ಗಾಡಿ ತಂದಿರಬಹುದಾಗಿದೆ; ಮತ್ತು ಈತನು ಅದೇ ಗಾಡಿಯಲ್ಲಿ ಕುಳಿತು ಅಲ್ಲಿಗೆ ಹೋಗಿರಬಹುದಾಗಿದೆ. ನಾನು ಆ ಕಾಲಕ್ಕೆ ಮನೆಯಲ್ಲಿರಲಿಲ್ಲ; ಅತ್ತ ಕಡೆಯ ಒಂದು ಕಳವಿನ ಪತ್ತೆಗಾಗಿ ಹೊರಟು ಹೋಗಿದ್ದೆನು. ಬಹಳ ರಾತ್ರಿಗೆ ನಾನು ಮನೆಗೆ ಹಿಂದಿರುಗಿ ಬಂದು ನೋಡುತ್ತೇನೆ; ಮನೆಯಲ್ಲಿ ರಿಚರ್ಡನಿರಲಿಲ್ಲ. ಒಂದು ಪತ್ರವನ್ನು ಓದಿಕೊಂಡೊಡನೆ ಅವನು ಎಲ್ಲಿಗೋ ಹೊರಟು ಹೋದನೆಂಬದನ್ನು ಸಾರ್ಜಂಟನು ಹೇಳಿದನು. ಆಗಿನಿಂದ ಅವನು ಮರಳಿ ಬಂದೇ ಇಲ್ಲ ಮೇರೀ ವೈಭಾನಳ ಸಂಬಂಧದ ಯಾವುದೊಂದು ಸಂಗತಿಯು ತಿಳಿದದ್ದರಿಂದ, ಅವನು ಅವಳ ಸಂಧಾನಕ್ಕೆ ಹೋಗಿರಬಹುದೆಂದು ನಾನು ತಿಳಿದಿದ್ದೆನು ಇಂದು ಬೆಳಿಗ್ಗೆಯೂ ನಾನು ಬೇರೊಂದು ಕಡೆಯ ಗುಹ್ನೆಯ ಪತ್ತೆಗೆ ಹೋಗಿದ್ದೆನು ಸರಾಸರಿ ಒಂದು ಗಂಟೆಯ ಪೂರ್ವದಲ್ಲಿ ಇಲ್ಲಿಗೆ ಬಂದು ನೋಡುತ್ತೇನೆ, ರಿಚರ್ಡನು ಅದುವರೆಗೂ ಹಿಂದಿರುಗಿ ಬಂದಿರಲಿಲ್ಲ; ಇಷ್ಟೇ ಅಲ್ಲ, ಆತನ ಸಂಬಂಧದ ಯಾವ ವರ್ತಮಾನವೂ ತಿಳಿಯಲಿಲ್ಲ. ರಿಚರ್ಡನು ಇಲ್ಲಿಂದ ಹೊರಟು ಹೋಗುವಾಗ ಯಾವದೊಂದು ಪತ್ರ-ಚೀಟಿಯನ್ನು ಬರೆದಿಟ್ಟು ಹೋಗಿರುವನೇನೆಂದು ಶೋಧಿಸತೊಡಗಿದೆನು; ಆದರೆ ಅಂಥದೇನೂ ಎಲ್ಲಿಯೂ ಸಿಗಲಿಲ್ಲ. ಕಡೆಗೆ ಈ ಕಸದ ಬುಟ್ಟಿಯಲ್ಲಿ ಈ ಹರಕು ಚೂರುಗಳ ರಾಶಿಯು ಕಾಣಿಸಿತು. ಕೂಡಲೆ ನಾನು ಅವುಗಳಲ್ಲಿಯ ಒಂದೆರಡು ಚೂರುಗಳನನ್ನು ಹೊರಗೆ ತೆಗೆದು ಪರೀಕ್ಷಿಸಹತ್ತಿದೆನು. ಅವುಗಳಲ್ಲಿಯ ಕೆಲವು ಚೂರುಗಳು ಅರ್ಧಮರ್ಧ ಸುಟ್ಟು ಕೂಡ ಹೋಗಿವೆ. ಅದರೊಳಗಿನ ಹಲ-ಕೆಲವು ಶಬ್ದಗಳು ರಿಚರ್ಡನಿಗೆ ಸಂಬಂಧಿಸಿ ಬರೆದವುಗಳೆಂದು ನನಗೆ ಅನಿಸಲು, ನಾನು ಈ ಚೂರುಗಳನ್ನೆಲ್ಲ ಒಟ್ಟುಗೂಡಿಸಿ ಅವುಗಳನ್ನು ಹೀಗೆ ಹೊಂದಿಸಿ ಅಂಟಿಸಿದ್ದೆನು; ಹಾಗು ಈ ಪತ್ರವನ್ನು ಓದಿ ಯೋಚಿಸತೊಡಗಿದ್ದೆನು, ಅಷ್ಟರಲ್ಲಿ ನೀವೂ ಇಲ್ಲಿಗೆ ಅನಾಯಾಸವಾಗಿ ಬಂದೇ ಬಿಟ್ಟಿರುತ್ತೀರಿ. ಆ ದುರ್ವೃತ್ತರು

ನವಿಷ್ಮೆ ಮೂರ್ಖ ಹುಡುಗನನ್ನು ತಮ್ಮ ಜಾಲದಲ್ಲಿ ತೊಡಗಿಸಲಿಕ್ಕೆ ಎಂಥ ಬಲೆಯೊಡ್ಡಿರುತ್ತಾರೆಂಬದನ್ನು ನೋಡಿದಿರಾ? ಇದುವರೆಗೆ ರಿಚರ್ಡನು ಜೀವಂತನಾಗಿರುವನೋ-ಇಲ್ಲವೋ ತಿಳಿಯದಾಗಿದೆ.

ಬ್ಲೇಕ:—"ಚಾಯ್ನಾ ಫೀಲ್ಡಿನ ಸಿಂಹನು ಯಾವ ಉದ್ದೇಶದಿಂದ ರಿಚರ್ಡನಿಗೆ ಈ ಪತ್ರ ಬರೆದಿರುವನೋ ತಿಳಿಯದಾಗಿದೆ. ಆತನ ಉದ್ದೇಶವು ಬಹು ರಹಸ್ಯವಾಗಿರಬೇಕೆಂದು ಅನುಮಾನವಾಗುತ್ತಿದೆ. ನೀವು ಪೋಲೀಸರ ಸಹಾಯದಿಂದ ಆ ದುರ್ವೃತ್ತರನ್ನು ಸೆರೆ ಹಿಡಿಯುವ ಸಲುವಾಗಿ ಯಾವ ಉಪಾಯವನ್ನೂ ಮಾಡಲಿಲ್ಲ. ನನ್ನ ಸಲಹೆಯ ಮೇರೆಗೆ ಸಂಪೂರ್ಣ ನಿರ್ಲಿಪ್ತವಾಗಿರುತ್ತೀರಿ. ರಿಚರ್ಡನು ಇದುವರೆಗೆ ಅವರಿಗಾವ ಕೇಡನ್ನೂ ಬಗೆದಿರುವದಿಲ್ಲ. ಈ ಪರಿಸ್ಥಿತಿಯಲ್ಲಿ ಆ ಸಿಂಹನು ರಿಚರ್ಡನನ್ನು ಹೀಗೆ ಕಪಟದಿಂದ ಬರಮಾಡಿಕೊಂಡು ಏಕೆ ಸೆರೆಯಲ್ಲಿರಿಸಿರುವನೋ ಎಂಬದು ಅತರ್ಕ್ಯವಾಗಿದೆ. ಉಷಂಡ ಚಂಡನು ಎಂಥ ನೀಚನೇ ಏಕಾಗಿರಲೊಲ್ಲನೇಕೆ, ಆತನು ರಿಚರ್ಡನನ್ನು ಮೋಸದಿಂದ ಕರೆಸಿಕೊಂಡು ಕೊಲ್ಲಬಹುದೆಂದು ನನಗಂತೂ ಎನಿಸುವದಿಲ್ಲ; ಮತ್ತು ಅವನಿಗೆ ಅಷ್ಟು ಧೈರ್ಯವೂ ಆಗಲಿಕ್ಕಿಲ್ಲೆಂದು ತಿಳಿಯುತ್ತಿದೆ. ರಿಚರ್ಡನು ಆತನ ಬಲೆಯಲ್ಲಿ ಸಿಕ್ಕು ಸೆರೆಯಾದದ್ದೇ ನಿಜವಿದ್ದರೆ, ಇಂದು ರಾತ್ರಿಯೇ ನಾನು ಅವನನ್ನು ಬಂಧಮುಕ್ತಗೊಳಿಸುವೆನು. ಚಾಲೂ-ಇಯಾಂಗನು ಉಷಂಡ ಚಂಡನ ಹಲವು ಗುಪ್ತ ಸಂಗತಿಗಳನ್ನು ನನಗೆ ತಿಳಿಸಿರುತ್ತಾನೆ. ಅವುಗಳನ್ನೆಲ್ಲ ನಿಮಗೆ ತಿಳಿಸುವದಕ್ಕೆಂದೇ ನಾನು ಈಗ ಇಲ್ಲಿಗೆ ಬಂದಿರುತ್ತೇನೆ. ಚಾಲೂ-ಇಯಾಂಗನು ನನಗೆ ಇನ್ನೊಂದು ಗುಪ್ತ ಸಂಗತಿಯನ್ನು ತಿಳಿದು ಹೇಳತಕ್ಕವನಿರುತ್ತಾನೆ. ಅವನು ಅದನ್ನು ತಿಳಿದು ಬಂದದ್ದೇ ಆದರೆ, ಉಷಂಡ ಚಂಡನನ್ನು ಇಂದೇ ಆತನ ಅನುಚರರೊಡನೆ ಕೈ ಸೆರೆ ಹಿಡಿಯಬಹುದಾಗಿದೆ."

ಆ ಮೇಲೆ ಬ್ಲೇಕನು ಈ ಮಧ್ಯದಲ್ಲಿ ನಡೆದ ಸಂಗತಿಗಳನ್ನೆಲ್ಲ ಡೆಭೆನಟನಿಗೆ ತಿಳಿಸಿ ಹೇಳಿದನು. ಆ ವಿಚಿತ್ರ ಸಂಗತಿಗಳನ್ನೆಲ್ಲ ಕೇಳಿಕೊಂಡ ಇನ್ಸಪೆಕ್ಟರ ಡಭೆನಟನು ವಿಸ್ಮಯ ಭರದಿಂದ ಮುಂದುಗಾಣದವನಾಗಿ ಸುಮ್ಮನೆ ಕುಳಿತು ಬಿಟ್ಟನು.

ಬ್ಲೇಕನು ಮತ್ತೆ ಕೆಲಕ್ಷಣಗಳ ವರೆಗೆ ಸುಮ್ಮನೆ ಕುಳಿತು ಬಳಿಕ:—'ಇಂದು ನನಗೆ ನಿಮ್ಮ ಸಹಾಯದ ಅವಶ್ಯಕತೆಯಿರುತ್ತದೆ. ಸಂಜೆಯಾಗಿ ಮಬ್ಬುಗಪ್ಪಿಯುತ್ತಲೆ ನಿಮ್ಮ ಒಬ್ಬ ಸಾರ್ಜಂಟನು ತನ್ನ ೨೫-೩೦ ಜನ ಸಾದಾ ಡ್ರೆಸ್ಸಿನ ಸಶಸ್ತ್ರ ಪೋಲೀಸರೊಡನೆ ಸ್ಕ್ಯಾಂಡವೇರ ಲೇನಿನೊಳಗಿನ ೧೪ನೇ ನಂಬರಿನ ಮನೆಯ ಹಿಮ್ಮಗ್ಗಲಿಗೆ ಹೋಗಿ ಅಡಗಿ ಕುಳಿತಿರಬೇಕು. ಆ ಮನೆಯ ಬಳಿಯಿಂದ ರಾತ್ರಿಕಾಲದಲ್ಲಿ ಯಾರಾದರೂ ಹೊರಬಿದ್ದರೆ, ಇವರು ಅವರನ್ನೆಲ್ಲ

ನೆರೆ ಹಿಡಿಯಬೇಕು. ಆ ವಿದ್ರೋಹಿಗಳಲ್ಲಿಯ ಹಲಕೆಲವರು ಆದರ ಪಕ್ಕದ ಮನೆಯೊಳಗಿನ ನೆಲಮಾರ್ಗದಿಂದ ಓಡಿಹೋಗಲಿಕ್ಕೆ ಪ್ರವೃತ್ತರಾಗಲಿರುವರು. ಅವರನ್ನು ಓಡಿಹೋಗಗೊಡದಂತೆ ನೋಡಿಕೊಳ್ಳುವದೇ ಅಲ್ಲಿಯ ಆ ಎಲ್ಲ ಪೋಲಿಸರ ಪ್ರಾಮುಖ್ಯ ಕೆಲಸವಾಗಿರುವದು.''

ಡೆಭೆನಟ:—ಸಾಧ್ಯವಿದ್ದ ಮಟ್ಟಿಗೆ ನಾನು ನಿಮಗೆ ಎಲ್ಲ ಸಹಾಯವನ್ನು ಮಾಡುವೆನು. ನಮ್ಮ ಕೇವಲ ವಿಶ್ವಾಸುಕ ಸಾರ್ಜಂಟ ಲೋಬೋನ ಮೇಲೆ ಈ ಭಾರವನ್ನು ವಹಿಸಿದರೆ ಎಲ್ಲ ಕೆಲಸವೂ ಯಥಾ ಯೋಗ್ಯವಾಗಿ ಜರಗುವದು; ಆದರೆ ಆ ಚಾಯ್ನಾ ಫೀಲ್ಡನ್ನು ಝಡತಿ ಮಾಡುವದು ಯಾವಾಗೆಂಬದನ್ನು ತಿಳಿಯಲಿಕ್ಕೆ ಅಧೀರನಾಗಿದ್ದೇನೆ.''

ಬ್ಲೇಕ:—ಅದನ್ನೂ ಆ ಮೇಲೆ ಮಾಡೋಣವಂತೆ. ಕಲಕತ್ತಾ ಕೋರ್ಟಿನ ಬಳಿಗೆ ಇಂದು ಸಂಜೆಯ ಆರೂವರೆ ಗಂಟೆಗೆ ಚಾಊ-ಇಯಾಂಗನು ನನಗೆ ಭೇಟಿಯಾಗುವನು. ಅವನು ನನ್ನನ್ನು ಉಷಂಡ ಚಂಡನ ಗುಪ್ತ ಕೋಣೆಗೆ ಕರೆದೊಯ್ದಾನೆಂದು ನನ್ನ ನಂಬಿಗೆಯಿದೆ. ಅದು ಶಕ್ಯವಾದದ್ದೇ ಆದರೆ, ನಾನು ಯೋಗ್ಯ ಕಾಲಕ್ಕೆ ನಿಮಗೆ ತಿಳಿಸುವೆನು. ಸ್ಮಿತ್ಥನೂ ನನ್ನ ಸಂಗಡ ಒರುವನು. ತಕ್ಕ ಸಮಯದಲ್ಲಿ ನಾನು ಆತನನ್ನು ನಿಮ್ಮ ಬಳಿಗೆ ಕಳಿಸಿಕೊಡುತ್ತೇನೆ. ನೀವು ಆತನ ಮುಖಾಂತರವಾಗಿ ನನ್ನ ಪತ್ರವನ್ನು ಪಡೆದೊಡನೆಯೇ ನಾನು ಅಲ್ಲಿಯ ಝಡತಿಯ ಕೆಲಸನ್ನು ಯಾವಾಗ ಪ್ರಾರಂಭಿಸಬೇಕೆನ್ನುತ್ತೇನೆಂಬದು ನಿಮಗೆ ತಿಳಿಸಲಾಗುವದು. ಬಹುಶಃ ಇಂದು ರಾತ್ರಿ ಒಂಬತ್ತರ ನಂತರ ಅಲ್ಲಿಯ ಝಡತಿಯ ಕೆಲಸಕ್ಕೆ ಪ್ರಾರಂಭಿಸಬೇಕಾದೀತು. ಆ ಕಾಲಕ್ಕೆ ನನ್ನ ಸಹಾಯಕ್ಕಾಗಿ ಸಾದಾ ಪೋಷಾಕಿನ ಮತ್ತೊಂದು ಪೋಲೀಸರ ದಂಡಿನ ಅವಶ್ಯಕತೆಯುಂಟಾಗುವದು. ಆ ದಂಡಿನಲ್ಲಿ ತೀರ ಕಡಿಮೆಯೆಂದರೆ ಎರಡಿಪ್ಪತ್ತು ಜನರಾದರೂ ಇರಬೇಕಾದೀತು—''

ಡೆಭೆನಟ:—''ಸಾರ್ಜಂಟ ಪೋಲೋನ ಕೈಕೆಳಗೆ ಆ ದಂಡನ್ನು ಕಳಿಸಿಕೊಡುವೆನು. ನಮಗೆ ನಿಮ್ಮ ಭೇಟಿಯು ಎಲ್ಲಿ ಆದೀತು?''

ಬ್ಲೇಕ:—ಸ್ಮಿತ್ಥನ ಸಂಗಡ ನಿಮಗೆ ನಾನು ಯಾವ ಪತ್ರವನ್ನು ಕಳಿಸಲಿರುವೆನೋ ಅದರಲ್ಲಿ ಅದನ್ನೆಲ್ಲ ಬರೆಯುತ್ತೇನೆ. ನೀವು ಆ ಎಲ್ಲ ಪೋಲೀಸರನ್ನು ಒಮ್ಮೆಲೆ ಕಳಿಸಿ ಕೊಡದೆ, ಸರತಿಗೆ ನಾಲ್ಕು-ನಾಲ್ಕು ಜನರಂತೆ ಕೆಲ ನಿಮಿಷಗಳ ಅಂತರದಿಂದ ಕಳಿಸುತ್ತಿರಬೇಕು. ಪ್ರತಿಯೊಂದು ಗುಂಪಿನಲ್ಲಿ ನಾಲ್ಕಕ್ಕಿಂತ ಹೆಚ್ಚು ಜನರಿರಕೂಡದು. ಅವರ ಗುಂಪುಗಳು ಲಾಯಿಮ್ ಹೌಸ ರೋಡಿನೊಳಗಿಂದಲೇ ಹಾಯ್ದು ಒರಲಿ. ಯಾಕಂದರೆ, ರಾತ್ರಿಯ ಕಾಲದಲ್ಲಿ ಆ ಓಣಿ

ಯೊಳಗೆ ಅಷ್ಟೊಂದು ರಹದಾರಿಯಿರುವದಿಲ್ಲ; ಮತ್ತು ಆ ರೋಡಿನಲ್ಲಿ ದೀಪದ ಬೆಳಕಿನ ವ್ಯವಸ್ಥೆಯು ಸರಿಯಾಗಿರದ್ದರಿಂದ ಕತ್ತಲೆಯೂ ಮುಸುಕಿರುತ್ತದೆ.''

ಡೆಭೆನಟ:-''ನೀವು ಅಲ್ಲಿಯೇ ನಿಂತುಕೊಂಡು ನಮ್ಮಗಳ ದಾರೀ ಕಾಯುತ್ತಿರುತ್ತೀರೇನು?'

ಬ್ಲೇಕ:—''ಅಹುದು. ನಾವಿಬ್ಬರೂ ಅಲ್ಲಿಯೇ ನಿಂತಿರುತ್ತೇವೆ. ನೀವು ನಿಮ್ಮ ಕಾನ್ಸಟೇಬಲ್ಲರಿಗೆ ಹೇಳತಕ್ಕದ್ದನ್ನೆಲ್ಲ ಚೆನ್ನಾಗಿ ಹೇಳಿ, ಪಪ್ಪಲಿನೊಳಗಿನ ಹಾಯ್‌ಸ್ಟ್ರೀಟನಿಂದ ನನ್ನ ಮನೆಗೆ ಬಂದುಬಿಡಿರಿ. ಅಲ್ಲಿಂದ ನಾವಿಬ್ಬರೂ ಒಬ್ಬಾಗಿ ರಾತ್ರಿಯ ಎಂಟು ಗಂಟೆಯ ನಂತರ ಲಾಯಿವ್‌ಹೌಸ ರೋಡಿನಿಂದ ಹೋಗೋಣ. ಅಲ್ಲಿ ಪೋಲೀಸರ ತಿನೇ ಗುಂಪನ್ನು ಕಾಣೋಣ. ಅವರು ನಮಗೆ ಭೇಟಿಯಾದ ಕೂಡಲೆ ನಾವೆಲ್ಲರೂ ನಿಃಶಬ್ದದಿಂದ ಪಕ್ಕದ ಬ್ಲ್ಯಾಕ್ಸಮನ್ ಸ್ಟ್ರೀಟನೊಳಗೆ ಪ್ರವೇಶಿಸೋಣ. ಅಲ್ಲಿಂದ ಚಾಊ-ಇಯಾಂಗನು ನಮ್ಮನ್ನು ಆ ವಿದ್ರೋಹಿಗಳ ಸರದಾರನ ಗುಪ್ತಸಭೆಗೆ ಕರೆದೊಯ್ಯುವನು. ಅಲ್ಲಿ ನಮಗೆ ಆ ವಿದ್ರೋಹಿಗಳಲ್ಲಿಯ ಪ್ರಮುಖರೆಲ್ಲರೂ ದೃಷ್ಟಿಗೋಚರವಾಗುವರು. ಅವರುಗಳ ಯಾವ ಮುಖ್ಯಸ್ಥನು ಹಾಂಗಕಾಂಗದಿಂದ ಬಂದಿರುವನೋ, ಅವನನ್ನೂ ಅಲ್ಲಿ ಕಾಣಾಯುದು. ನಾನು ನಿಮಗೆ ಏನೇನು ಹೇಳಿರುವೆನೋ, ಅದೆಲ್ಲವೂ ನಿಮ್ಮ ಸ್ಮರಣದಲ್ಲುಳಿಯುವದೋ?''

ಡೆಭೆನಟ:—''ಎಲ್ಲವೂ ಸ್ಮರಣದಲ್ಲುಳಿಯುವದು. ನಾನು ಇಂದು ಸಂಜೆಗೆ ಸಾದಾ ಪೋಲೀಸರ ಒಂದು ತಂಡವನ್ನು ಸ್ಯಾಂಡವೇರ ಲೇನಿನೊಳಗಿನ ೧೮ನೇ ನಂಬರ ಮನೆಯ ಹಿಮ್ಮಗ್ಗಲಿಗೆ ಪಹರೆಮಾಡಹಚ್ಚುವದು. ಆ ಮೇಲೆ ನನಗೆ ನಿಮ್ಮ ಪತ್ರವು ಸಿಕ್ಕ ಕೂಡಲ ಅಂಥ ಬೇರೆ ದಂಡನ್ನು ನಾಲ್ಕು ನಾಲ್ಕು ಜನರ ಗುಂಪಿನಂತ ಲಾಯಿವ್‌ಹೌಸ ರೋಡಿನ ತುದಿಗೆ ಹೋಗಿ ನಿಲ್ಲುವಂತೆ ಹೇಳುವದು. ಅವರನ್ನು ಅಲ್ಲಿಗೆ ಯಾವಾಗ ಕಳಿಸಬೇಕೆಂಬದು ತಮ್ಮ ಪತ್ರದಿಂದಲೇ ತಿಳಿಯತಕ್ಕದ್ದು. ಆ ಮೇಲೆ ನಾನು ಬ್ಲ್ಯಾಟ್ರಂಕ ರೋಡಿನೊಳಗಿಂದ ಹಾಯ್ದು ನಿಮ್ಮ-ಬಳಿಗೆ ಬರುವದು. ಇದೆಲ್ಲ ನನ್ನ ಸ್ಮರಣದಲ್ಲುಳಿಯುವದು; ಆದರೆ ಬ್ಲೇಕರೇ, ನಮ್ಮ ರಿಚರ್ಡನ ಬಿಡುಗಡೆಯ ವ್ಯವಸ್ಥೆಯೇನು? ಅದು ಗೊತ್ತಾಗಲೇ ಇಲ್ಲವಲ್ಲ! ಅವನು ನನಗೆ ಜೀವಂತ ಭೇಟಿಯಾಗುವನೋ-ಇಲ್ಲವೊ ಅದಾರು ಹೇಳಬೇಕು?

ಬ್ಲೇಕ:—''ಅದನ್ನೆಲ್ಲ ಅನುಮಾನಿಸುವದು ಅಶಕ್ಯವಾಗಿರುತ್ತದೆ; ಆದರೂ ನನ್ನ ದೃಢನಂಬಿಗೆಯೇನಂದರೆ, ಅವನು ಶತ್ರುಗಳಿಂದ ಸೆರೆಹಿಡಿಯಲ್ಪಟ್ಟಿದ್ದರೂ, ಅವನಿಗೆ ಯಾವ ಕೇಡೂ ಆಗಿರುವದಿಲ್ಲೆಂದು. ನಾವು ಅವನನ್ನು ಆ ಶತ್ರುಗಳ

ವಸಡಿಯಲ್ಲಿ ಜೀವಂತವಾಗಿಯೇ ಕಾಣಬಹುದೆಂಬ ವಿಷಯಕ್ಕೆ ಸಂದೇಹವಿಲ್ಲ. ಇನ್ನು ನಾನು ತೆರಳುತ್ತೇನೆ. ಸಂಜೆಯ ಆರೂವರೆಗೆ ನೀವು ನನ್ನ ಕಡೆಯ ಸುದ್ದಿಯನ್ನು ತಿಳಿಯುವಿರಿ."

ಹೀಗೆಂದು ಹೇಳಿ, ಬ್ಲೇಕನು ಆ ಪಪ್ಪಲಿನ ಜೇಲಿನಿಂದ ಹೊರಬಿದ್ದು, ತನ್ನ ಮನೆಯ ದಾರೀ ಹಿಡಿದನು.

---

೧೪ನೇ ತೆರೆ.

## ಯಮುನ ದವಡೆಯಲ್ಲಿ.




ದೇ ಸಾಯಂಕಾಲದ ಆರೂವರೆ ಗಂಟೆಗೆ ಬ್ಲೇಕನು ಸ್ಮಿತ್ಥನೊಡನೆ ಛದ್ಮವೇಷವನ್ನು ಧರಿಸಿ, ಈಸ್ಟ ಇಂಡಿಯಾ ಡಕ್ಕ ರೋಡಿನೊಳಗಿನ ಕಲಕತ್ತಾ ಕೋರ್ಟಿಗೆ ಹೋದನು; ಅಲ್ಲಿಯ ಒತ್ತಟ್ಟಿಗಿನ ಪಾವಟಿಗೆಗಳನ್ನೇರಿ ಮೇಲಟ್ಟವನ್ನು ಹತ್ತಿ ಒಳ್ಳೇ ಭರದಿಂದ ನಡೆದಿದ್ದ ಜೂಜಿನಾಟದ ಕೋಣೆಯನ್ನು ಪ್ರವೇಶಿಸಿದನು. ಆ ಕೋಣೆಯು ತೀರ ಚಿಕ್ಕದಾಗಿರಲಿಲ್ಲ. ಅಲ್ಲಿ ಹಲವು ಜನರು ಜೂಜನ್ನಾಡಲಿಕ್ಕೆ ಬಂದಿದ್ದರು. ಅವರೆಲ್ಲರ ಕೂಗಾಟ-ಚೀರಾಟಗಳಿಂದ ಆ ಕೋಣೆಯು ಸಿನಾದಗೊಂಡಿದ್ದಂತೆ, ಸಿಗರೇಟಿನ ಹೊಗೆಯು ನಾಲ್ಕೂ ಕಡೆಯಿಂದ ಹೊರಟು ಕೋಣೆಯನ್ನೆಲ್ಲ ವ್ಯಾಪಿಸಿ ಬಿಟ್ಟಿತ್ತು. ಅಲ್ಲಿಯ ಒಂದು ಬಹು ದೊಡ್ಡದಾದ ದುಂಡು ಮೇಜಿನ ಸುತ್ತಲೂ ನಾನಾ ದೇಶದ ನಾವಿಕ ಜನರು ಕುಳಿತು ಜೂಜಿನಾಟದಲ್ಲಿ ನಿಮಗ್ನರಾಗಿದ್ದರು. ಆ ಜನರೊಳಗೆ ಚೀನ ದೇಶದ ದಂಡಾಳುಗಳ ಸಂಖ್ಯೆಯೇ ಅಧಿಕವಾಗಿತ್ತು.

ಆ ಆಟದ ಮೇಜಿನಿಂದ ತುಸ ದೂರದಲ್ಲಿ ಗೋಡೆಗೆ ಹೊಂದಿ ಒಂದು ಸಾದಾ ಮೇಜಿದ್ದಿತು. ಆಟದಲ್ಲಿ ಸೇರದಿದ್ದ ಜನರು ಅದರ ಒಳಿಯಲ್ಲಿ ಕುಳಿತು, ಮಾದಕ ದ್ರವ್ಯಗಳನ್ನು ಸೇವಿಸುತ್ತ ಹರಟೆಹೊಡೆಯುತ್ತಿದ್ದರು. ಆ ಜೂಜಿನ ಅಡ್ಡೆಯಲ್ಲೊಂದು ಉಪಾಹಾರ ಗೃಹವೂ ಇದ್ದಿತು. ಬ್ಲೇಕ-ಸ್ಮಿತ್ಥರು ಆ ಕೋಣೆಯನ್ನು ಪ್ರವೇಶಿಸಿದವರೇ ಆ ಹರಟೆಹೊಡೆಯುವವರ ಮೇಜಿನ ಬಳಿಗೆ ಹೋಗಿ ಕುಳಿತರು ಬ್ಲೇಕನು ಒಂದು ಉದ್ದನ್ನ ಚಿರೂಟವನ್ನು ಹೊತ್ತಿಸಿ ಸೇದುತ್ತ, ಚಾಲೂ-ಇಯಾಂಗನ ಮಾರ್ಗನಿರೀಕ್ಷಿಸತೊಡಗಿದನು. ಸ್ಮಿತ್ಥನು ಒಂದು ಲೋಟಾ ಕಾಫಿಯನ್ನು ಕೊಂಡು ಕುಡಿಯಹತ್ತಿದನು.

ಚಾಲೂ-ಇಯಾಂಗನು ಗೊತ್ತುಪಡಿಸಿದ ವೇಳೆಗೆ ಸರಿಯಾಗಿ ಅಲ್ಲಿಗೆ

ಬಂದು ತಲುಪದ್ದರಿಂದ ಬ್ಲೀಕನು ಉತ್ಕಂಠಿತನಾದನು. ಉತ್ಸುಕ ದೃಷ್ಟಿಯಿಂದ ಆತನು ಆಗಾಗ್ಗೆ ಬಾಗಿಲ ಕಡೆಗೆ ನೋಡಹತ್ತಿದನು. ಆಗ ಅಲ್ಲಿಗೆ ಎಷ್ಟೋ ಹೊಸ ಹೊಸ ಜನರು ಬಂದರು; ಆದರೆ ಅವರಲ್ಲಿ ಚಾಲೂ-ಇಯಾಂಗನಿರಲಿಲ್ಲ. ಹಾಗೆಯೇ ರಾತ್ರಿಯ ಏಳೂವರೆ ಗಂಟೆಯು ಮೀರಿಹೋಯಿತು. ಆದರೂ ಚಾಲೂ-ಇಯಾಂಗನು ಬಾರದಿದ್ದುದನ್ನು ಕಂಡು ಬ್ಲೀಕನು ಹತಾಶನಾಗಿಬಿಟ್ಟನು. ಆಗಲವನು ಸ್ಮಿತ್ಥನನ್ನು ಕುರಿತು:—"ಆರೂವರೆಗೆ ತಪ್ಪದೆ ಇಲ್ಲಿಗೆ ಬರಬೇಕೆಂದು ನಾನು ಆತನಿಗೆ ಹೇಳಿರಲಿಕ್ಕೆ, ಅವನು ಅದನ್ನು ಮರೆತಿರಬಹುದೆಂಬದು ಅಸಂಭವವು. ಅವನು ಯಾವದೊಂದು ಅಪರಿಹಾರವಾದ ಕಾರಣದಿಂದ ಬಂದಿರಲಿಕ್ಕಿಲ್ಲೆಂದು ನನಗನಿಸುತ್ತದೆ. ಪಾಪ! ಆ ಬಡವನು ಆಕಸ್ಮಿಕವಾಗಿ ಯಾವದೊಂದು ವಿಪತ್ತಿಗೀಡಾದನೋ ಏನೋ ತಿಳಿಯದಾಗಿದೆ. ನಾನು ಆತನಿಗೆ ಯಾವ ಕೆಲಸವನ್ನು ಒಪ್ಪಿಸಿರುವೆನೋ, ಅದರಲ್ಲಿ ಸಂಕಟದ ಅಂಜಿಕೆಯು ಹೆಚ್ಚಾಗಿರುತ್ತದೆ. ಅವನು ಒಂದು ವೇಳೆ ಶತ್ರುಗಳಿಂದ ಹಿಡಿಯಲ್ಪಟ್ಟರೆ, ಅದರಿಂದ ಎಲ್ಲವೂ ನಾಶವಾಗುವದು. ಅವನು ಬಂಧಿಸಲ್ಪಟ್ಟರೆ, ನನ್ನ ಬೇತುಗಳೆಲ್ಲವೂ ಮಣ್ಣುಗೂಡಿ ಹೋಗುವವು. ಉಪಂಡ ಚಂಡನ ಆ ಗುಪ್ತ ಸಭಾಸ್ಥಾನದ ಪತ್ತೆಹತ್ತದಿದ್ದರೆ, ಅಷ್ಟು ಜನ ಪೋಲೀಸರ ನೆರವಿನಿಂದ ಯಾವ ಕೆಲಸವೂ ಆಗುವಂತಿಲ್ಲ. ಪೋಲೀಸರು ತಮ್ಮನ್ನು ಕೈಸೆರೆ ಹಿಡಿಯಬಂದಿರುವರೆಂಬದು ಅವರಿಗೆ ತಿಳಿದರೆ ಸಾಕು; ಅವರೆಲ್ಲರೂ ನಿರ್ವಿಘ್ನವಾಗಿ ಪಲಾಯನ ಹೇಳಿಸುವರು. ಆ ಸುರಂಗದ ದಾರಿಯಿಂದ ಓಡಿಹೋಗಲೆತ್ನಿಸಿದರೆ, ಅವರಲ್ಲಿಯ ಹಲಕೆಲವರು ಕೈಸೆರೆ ಸಿಕ್ಕರೆ ಸಿಗಬಹುದೇನೋ ನಿಜವು; ಆದರೆ ಆ ವಿದ್ರೋಹಿಗಳ ಮುಖ್ಯಸ್ಥನು ಮಾತ್ರ............"

ಬ್ಲೀಕನ ಮಾತು ಮುಗಿಯುವಷ್ಟರಲ್ಲಿಯೇ ಸ್ಮಿತ್ಥನು ಉತ್ಸಾಹಪೂರ್ವಕವಾಗಿ:—"ಅತ್ತ ನೋಡಿರಿ, ಚಾಲೂ-ಇಯಾಂಗನು ಬಂದೇಬಿಟ್ಟನು."

ಚಾಲೂ-ಇಯಾಂಗನು ಆ ಕೋಣೆಯನ್ನು ಹೊಕ್ಕವನೇ ಮೊದಲು ಆ ಜೂಜಿನಾಟದ ದುಂಡುಮೇಜಿನ ಬಳಿಗೆ ಹೋದನು; ಹಾಗು ಅಲ್ಲಿ ಒಂದೆರಡು ನಿಮಿಷಗಳವರೆಗೆ ಆ ಆಟವನ್ನು ನೋಡಿ, ತನ್ನ ಕಡೆಗೆ ಬೇರೆ ಯಾರ ಲಕ್ಷ್ಯವೂ ಇರುವದಿಲ್ಲೆಂಬದನ್ನು ನಿರೀಕ್ಷಿಸಿ, ನಂತರ ಆತನು ಸ್ಮಿತ್ಥನ ಬಳಿಗೆ ಹೋಗಿ ಅಲ್ಲಿಯದೊಂದು ಕುರ್ಚಿಯನ್ನು ಜಗ್ಗಿಕೊಂಡು ಅದರ ಮೇಲೆ ಕುಳಿತನು.

ಕೂಡಲೆ ಬ್ಲೀಕನು ಮೆಲ್ಲನೆ:—"ಇಷ್ಟು ತಡವಾದ ಕಾರಣವೇನು? ಒಂದು ತಾಸು ತಡವಾಗಲಿಲ್ಲವೆ? ನಾನಂತೂ ನಿನ್ನ ಬಗ್ಗೆ ನಿರಾಶೆಗೊಂಡಿದ್ದೆನು. ಇದಕ್ಕೆ ಕಾರಣವೇನೆಂಬದನ್ನು ತಿಳಿಸು ನೋಡುವಾ?"

"ನಾನು ಆ ಕಮಲಾಲಯದ ಎದುರಿನಿಂದ ಬರುತ್ತಿರಲು, ಲೀ ಕೋಯಾಂಗನು ನನ್ನನ್ನು ಕರೆದು ಎಷ್ಟೋ ಹೊತ್ತು ಹರಟೆ ಹೊಡೆದನು. ಬಳಿಕ ಅವನ ಮಗಳಾದ ಮಲ್ಲಿಗೆಯು ಹೂವೂ ನನ್ನೊಡನೆ ಹರಟೆ ಕೊಚ್ಚಿದಳು. ಅವರ ಬಳಿಯಿಂದ ಒಮ್ಮೆಲೆ ಎದ್ದು ಬಂದರೆ, ಅವರೆಲ್ಲಿ ಸಂಶಯಗೊಳ್ಳುವರೋ ಎಂದು ನಾನು ಅವರೀವರ ಬಳಿಯಲ್ಲಿ ಕೆಲ ಕೆಲವು ವೇಳೆ ಕುಳಿತರೂ ಇಷ್ಟು ತಡವಾಯಿತು."

"ನಿನ್ನೀ ವಿಲಂಬದಿಂದ ವಿಶೇಷ ಹಾನಿಯಾಗಿಲ್ಲ. ಅದಿರಲಿ. ನಿನಗೆ ಗೊತ್ತಾದ ಹೊಸ ಸುದ್ದಿಯೇನೆಂಬದನ್ನು ಬೇಗನೆ ಹೇಳು. ನೀನು ಏನನ್ನು ತಿಳಕೊಂಡು ಬರುತ್ತೇನೆಂದು ಹೇಳಿದ್ದೆಯೋ ಅದನ್ನು ಕಂಡುಕೊಂಡೆಯೇನು? '

"ಒಡೆಯರೇ, ಇಂದು ಸಂಧಿಯನ್ನು ಸಾಧಿಸಿ, ನಾನು ಆ ಸಿಂಹನ ಗುಪ್ತವಾದ ಗಹ್ವರವನ್ನು ನೋಡಿಕೊಂಡೇ ಬಂದಿರುತ್ತೇನೆ. ಒಂದು ಕತ್ತಲೆ ಮುಸುಕಿದ ಸಂದಿಯ ಓಣಿಯೊಳಗಿಂದ ಕೆಲ ದಾರಿ ಸಾಗಿ ಹೋಗಿ, ಒಂದು ಬಾಗಿಲದ ಮರೆಗೆ ಅವಿತುಕೊಂಡು ನಿಂತೆನು. ಅಲ್ಲಿಯ ಆ ಕೋಣೆಯೊಳಗೆ ಆಗ ಹಲವು ಮಂದಿಯಿದ್ದರು................"

ಬ್ಲೇಕನು ಆತನನ್ನು ಮುಂದೆ ಮಾತನಾಡಗೊಡದೆ:—"ಅದೆಲ್ಲ ವಿವರಣವು ನನಗೆ ತಿಳಿಯದಿದ್ದರೂ ಚಿಂತೆಯಿಲ್ಲ. ಅದನ್ನೆಲ್ಲ ಕೇಳಿಕೊಳ್ಳಲಿಕ್ಕೆ ಸಮಯವೇ ಇಲ್ಲ. ಆದ್ದರಿಂದ ಈಗ ಮುಖ್ಯ ಸಂಗತಿಯನ್ನಷ್ಟೇ ತಿಳಿಸು. ನೀನು ನನ್ನನ್ನು ಆ ಸಿಂಹನ ಗವಿಗೆ ಒಯ್ಯಬಲ್ಲೆಯಾ? ಇಂದೇ-ಈ ರಾತ್ರಿಯೇ ನಾನು ಅಲ್ಲಿಗೆ ಹೋಗಬೇಕಾಗಿದೆ."

"ಓಹೊ! ನಾನು ನಿಮ್ಮನ್ನು ಅಲ್ಲಿಗೆ ಸಹಜವಾಗಿ ಒಯ್ಯುವೆನು. ನಡುವಿನ ಕೆಲ ಕೆಲವು ಬಾಗಿಲುಗಳಲ್ಲಿ ಪಹರೆಯವರಿರುತ್ತಾರೆ; ಆದರೆ ಅವರನ್ನು ಆಕಸ್ಮಿಕವಾಗಿ ಮುತ್ತಿ, ಆಹತಗೊಳಿಸಿ, ಮುಂದಿನ ದಾರಿ ಸಾಗುವದು ಕಠಿಣವಾಗಲಿಕ್ಕಿಲ್ಲ. ಅವರು ಕೂಗಾಡುವ ಮೊದಲೇ ಅವರನ್ನು ಕೆಡವಿಬಿಟ್ಟರೆ ಯಾವ ಆತಂಕವೂ ಉಂಟಾಗಲಾರದು."

"ಹಾಗೆಯೇ ಆಗಲಿ. ಆ ಗುಪ್ತಸಭೆಯ ವರ್ತಮಾನವೇನು? ಅದರ ವೇಳೆಯು ಬದಲಿಸಿಲ್ಲವಷ್ಟೇ?"

'ಒಡೆಯರೇ, ಇಲ್ಲ. ಇಂದು ರಾತ್ರಿ ಒಂಬತ್ತಕ್ಕೆ ತುಸ ಮೊದಲೆ ಆ ಸಭೆಯು ಕೂಡಲಿರುವದು."

"ಒಳ್ಳೇದು. ಇನ್ನು ಮತ್ತಾವ ವಾರ್ತೆಯನ್ನೂ ಕೇಳಿಕೊಳ್ಳುವ ಅವಶ್ಯಕತೆಯಿಲ್ಲ. ಇಂದು ಒಂಬತ್ತಕ್ಕೆ ಸರಿಯಾಗಿ ನಾನು ಒಂದು ತಂಡ ಪೋಲೀಸ

ಕೊಡನೆ ಬ್ಲ್ಯಾಕ್ಸಮನ್ ಸ್ಟ್ರೀಟಿನೊಳಗಿನ ನಿನ್ನ ಮನೆಗೆ ಬರುವೆನು. ನೀನು ಆಗ ನಿನ್ನ ಮನೆಯ ಬಾಗಿಲಲ್ಲಿ ನಿಂತು ನಮ್ಮಗಳನ್ನು ಎದುರುನೋಡುತ್ತಲಿರು; ಮತ್ತು ಅಲ್ಲಿಂದಲೇ ನೀನು ನಮಗೆ ದಾರಿದೋರುತ್ತ ಕರಕೊಂಡು ಹೋಗ ಬೇಕಾಗುವದು. ಇಂದು ನನಗೆ ನಿನ್ನ ಸಹಾಯವು ದೊರೆಯದಿದ್ದರೆ ನನ್ನ ಸಂಕಲ್ಪವೇ ವ್ಯರ್ಥವಾಗುವದು. ಇನ್ನು ನಾವು ಹೊರಡುವೆವು. ನಾವು ಹೊರಟು ಹೋದ ಕೆಲಕ್ಷಣಗಳ ನಂತರ ನೀನೂ ಇಲ್ಲಿಂದ ಹೊರಡು ನಾವು ಇನ್ನೂ ಹಲವು ಕೆಲಸ ಮಾಡಬೇಕಾಗಿದೆ; ಆದರೆ ಸಮಯವು ಮಾತ್ರ ಅತ್ಯಲ್ಪ ವಾಗಿದೆ. ಒಳ್ಳೇದು, ನಾವು ಹೊರಡುವೆವು."

ಎಂದು ಹೇಳಿದವನೇ ಬ್ಲೇಕನು ಸ್ಮಿತ್ಥನೊಡನೆ ಆ ಕಲಕತ್ತಾ ಕೋರ್ಟಿನ ಮೇಲಟ್ಟದಿಂದ ಹೊರಬಿದ್ದನು.

ದಾರಿಗೆ ಬಂದ ಮೇಲೆ ಬ್ಲೇಕನು ತನ್ನ ಜೇಬಿನಿಂದ ಟಿಪ್ಪಣಿ ವಹಿಯನ್ನು ಹೊರಗೆ ತೆಗೆದು, ಅದರದೊಂದು ಪಾನಿನ ಮೇಲೆ ಸೀಸಕಡ್ಡಿಯಿಂದ ಏನೇನೋ ಬರೆದನು; ಹಾಗು ಆ ಪಾನನ್ನು ಹರಿದು ಸ್ಮಿತ್ಥನ ಕೈಗಿತ್ತು:—"ಸ್ಮಿತ್ಥಾ, ಈ ಚೀಟಿಯನ್ನು ತಕ್ಕೊಂಡು ನೀನು ಈಗಲೆ ಪಪ್ಪಲಿನ ಜೇಲಿಗೆ ಹೋಗು ಇದನ್ನು ಇನಸ್ಪೆಕ್ಟರ ಡೆಭೆನಟನ ಕೈಗಿತ್ತು, ಅಲ್ಲಿಯೇ ಕಾದಿರು; ಮತ್ತು ಅವನು ನಿನ್ನ ವಶಕ್ಕೆ ಕೊಡಬಹುದಾದ ಪೋಲೀಸರ ದಂಡಿನೊಡನೆ ಲಾಯಿಮ್ ಹೌಸ ರೋಡಿ ನೊಳಗಿಂದ ಹಾಯ್ದು ಆಚೇ ಕಡೆಯ ಅಂಧಕಾರಮಯವಾದ ಕೂಟಿಗೆ ಬಾ. ಈ ಚೀಟಿ ತಲುಪುತ್ತಲೆ ಇನ್ಸಪೆಕ್ಟರನು ನನ್ನೆಡೆಗೆ ಬಂದು ಬಿಡುವನು. ಆ ಮೇಲೆ ನಾನೂ ನೀವೂ ಒತ್ತಟ್ಟಿಗೆ ಸೇರೋಣವಂತೆ."

ಸ್ಮಿತ್ಥನು ಪಪ್ಪಲಿನ ಕಡೆಗೆ ಹೊರಟು ಹೋಗಲು, ಬ್ಲೇಕನು ಮೆಲ್ಲ ಮೆಲ್ಲನೆ ತನ್ನ ಬಿಡಾರದ ದಾರಿ ಹಿಡಿದು ಸಾಗಿದನು. ಇವರಿಬ್ಬರೂ ಆ ಜೂಜಿನಡ್ಡೆ ಯಿಂದ ಹೊರಟು ಹೋಗಲು, ಚಾಊ-ಇಯಾಂಗನು ಮತ್ತೆ ಆ ದುಂಡು ಮೇಜಿನ ಬಳಿಗೆ ಹೋಗಿ, ತಾನೂ ಜೂಜಿನಾಟದಲ್ಲಿ ಸೇರಿಕೊಂಡನು.

ಬ್ಲೇಕನು ಪಪ್ಪಲಿನ ಹಾಯ್‌ಸ್ಟ್ರೀಟಿನೊಳಗಿನ ತನ್ನ ಬಿಡಾರಕ್ಕೆ ತಲುಪಿ ದನು. ಮುಂದೆ ಕೆಲಕ್ಷಣಗಳಲ್ಲಿಯೇ ಇನ್ಸಪೆಕ್ಟರ ಡೆಭೆನಟನೂ ಅಲ್ಲಿಗೆ ಬಂದನು. ಆಗ ಬ್ಲೇಕನು:—"ನೀವು ಇಷ್ಟು ತೀವ್ರವಾಗಿಯೇ ಬಂದೀರೆಂದು ನಾನು ತಿಳಿದಿರಲಿಲ್ಲ."

"ನಾನು ನಿಮ್ಮ ಪತ್ರದ ದಾರಿಯನ್ನು ವಿಶೇಷವಾಗಿ ನೋಡದೆ ಹೊರಟೇ ಬಂದೆನು. ತಮ್ಮ ಪತ್ರವು ಇದಕ್ಕೂ ಮೊದಲೇ ತಲುಪಬೇಕಾಗಿತ್ತು."

"ಛಾಊ-ಇಯಾಂಗನ ಭೇಟಿಯಾಗಲಿಕ್ಕೇ ವಿಲಂಬವಾಯಿತು; ಆದರೂ

ಅದರಿಂದ ಯಾವ ಕೇಡೂ ಆಗಿರುವದಿಲ್ಲ. ನಾನು ಯಾವ ಸಂಗತಿಯನ್ನು ತಿಳಿಯುವ ಸಲುವಾಗಿ ಆತುರಗೊಂಡಿದ್ದೆನೋ ಅದನ್ನು ತಿಳಿದಿರುತ್ತೇನೆ. ಅವನು ನಮ್ಮಗಳಿಗೆ ದಾರಿ ತೋರಿ, ಅಲ್ಲಿಗೆ ಕರೆದೊಯ್ಯುತ್ತಾನೆ. ಬ್ಲ್ಯಾಕ್ಸಮನ್ ಸ್ಟ್ರೀಟಿನೊಳಗಿನ ಆತನ ಮನೆಯಲ್ಲಿ ಅವನು ನಮಗೆ ಭೇಟಿಯಾಗುತ್ತಾನೆ ''

''ಆದರೆ ನೀವು ಈ ಸಂಗತಿಯನ್ನು ನನಗೆ ನಮ್ಮ ಮನೆಗೆ ತಿಳಿಸಿದ್ದರೆ ಹಿತವಾಗುತ್ತಿತ್ತು.''

''ನಾನು ಸ್ಮಿತ್ಥನನ್ನು ಆಗಲೆ ನಿಮ್ಮ ಕಡೆಗೆ ಕಳಿಸಿರುತ್ತೇನೆ. ನೀವು ನಿಮ್ಮ ಮನೆಯನ್ನು ಬಿಟ್ಟು ಎಷ್ಟು ಹೊತ್ತಾಯಿತು?''

''ಸಾಧಾರಣವಾಗಿ ಹದಿನೈದು ನಿಮಿಷಗಳಾಗಿರಬಹುದು; ಆದರೆ ದಾರಿಯಲ್ಲೊತ್ತಟ್ಟಿಗೆ ನನಗೆ ತುಸ ತಡವಾಯಿತು.''

''ನೀವು ನಿಮ್ಮ ಮನೆಯಿಂದ ಹೊರಟ ಕೆಲ ನಿಮಿಷಗಳಲ್ಲಿಯೇ ಸ್ಮಿತ್ಥನು ಅಲ್ಲಿಗೆ ಹೋಗಿರಬೇಕು. ನಾನು ಆತನೊಡನೆ ಪತ್ರ ಕಳಿಸಿ ನಿಮಗೆ ತಿಳಿಸಿದ್ದೇನೆಂದರೆ, ಇಂದು ರಾತ್ರಿ ಒಂಬತ್ತು ಗಂಟೆಗೆ ಸರಿಯಾಗಿ ಚಾಯ್ನಾ ಫೀಲ್ಡಿನ ಝಡತಿಗೆ ಪ್ರಾರಂಭವಾಗಬೇಕು. ಡೆಭೆನಟರೇ, ನೀವು ಈಗಲೆ ನಿಮ್ಮ ಪಪ್ಪಲಿನ ಜೇಲಿಗೆ ತಿರುಗಿ ಹೋಗಿ, ನಿಮ್ಮ ಪೋಲಿಸರನ್ನೆಲ್ಲ ಸಿದ್ಧಪಡಿಸಿರಿ.''

''ನಿಮ್ಮ ಪತ್ರ ಬಂದ ಕೂಡಲೆ ಅದರಂತೆ ಕೆಲಸ ಮಾಡಬೇಕೆಂದು ನಾನು ನಮ್ಮ ಸಾರ್ಜಂಟ ಲ್ಯಾಂಬರ್ಟನಿಗೆ ಹೇಳಿಯೇ ಬಂದಿರುತ್ತೇನೆ. ಆದುದರಿಂದ ನಾನು ಮತ್ತೆ ಅಲ್ಲಿಗೆ ಹೋಗುವ ಅವಶ್ಯಕತೆಯಿಲ್ಲ. ಅವನು ಒಂಬತ್ತಕ್ಕೆ ಮೊದಲೇ ತನ್ನ ಸಂಗಡಿಗರೊಡನೆ ಲಾಯಿಮ್ ಹೌಸ ರೋಡಿನೊಳಗಿನ ಆ ಕಾರ್ಗತ್ತಲೆಯ ಕೂಟಿಗೆ ಬರುವನೆಂಬದಕ್ಕೆ ಅನುಮಾನವಿಲ್ಲ.''

''ಹಾಗಾದರೆ ಬೇರೆ ಪೋಲೀಸರ ದಂಡಿನ ವ್ಯವಸ್ಥೆಯೇನು?''

''ಅವರೆಲ್ಲರೂ ಸ್ಯಾಂಡವೇರ ಲೇನಿನ ಆ ಮನೆಯ ಹಿಂಬದಿಗೆ ಹೋಗಿ ಅಲ್ಲಿ ತಮ್ಮ ದೃಷ್ಟಿಯನ್ನಿರಿಸಿ ಅವಿತುಕೊಂಡಿರುತ್ತಾರೆ. ನೀವು ಅವರಿಗೆ ಏನೇನು ಮಾಡಹೇಳಿರುವಿರೋ ಅದನ್ನೆಲ್ಲ ಅವರಿಗೆ ಚೆನ್ನಾಗಿ ತಿಳಿ ಹೇಳಿ ಕಳಿಸಿರುತ್ತೇನೆ. ಆರು ಗಂಟೆಯ ಮೊದಲೇ ನಾನು ಅವರನ್ನು ಅಲ್ಲಿಗೆ ಕಳಿಸಿಬಿಟ್ಟಿರುತ್ತೇನೆ. ಅಲ್ಲಿಯ ವ್ಯವಸ್ಥೆಯ ಬಗ್ಗೆ ನೀವು ನಿಶ್ಚಿಂತರಾಗಿರ್ರಿ.''

''ಹಾಗಾದರೆ ಡೆಭೆನಟರೇ, ನೀವು ಮತ್ತೆ ಜೇಲಿಗೆ ಹೋಗಿ ಬರುವ ಅವಶ್ಯಕತೆಯು ಉಳಿಯಲಿಲ್ಲ. ಇನ್ನು ಸ್ವಲ್ಪ ಹೊತ್ತು ತಡೆದು ನಾವು ಇಲ್ಲಿಂದ ಹೊರಡೋಣ. ನಮ್ಮ ಸ್ಮಿತ್ಥನು ಇಲ್ಲಿಗೆ ಮರಳಿ ಬರಲಾರನು. ನಾನು ಅವನಿಗೆ ಆ ಪೋಲೀಸರ ದಂಡಿನೊಡನೆಯೇ ಬರಹೇಳಿರುತ್ತೇನೆ. ಇವದಿನ ನಮ್ಮ

ಸಿದ್ಧತೆಯು ಸರ್ವಾಂಗಸುಂದರವಾಗಿದೆಯೆಂದು ನನಗನಿಸುತ್ತದೆ. ಈ ನನ್ನ ಹತೋಟಿಯು ಮೇರೆಗೆ ಕಾರ್ಯವಾದವದ್ದೇ ಆದರೆ, ನಾಳೆ ಬೆಳಗಾಗುವಷ್ಟರಲ್ಲಿ ಆ ಚೀನೀಯ ವಿದ್ರೋಹಿ ಪುಂಡರ ವಾರ್ತೆಗಳಿಂದ ಈ ವಿಸ್ತೃತವಾದ ಲಂಡನ್ನ ಪಟ್ಟಣವು ಅಲ್ಲೋಲ ಕಲ್ಲೋಲವಾದೀತು.''

ಹೀಗೆ ಬ್ಲೀಕನು ತನ್ನ ಸ್ವೀಕೃತಕಾರ್ಯೋದ್ಧಾರದ ಆಶೆಯಿಂದ ಉತ್ತೇಜಿತನಾಗಿ ತನ್ನ ಬಿಡಾರದಲ್ಲಿ ಡೆಭನಟನ ಕೂಡ ಮಾತನಾಡುತ್ತಿರುವಾಗ, ಅತ್ತ ಸ್ಮಿತ್ಥನು ಪ್ರಾಣಾಂತ್ಯ ಸಂಕಟ ಜಾಲದಲ್ಲಿ ಸಿಲುಕಿ, ಕ್ಷಣಕ್ಷಣಕ್ಕೆ ಮೃತ್ಯುವಿನ ದವಡೆಯಲ್ಲಿ ಸೇರುತ್ತಿರಬಹುದೆಂಬದರ ಕಲ್ಪನೆ ಕೂಡ ಅವನಿಗಿರಲಿಲ್ಲ.

ಸ್ಮಿತ್ಥನು ಬ್ಲೀಕನ ಪತ್ರವನ್ನು ತಕ್ಕೊಂಡು ಆ ಕಲಕತ್ತಾ ಕೊಟೇನೊಳಗಿನ ಜೂಜಿನ ಅಡ್ಡೆಯಿಂದ ಹೊರಬಿದ್ದು, ತ್ವರಿತ ಗತಿಯಿಂದ ಈಸ್ಟ ಇಂಡಿಯಾ ಡಕ್ಕರೋಡಿನೊಳಗಿಂದ ಹಾಯ್ದು ಪಪ್ಪಲನ ಜೇಲಿಗೆ ಹೋಗುವ ಹಾಯ್ ಸ್ಟ್ರೀಟಿನ ಕಡೆಗೆ ಮುಂದುವರೆದನು. ಅವನು ಆ ಜೇಲಿಗೆ ಬೇಗನೆ ತಲುಪುವದಕ್ಕೆಂದು ದೊಡ್ಡದಾರಿಯನ್ನು ಬಿಟ್ಟು, ಕತ್ತಲೆ ಮುಸುಕಿದ್ದ ಒಂದು ಚಿಕ್ಕ ಸಂದಿಯ ಓಣಿಯೊಳಗೆ ಹೊಕ್ಕನು. ಆಗ ಆತನ ಲಕ್ಷ್ಯವು ದಾರಿಯ ಕಡೆಗಿರಲಿಲ್ಲ. ಅಷ್ಟರಲ್ಲಿ ಒಮ್ಮೆಲೆ ಆತನ ಹಿಂದಿನಿಂದ ಒಂದು ಚೀಲವು ಆತನ ಕಣ್ಣು ಮೋರೆಗಳ ಮೇಲೆ ಹಾಕಲ್ಪಟ್ಟಿತು; ಹಾಗು ಪರಕ್ಷಣದಲ್ಲಿಯೇ ಬಾಯಿ-ಮೂಗುಗಳು ಒತ್ತಿ ಹಿಡಿಯಲ್ಪಟ್ಟವು. ಸ್ಮಿತ್ಥನು ತನ್ನ ಎರಡೂ ಕೈಗಳಿಂದ ಆ ಚೀಲವನ್ನು ಕಿತ್ತೊಗೆಯಲಿಕ್ಕೆ ಪ್ರಯತ್ನಿಸಹತ್ತಿದನು. ಅಷ್ಟರಲ್ಲಿ ಪ್ರತಿಕಕ್ಷಿಗಳು ಆತನ ಎರಡೂ ಕೈಗಳನ್ನು ಕೂಡಿಸಿ ಚೆನ್ನಾಗಿ ಬಿಗಿದುಬಿಟ್ಟರು. ಅದರಿಂದ ಆತ್ಮರಕ್ಷಣೆಯ ಸಾಮರ್ಥ್ಯವು ಸ್ಮಿತ್ಥನಲ್ಲುಳಿಯಲಿಲ್ಲ. ಮುಂದೆ ಅರೆನಿಮಿಷದಲ್ಲಿಯೇ ಯಾವನೋ ಒಬ್ಬನು ಕ್ಲೋರೋ ಫಾರ್ಮನಿಂದ ತೊಯ್ಯಿಸಲ್ಪಟ್ಟ ಸ್ಪಂಜವನ್ನು ಆ ಚೀಲದೊಳಗೆ ಕೈಸೇರಿಸಿ ಸ್ಮಿತ್ಥನ ಮೂಗಿನ ಬಳಿಗೆ ಹಿಡಿದನು. ಪರಕ್ಷಣದಲ್ಲಿಯೇ ಸ್ಮಿತ್ಥನು ಚೇತನಾಪಹೀನನಾಗಿ ಬಿದ್ದನು!

ಸ್ಮಿತ್ಥನಿಗೆ ಚೇತನೆಯುಂಟಾದಾಗ ಆತನ ಕಣ್ಣಿಗೆ ಒಂದು ಬಗೆಯ ಉಗ್ರವಾಸನೆಯ ಹೊಗೆಯು ಬಡಿಯಹತ್ತಿತು. ಅವನು ಕಣ್ದೆರೆದು ನೋಡಲು, ತನ್ನನ್ನೊಂದು ಚಿಕ್ಕ ಕೋಣೆಗೆ ಒಯ್ಯಲ್ಪಟ್ಟಿರುವರೆಂಬದು ತಿಳಿಯಿತು. ಆ ಕೋಣೆಯೊಳಗೊತ್ತಟ್ಟಿಗೆ ಒಂದು ದೀಪವು ಮಿಣಕುಮಿಣಕಾಗಿ ಉರಿಯುತ್ತಿತ್ತು; ಮತ್ತು ನಾಲ್ಕೈದು ಮಂದಿ ಚೀನೀಯರು ತನ್ನನ್ನು ಸುತ್ತುವರೆದು ನಿಂತು ಕೊಂಡಿದ್ದರು. ಸ್ಮಿತ್ಥನ ಬಾಯಿಂದ ಶಬ್ದವು ಹೊರಹೊರಡುವ ಮೊದಲೇ ಒಬ್ಬ ಚೀನೀಯ ಯುವಕನು ಆ ಕೋಣೆಯನ್ನು ಪ್ರವೇಶಿಸಿ, ಆತನ ಎದುರಿಗೆ

ಬಂದು ನಿಂತನು. ಆ ಆಗಂತುಕ ತರುಣನನ್ನು ಕಂಡು ಅಲ್ಲಿದ್ದ ಉಳಿದ ಚೀನಿಗಳು ಆತನನ್ನು ಸನ್ಮಾನಪೂರ್ವಕವಾಗಿ ಬರಮಾಡಿಕೊಂಡು, ತಾವು ಸ್ಮಿತ್ಥನ ಬಳಿಯಿಂದ ತುಸ ದೂರ ಸರಿದು ನಿಂತುಕೊಂಡರು. ಆ ಆಗಂತುಕ ತರುಣನನ್ನು ಕಂಡು ಸ್ಮಿತ್ಥನು ಗಡಗುಟ್ಟಿ ನಡುಗಿದನು. ಇದೇ ಯುವಕನೇ ಚಾಯ್ನಾ ಫೀಲ್ಡಿನ ಸಿಂಹನಾದ ಉಪಂಡ ಚಂಡನೆಂಬದು ಅವನಿಗೆ ತಿಳಿಯಿತು. ಆಗ ಸ್ಮಿತ್ಥನು ಗಟ್ಟಿಧೈರ್ಯ ಮಾಡಿ ಆ ತರುಣನ ಮುಖದ ಕಡೆಗೆ ನೋಡಲು, ಆತನ ಕಣ್ಣುಗಳು ನಿಗಿನಿಗಿಯಾದ ಕೆಂಡದಂತೆ ಉರಿಯುತ್ತಿದ್ದವು. ಅವನ ಮುಖದಲ್ಲಿ ಪೈಶಾಚಿಕ ನಗೆಯಿದ್ದಿತು. ಅದರಿಂದ ಇನ್ನು ತನಗೆ ಬಿಡುವಿಲ್ಲೆಂಬದನ್ನು ಸ್ಮಿತ್ಥನು ಚೆನ್ನಾಗಿ ತಿಳಕೊಂಡನು.

ಬಳಿಕ ಆ ಆಗಂತುಕ ತರುಣನು ಚಾಂಚಲ್ಯರಹಿತವಾದ ಧ್ವನಿಯಿಂದ:— "ಪೋರಾ, ಕಪಟವೇಷದಿಂದ ನೀನು ನನ್ನನ್ನು ಮೋಸಗೊಳಿಸುವದು ಅಸಾಧ್ಯವು. ನಾನು ನಿನ್ನನ್ನು ಚೆನ್ನಾಗಿ ಗುರ್ತಿಸಿರುತ್ತೇನೆ; ನೀನು ಆ ಬಹು ಧೂರ್ತ ಪತ್ತೆದಾರನಾದ ರಾಬರ್ಟ ಬ್ಲೇಕನ ಸಹಚರನಲ್ಲವೇ? ಆತನು ನನ್ನೊಡನೆ ಚಾಲಾಕ ನಡಿಸುವಷ್ಟು ಬಲಿಷ್ಠನಾದನೇನು? ಅವನಿಗೆ ಇದುವರೆಗೂ ನನ್ನ ಶಕ್ತಿಯು ಪರಿಚಯವಾಗಿಲ್ಲವೇ?"

ಸ್ಮಿತ್ಥನು ಏನನ್ನೂ ಒಡನುಡಿಯಲಿಲ್ಲ. ತನ್ನಂತೆ ತನ್ನ ಒಡೆಯನೂ ಯಾವದೊಂದು ಒಗೆಯ ಗಂಡಾಂತರಕ್ಕೆ ಎಲ್ಲಿ ಬಲಿಯಾಗಿರುವನೋ ಎಂದು ಅವನು ಯೋಚಿಸಲಾರಂಭಿಸಿದನು. ಸ್ಮಿತ್ಥನು ಸುಮ್ಮನಿರುವದನ್ನು ಕಂಡು ಉಪಂಡ ಚಂಡನು:—"ನೀನು ನಿನ್ನೀ ಛದ್ಮವೇಷದಲ್ಲಿದ್ದರೂ ನಾವುಗಳು ನಿನ್ನನ್ನು ಹೇಗೆ ಗುರ್ತಿಸಿದೆವೆಂಬದನ್ನು ನೀನು ಕೇಳಿಕೊಳ್ಳಬಯಸುವೆಯಷ್ಟೇ? ಈ ಲಂಡನ್ನಿನ ಪ್ರತಿಯೊಂದು ಜೂಜಿನ ಅಡ್ಡೆಯಲ್ಲಿಯೂ ನನ್ನ ಗುಪ್ತಚರರಿಗೆ ಅಭಾವವಿಲ್ಲ. ನೀನೂ ಬ್ಲೇಕನೂ ಕೂಡಿ ಆ ಕಲಕತ್ತಾ ಕೋರ್ಟಿನ ಮೇಲಿನ ಜೂಜಿನ ಅಡ್ಡೆಯಲ್ಲಿ ಆ ವಿಶ್ವಾಸಘಾತುಕ ಚಾಲೂ-ಇಯಾಂಗನೊಡನೆ ಯಾವಾಗ ಗೌಪ್ಯವಾಗಿ ಮಾತನಾಡುತ್ತಿದ್ದರೋ, ಆಗ ಅಲ್ಲಿದ್ದ ನನ್ನ ಗುಪ್ತಹೇರರು ನಿಮ್ಮಗಳ ಮೇಲೆ ತಮ್ಮ ದೃಷ್ಟಿಯಿಟ್ಟಿಸಿದ್ದರು. ಅವರು ನಿಮ್ಮಗಳಲ್ಲಿ ನಡೆದ ಆ ಗುಪ್ತ ಸಂಭಾಷಣವನ್ನೂ ಕೇಳಿಕೊಂಡಿರುತ್ತಾರೆ. ಆ ಅಡ್ಡೆಯ ಹೊರಗಡೆಯಲ್ಲೂ ನನ್ನ ಅನುಚರರಿದ್ದರು. ನೀನು ಅಲ್ಲಿಂದ ಹೊರ ಹೊರಟ ಕೂಡಲೆ ಅವರು ನಿನ್ನನ್ನು ಅನುಸರಣ ಮಾಡಿದರು. ನೀನು ಬ್ಲೇಕನ ಪತ್ರ ತಕ್ಕೊಂಡು ಪಪ್ಪಲಿನ ಜೇಲಿಗೆ ಹೊರಟಿದ್ದಿಯೆಂಬದು ನನ್ನ ಅನುಚರರಿಗೆ ತಿಳಿಯದಿರಲಿಲ್ಲ. ನಾನು ನಿನ್ನ ಒಡೆಯನನ್ನೂ ಸಹಜವಾಗಿ ಪ್ರತಿಬಂದಿಸುತ್ತಿದ್ದೆನು. ಆದರೆ ಕೆಲ ವಿಶೇಷ

ಕಾರಣದ ಸಲುವಾಗಿ ಸುಸಂಧಿಯು ಪ್ರಾಪ್ತವಾಗಿದ್ದರೂ ನಾನು ಆತನನ್ನು ಪ್ರತಿಬಂಧಿಸಿರುವದಿಲ್ಲವು. ಅವನು ಶೀಘ್ರವೇ ನಮ್ಮ ಜಾಲದಲ್ಲಿ ತೊಡಗಲಿಕ್ಕೇ ಬೇಕು; ಹಾಗೂ ತದನಂತರ ನಾನು ನಿಮ್ಮಿಬ್ಬರನ್ನೂ ಒಮ್ಮೆಲೆ ಕೊಲೆಗೆಯ್ಯುತ್ತೇನೆ. ನನ್ನೊಡನೆ ವೈರಬೆಳೆಯಿಸುವವರನ್ನು ನಾನು ಜೀವದಿಂದಿಡುತ್ತಿರುವದಿಲ್ಲ."

ಉಷಂಡ ಚಂಡನು ಹೀಗೆಂದು ಸ್ಮಿತ್ಥನಿಗೆ ಹೇಳಿ, ಬಳಿಕ ತನ್ನ ಅನುಚರರನ್ನುದ್ದೇಶಿಸಿ:—"ಈ ನೀಚನನ್ನು ಚೆನ್ನಾಗಿ ಹೆಡಮುರಿಗೆ ಕಟ್ಟಿ, ಆ ನೆಲಮನೆಯಲ್ಲಿರುವ ಬೇರೆ ಆಂಗ್ಲಬಂದಿಗಳ ಬಳಿಯಲ್ಲಿ ಒಯ್ಯಿರಿ. ಆ ಮೇಲೆ ಆ ಘಾತಕೀ ಚಾಲೂ-ಇಯಾಂಗನನ್ನು ನನ್ನೆದುರಿಗೆ ತಂದು ನಿಲ್ಲಿಸಿರಿ" ಎಂದು ಆಜ್ಞಾಪಿಸಿದನು.

ಸ್ಮಿತ್ಥನ ಕೈಕಾಲುಗಳು ಇದು ವರೆಗೂ ನಿರ್ಬಂಧಿತವಾಗಿದ್ದಿಲ್ಲ. ಅದರಿಂದ ಅವನು ತನ್ನ ಬಿಡುಗಡೆಯ ಬಗ್ಗೆ ಕೊನೆಯ ಪ್ರಯತ್ನವನ್ನು ಮಾಡದಿರದಾದನು. ಉಷಂಡ ಚಂಡನ ಅನುಯಾಯಿಗಳು ಸ್ಮಿತ್ಥನನ್ನು ಹಿಡಿದು ಹೆಡಮುರಿಗೆ ಬಿಗಿಯ ಬರಲು, ಸ್ಮಿತ್ಥನು ತನ್ನ ಒಂದೇ ಏಟಿನಿಂದ ಅವರಲ್ಲಿಯ ಒಬ್ಬನನ್ನು ಕೆಡವಿ, ಆ ಕೋಣೆಯ ಬಾಗಿಲ ಕಡೆಗೆ ಓಡಿ ಹೋದನು; ಆದರೆ ಅವನು ಆ ಬಾಗಿಲದಿಂದ ಪಾರಾಗಿ ಹೋಗುವ ಮೊದಲೇ ಆತನು ಮತ್ತೆ ಹಿಡಿಯಲ್ಪಟ್ಟು, ಕೈಕಾಲುಗಳಿಗೆ ಬಲವಾದ ಬೇಡಿಗಳು ತೊಡಿಸಲ್ಪಟ್ಟವು; ಹಾಗು ತದನಂತರ ಅವನನ್ನು ಆ ನೆಲಮನೆಗೆ ಸಾಗಿಸಿ ಬಿಟ್ಟರು.

ಮತ್ತೆ ಕೆಲನಿಮಿಷಗಳ ಮೇಲೆ ಚಾಲೂ-ಇಯಾಂಗನು ಮೂರು-ನಾಲ್ಕು ಜನ ಭೃತ್ಯರಿಂದ ಅಲ್ಲಿಗೆ ತರಲ್ಪಟ್ಟನು ಉಷಂಡ ಚಂಡನ ದೃಷ್ಟಿಯು ತನ್ನ ಕಡೆಗೇ ಇರುವದೆಂಬದನ್ನು ಕಂಡು ಆತನು ಥರಥರನೆ ನಡುಗಹತ್ತಿದನು. ಆತನ ಮೊಂಡೆಯು ಒಣಗಿ ಹೋಗಿತ್ತು. ಈ ಸಾರೆ ತನ್ನ ಹರಣವು ಹಾರುವದೇ ಖಂಡಿತವೆಂದು ಆತನು ನಿರ್ಧರಿಸಿಕೊಂಡಿದ್ದನು. ಉಷಂಡ ಚಂಡನು ಆತನನ್ನು ಕಂಡು ಸಿಟ್ಟಿನಿಂದ ನೆಲವನ್ನು ಒದೆಯುತ್ತ, ವಿಕಟಹಾಸ್ಯದಿಂದ: "ಎಲ್ಫ, ಸ್ವಜಾತಿದ್ರೋಹಿಯಾದ ವಿಶ್ವಾಸಘಾತುಕ ಹಂದಿಯೆ! ನೀಚ ಆಂಗ್ಲರ ಗುಪ್ತಹೇರನೇ! ನೀನು ಕಪಟ ವೇಷದಿಂದ ಆ ಧೂರ್ತ ಪತ್ತೆದಾರ ಬ್ಲೇಕನಿಗೆ ಸಹಾಯ ಮಾಡುವೆಯಲ್ಲವೆ? ನಿನ್ನ ಗುಟ್ಟನ್ನೆಲ್ಲ ನಾನು ಚೆನ್ನಾಗಿ ತಿಳಿದಿರುತ್ತೇನೆ. ನಿನ್ನ ನಡವಳಿಕೆಯು ಸಂದೇಹಾಸ್ಪದವಾದ್ದರಿಂದಲೇ ನಾನು ನನ್ನ ಅನುಚರರನ್ನು ನಿನ್ನ ಮೇಲೆ ನಜರಿಡುವದಕ್ಕಾಗಿ ಪಾಳತಿಯಿರಿಸಿದ್ದೆನು. ನಾನು ಸಾಕಷ್ಟು ಎಚ್ಚರದಿಂದಿರದಿದ್ದರೆ ನೀನು ಇಂದು ನನ್ನನ್ನು ಪೋಲೀಸರ ವಶಕ್ಕೆ ಒಪ್ಪಿಸಿಬಿಡುತ್ತಿದ್ದ ಎಲೈ ನಾಯಿಯೇ, ನಿನಗೆ ಇಷ್ಟು ಸಾಹಸವೂ, ಬಲವೂ ಉಂಟಾಗಿರುವವಲ್ಲವೆ?

ನಿನ್ನನ್ನು ಯಾವ ಬಗೆಯಿಂದ ಹಿಂಸಿಸಿ ಕೊಲ್ಲುವೆನೆಂಬದು ನಿನಗೆ ತೀವ್ರವೇ ತಿಳಿದುಬರುವದು. ನಿನ್ನ ಅಪರಾಧಕ್ಕೆ ತಕ್ಕ ಪ್ರಾಯಶ್ಚಿತ್ತವೇ ಘಟಿಸುವದು.''

ಹೀಗೆಂದು ನುಡಿದು ಉಷಂಡ ಚೆಂಡನು ತನ್ನ ಸಿಟ್ಟನ್ನು ತಡೆಯಲಾರದೆ, ತನ್ನ ಆಸನದಿಂದೆದ್ದವನೇ ಚಾಲೂ-ಇಯಾಂಗನ ಮುಸುಡೆಯ ಮೇಲೊಮ್ಮೆ ಚೆನ್ನಾಗಿ ಏಟು ಕೊಟ್ಟನು. ಆ ಮೇಲೆ ಆತನ ಸಂಜ್ಞೆಯ ಮೇರೆಗೆ ಅವನ ಅನುಚರರು ಆ ಚಾಲೂ-ಇಯಾಂಗನನ್ನು ಅಲ್ಲಿಂದ ಬೇರೆ ಕಡೆಗೆ ಎಳೆದುಕೊಂಡು ಹೋದರು.

ಸೇವಕರು ಹೊರಟು ಹೋದ ಮೇಲೆ ಉಷಂಡ ಚೆಂಡನು ನಿಷ್ಕ್ರಾಂತನಾಗಿ, ಗಂಭೀರ ಸ್ವರದಿಂದ:—''ಇಂದು ಇಲ್ಲಿಯ ನಮ್ಮ ಸಭೆಯು ನಿರ್ವಿಘ್ನವಾಗಿ ಪಾರುಗಾಣಲಿ; ಅಂದರೆ, ನಾಳೆಗೆ ಫಿರಂಗಿಯ-ಇಂಗ್ಲಿಷರ ರಕ್ತದಿಂದ ನನ್ನ ಪ್ರತಿಹಿಂಸೆಯ-ನೇಡಿನ ಯಜ್ಞವು ಪರಿಪೂರ್ಣವಾಗುವದು'' ಎಂದು ಕೂಗಿಕೊಂಡನು.

---

## ೧೫ನೇ ತೆರೆ.

## ಸಿಂಹವೋ, ಶಾರ್ದೂಲವೋ?



ರಾತ್ರಿಯ ಎಂಟೂವರೆ ಗಂಟೆಗೆ ಬ್ಲೇಕನು ಡೆಭೆನಟನನ್ನು ಸಂಗಡ ಕರಕೊಂಡು ತನ್ನ ಮನೆಯಿಂದ ಹೊರಬಿದ್ದನು. ಅವರು ಅಲ್ಪಾವಧಿಯಲ್ಲೇ ಲಾಯಿಮ್‌ಹಾವ್ರುಸ ರೋಡಿನೊಳಗಿನ ಆ ಕಾಗರ್ತ್ತಲೆಯ ಕೂಟಿಗೆ ಬಂದು ಅಲ್ಲಿಯ ಒಂದು ಹಾಳು ಮನೆಯ ಹತ್ತರ ಹುದುಗಿಕೊಂಡು ನಿಂತರು. ಅದಕ್ಕೆ ತೀರ ಸಮೀಪದಲ್ಲಿಯೇ ಚೀನೀ ವಿದ್ರೋಹಿಗಳ ಅಂದಿನ ಆ ಗುಪ್ತ ಸಭೆಯ ಸ್ಥಳವು ನಿರ್ಧರಿಸಲ್ಪಟ್ಟಿತ್ತು; ಅವಲ್ಲದೆ ಉಷಂಡ ಚೆಂಡನ ನಿವಾಸಸ್ಥಳವು ಅದಕ್ಕೆ ಸಮೀಪದಲ್ಲಿಯೇ ಇದ್ದಿತು.

ಬ್ಲೇಕ ಮತ್ತು ಡೆಭೆನಟರು ತಮ್ಮ ಪೋಲೀಸರ ತಂಡವೊಂದು ಸ್ಯಾಂಡವೇರಿಲೇನಿನೊಳಗಿನ ಆ ಮನೆಯ ಹತ್ತರ ಹೋಗಿ ಅವಿತುಕೊಂಡು ಕುಳಿತು ತಮ್ಮ ಅಪ್ಪಣೆಯ ನಿರೀಕ್ಷಣೆ ಮಾಡುತ್ತಿರಬಹುದೆಂದು ಊಹಿಸಿದರು. ಅದರಿಂದ ತಕ್ಕ ಸಮಯದಲ್ಲಿ ತಮಗೆ ಅವರ ನೆರವು ಖಂಡಿತವಾಗಿಯೂ ದೊರೆಯುವದೆಂಬ ವಿಷಯದಲ್ಲಿ ಅವರಿಗೆ ಅನುಮಾನವಿರಲಿಲ್ಲ. ಚಾಲೂ ಇಯಾಂಗನು ಬ್ಲ್ಯಾಕ್ಸಮನ್ ಸ್ಟ್ರೀಟಿನೊಳಗಿನ ಮನೆಯಿಂದ ತಮ್ಮನ್ನು ನಿರ್ದಿಷ್ಟ ಸ್ಥಳಕ್ಕೆ ಕರೆದೊಯ್ಯುವನೆಂದೂ ತಾವು ಆತನನ್ನನುಸರಿಸಿ ಹೋಗಿ ಉಷಂಡಚಂಡನ ಬಿಡಾರಕ್ಕೆ ಸಹಜವಾಗಿ

ತಲುಪುವೆವೆಂದೂ ಅವರು ತಮ್ಮ ಮನಸ್ಸಿನಲ್ಲಿ ಲೆಕ್ಕ ಹಾಕಿದ್ದರು. ಅಂದು ರಾತ್ರಿ ಎಂಟೂ ಮುಕ್ಕಾಲಿಗೆ ಪಪ್ಪಲಿನಿಂದ ಪೋಲೀಸರ ಎರಡನೇ ತಂಡವು ಬ್ಲೇಕನಿದ್ದ ಸ್ಥಳಕ್ಕೆ ಬರಬೇಕಾಗಿತ್ತು; ಆದರೆ ಅದರಂತೆ ಅವರಾರೂ ಬರಲಿಲ್ಲ. ಒಂಬತ್ತು ಗಂಟೆಯಾಗ ಬಂದರೂ ಅವರಲ್ಲಿಯ ಒಬ್ಬನೂ ಅತ್ತ ಸುಳಿಯಲಿಲ್ಲೆಂಬದನ್ನು ಕಂಡು ಬ್ಲೇಕನು ಹೆಚ್ಚಾಗಿ ಉತ್ಕಂಠಿತನಾದನು. ಆಗ ಆತನು:—"ಹೀಗೇಕಾಯಿತೆಂಬದು ತಿಳಿಯಲೊಲ್ಲದು. ಅವರಿಗೆ ಇಷ್ಟು ತಡವೇಕಾಗಿರುವದು?"

ಡೆಭೆನಟ: "ನನಗಂತೂ ಈ ಬಗ್ಗೆ ಏನೂ ತಿಳಿಯದಾಗಿದೆ! ನೀವು ನಿಮ್ಮ ಪತ್ರದಲ್ಲಿ ಇಲ್ಲಿಗೆ ಇಂಥ ವೇಳೆಗೆ ಬರಲಿಕ್ಕೇಬೇಕೆಂಬದನ್ನು ತಿಳಿಸಲಿಕ್ಕೆ ಮರೆತಿಲ್ಲವಷ್ಟೆ?"

"ಛೀ ಛೀ! ನನ್ನಿಂದ ಆ ತಪ್ಪು ಸರ್ವಥಾ ಆಗಿರುವದಿಲ್ಲ. ಆ ಪತ್ರದೊಳಗಿನ ಮುಖ್ಯ ವಿಷಯವೇ ವೇಳೆ ತಿಳಿಸುವದಿದ್ದು, ಅದನ್ನು ತಿಳಿಸಲಿಕ್ಕೆ ಮರೆಯುವೆನೇ? ನಾನು ಅದರಲ್ಲಿ 'ಇಂದು ರಾತ್ರಿ ಒಂಬತ್ತಕ್ಕೆ ಕೆಲಸವು ಪ್ರಾರಂಭವಾಗಲೇಬೇಕು!' ಎಂದು ತಿಳಿಸಿದ್ದು, ನಿಮ್ಮ ಸಾರ್ಜಂಟ-ಲ್ಯಾಂಬರ್ಟನು ಇಲ್ಲಿಗೆ ಬಂದು ಹತ್ತು ನಿಮಿಷಗಳಾದರೂ ಆಗಿರಬೇಕಾಗಿತ್ತು. ಅವರೆಲ್ಲರೂ ಇಲ್ಲಿಗೆ ಬಂದ ಕೂಡಲೆ ಸ್ಮಿತ್ಥನು ನಮ್ಮೆಡೆಗೆ ಬಂದು ಸುದ್ದಿ ತಿಳಿಸಬೇಕೆಂದು ಗೊತ್ತಾಗಿತ್ತು; ಆದರೆ ಇಷ್ಟೊತ್ತಾದರೂ ಸಾರ್ಜಂಟನೂ ಇಲ್ಲ; ಸ್ಮಿತ್ಥನೂ ಇಲ್ಲ!'

'ಇದೊಳ್ಳೇ ಗುಚ್ಚಿಂತೆಯು ಮಾತೇ ಸರಿ; ಆದರೆ ನಿಮ್ಮ ಸ್ಮಿತ್ಥನು ಆ ಪತ್ರವನ್ನು ಪಪ್ಪಲಿನ ಜೇಲಿಗೆ ತಲುಪಿಸಲಿಕ್ಕೆ ಸಮರ್ಥನಾದನೋ ಇಲ್ಲವೊ? ಎಂಬ ವಿಷಯಕ್ಕೆ ಅನುಮಾನವಾಗುತ್ತದೆ.'

"ಡೆಭೆನಟರೇ, ನಿಮ್ಮ ಈ ಸಂದೇಹವೂ ಆಲೋಚಿಸತಕ್ಕದ್ದಾಗಿದೆ. ಒಂದು ವೇಳೆ ಸ್ಮಿತ್ಥನು ಶತ್ರುಗಳ ಕೈಗೆ ಸಿಕ್ಕಿದ್ದರೆ ನಮ್ಮ ಸಂಕಲ್ಪಗಳೆಲ್ಲ ವ್ಯರ್ಥವಾಗುವವು. ಅದರಿಂದ ಸ್ಮಿತ್ಥ-ಚಾಲೂ-ಇಯಾಂಗರು ವೈರಿದಲದವರಿಂದ ಜೀವಂತ ಹುಗಿಶಲ್ಪಡುವರು! ಅವರು ಇನ್ನು ಬದುಕಿರುವ ಯಾವ ಆಶೆಯೂ ಇರುವದಿಲ್ಲವಲ್ಲ!"

"ಹಾಗಾದರೆ ಇನ್ನು ನಾವು ಮಾಡುವದೇನು? ಜೇಲಿಗೆ ಮರಳಿ ಹೋಗೋಣವೇ?"

"ಬೇಡ; ನಾವು ಬ್ಲ್ಯಾಕ್ಸಮನ್ ಸ್ಟ್ರೀಟಿನೊಳಗಿನ ಚಾಲೂ-ಇಯಾಂಗನ ಮನೆಗೆ ಹೋಗಿ, ಆತನು ಬಾಗಿಲವನ್ನು ತೆರೆದಿರುವನೋ ಇಲ್ಲವೋ ನೋಡೋಣ. ಅವನು ಅಲ್ಲಿಯ ಬಾಗಿಲವನ್ನು ತೆರೆದಿಟ್ಟಿದ್ದರೆ, ನಾವು ಪೋಲೀಸರ ದಂಡಿನೊಡನೆ ಒಳಗೆ ಹೋಗೋಣ; ನಾವು ಆ ಬಾಗಿಲವನ್ನು ಒಡೆದರೂ ಚಾಲೂ-ಇಯಾಂಗನ

ಸುಳುವು ಹತ್ತಿದ್ದರೆ, ಅವನು ಕಡು ಗಂಡಾಂತರಕ್ಕೆ ಸಿಕ್ಕಿರುವನೆಂದು ತಿಳಿಯೋಣ; ಆತನು ಮರಳಿ ತನ್ನ ಮನೆಗೆ ಒಂದೇ ಇಲ್ಲವೆಂದು ಅದರಿಂದ ಗೊತ್ತಾಗುವದು. ಹಾಗಾದ ಮೇಲೆ ನಾವು ಜೇಲಿಗೆ ಅಗತ್ಯವಾಗಿ ಮರಳಿ ಹೋಗಲಿಕ್ಕೇಬೇಕು. ಸದ್ಯಕ್ಕೆ ನಾವು ಆ ಬ್ಲ್ಯಾಕ್ಸಮನ್ ಸ್ಟ್ರೀಟಿಗೆ ಹೋಗೋಣ ನಡೆಯಿರಿ. ವಿಪತ್ತಿನ ಸಂಬಂಧದಿಂದ ನಾನು ಬೆದರಿರುತ್ತೇನೆ; ವೈರಿದಳದವರು ನಮ್ಮ ಸಂಕಲ್ಪವನ್ನು ತಿಳಿದಿದ್ದರೆ ಮಾತ್ರ ನಮ್ಮ ಸರ್ವನಾಶವೇ ಆಗುವದು.''

ಬಳಿಕ ಅವರೀರ್ವರೂ ಆ ಕಾರ್ಗತ್ತಲೆಯ ಮಾರ್ಗದೊಳಗಿಂದ ಬಹು ಎಚ್ಚರಿಕೆಯಿಂದ ಬ್ಲ್ಯಾಕ್ಸಮನ್ ಸ್ಟ್ರೀಟಿಗೆ ಹೋದರು. ಅವರು ತಮ್ಮ ಕೈಯಲ್ಲಿ ಪಿಸ್ತೂಲನ್ನು ಹಿಡಕೊಂಡೇ ಆ ಮನೆಯ ಬಾಗಿಲ ಬಳಿಗೆ ಬಂದು ಅದನ್ನು ತಟ್ಟಿದರು. ಅದಕ್ಕೆ ಒಳಗಿನಿಂದ ಅಗಳಿ-ಚಿಲಕಗಳು ಹಾಕಿರಲಿಲ್ಲ; ಅದರಿಂದ ತೆರೆದು ಬಿಟ್ಟಿತು. ಅಷ್ಟರಲ್ಲಿ ಸಮೀಪದ ಟಾವರಿನೊಳಗಿನ ಗಡಿಯಾರದಲ್ಲಿ ಒಂಬತ್ತರ ಗಂಟೆಯು ಬಡಿಯಿತು.

ಒಳಗೆ ಪ್ರವೇಶಿಸುತ್ತಲೆ ಅವರಿಗೆ ಅಲ್ಲಿಯ ಮಂದವಾದ ದೀಪದ ಬೆಳಕಿನಲ್ಲಿ ಚಾಊ-ಇಯಾಂಗನು ಕಾಣಿಸಿಕೊಂಡನು. ಬ್ಲೇಕನಿಗೆ ಆತನ ಮುಖವು ಸ್ಪಷ್ಟವಾಗಿ ಕಾಣಿಸದಿದ್ದರೂ ಇವನು ಮೆಲ್ಲನೆ: ''ಚಾಊ-ಇಯಾಂಗಾ, ನೀನು ಸಿದ್ಧನಾಗಿರುವೆಯಾ?'' ಎಂದು ಪ್ರಶ್ನೆಮಾಡಿದನು.

''ಒಡೆಯರೇ, ಸಿದ್ಧನಿರುತ್ತೇನೆ; ಆದರೆ ತಮ್ಮೊಡನೆ ಪೋಲೀಸರ ದಂಡೆಲ್ಲಿದೆ? ತಾವಿಬ್ಬರೇ ಒಂದಿರುವುದೇಕೆ?'' ಎಂದು ಅವನು ಕೇಳಲು,

''ಅವರು ಇನ್ನೂ ಇಲ್ಲಿಗೆ ಒಂದು ತಲುಪಲಿಲ್ಲ. ಇದು ವರೆಗೆ ನಾವು ಅವರ ಹಾದಿಯನ್ನೇ ಕಾಯುತ್ತಿದ್ದೆವು; ಅವರನ್ನು ಕಾಣದ್ದರಿಂದ ನಾವಿಬ್ಬರೇ ಹೊರಟು ಬಂದೆವು. ನಮ್ಮ ಸಂಕಲ್ಪವನ್ನು ವಿಫಲಗೊಳಿಸುವದಕ್ಕಾಗಿ ಶತ್ರುಗಳೇನಾದರೂ ಉಪಾಯ ಮಾಡಿರಬಹುದೆಂದು ನಮಗೆ ಅನುಮಾನವಾಗಿದೆ. ಅದೇನಾಗಿದೆಯೋ ತಿಳಿಯದು.''

''ಸ್ಮಿತ್ಥನು ತಮ್ಮ ಪತ್ರದೊಂದಿಗೆ ಆ ಜೂಜಿನ ಅಡ್ಡೆಯಿಂದ ಹೊರಬಿದ್ದು ಹೋದ ಮೇಲೆ ಮತ್ತೇನಾಯಿತು?''

''ಅವನು ಪಪ್ಪಲಿನ ಜೇಲಿಗೆ ತಲುಪುವ ಮೊದಲೇ ದಾರಿಯಲ್ಲಿ ವೈರಿಗಳಿಂದ ಸೆರೆಹಿಡಿಯಲ್ಪಟ್ಟಿರಬೇಕೆಂದು ನನಗನಿಸುತ್ತದೆ.''

''ತಾವಿನ್ನು ಚಿಂತಿಸುವ ಕಾರಣವಿಲ್ಲ. ತಾವು ಒಳಗೆ ನಡೆಯಿರಿ. ತಮಗೊಂದು ಹೊಸ ಸಂಗತಿಯನ್ನು ತಿಳಿಸುವದಿದೆ. ಅದನ್ನು ನಾನು ಈಗಲೇ ಆಕಸ್ಮಿಕವಾಗಿ ತಿಳಿದೆನು. ಆ ಸಂಗತಿಯು ತಮಗೆ ಆ ಕೂಡಲೆ ತಿಳಿಯಬೇಕಾ

ಗಿತ್ತು. ಅದು ಬಹು ಮಹತ್ವದ ಸಂಗತಿಯು. ಬನ್ನಿರಿ ಒಳಗೆ'' ಎಂದು ಚಾಊ-ಇಯಾಂಗನು ನುಡಿಯಲು,

ಬ್ಲೇಕನು ಕ್ಷಣಕಾಲವೇ ಅನುಮಾನಿಸಿ, ಡೆಭೆನಟನೊಡನೆ ಆತನನ್ನನುಸರಿಸಿ ನಡೆದನು. ಚಾಊ ಇಯಾಂಗನು ಆ ಬಾಗಿಲವನ್ನಿಕ್ಕಿಕೊಂಡು, ಮತ್ತೊಂದು ದೀಪವನ್ನು ಹಚ್ಚಿದನು. ಬಳಿಕ ಅವನು ಅವರಿಗೆ ತನ್ನನ್ನು ಅನುಸರಣ ಮಾಡಲಿಕ್ಕೆ ಸೂಚಿಸಿ ಮುಂದೆ ನಡೆಯಲು, ಇವರು ಅವನ ಹಿಂದಿಂದೆ ಹೋಗಿ ನಡುಮನೆಯೊಳಗಿಂದ ಹಾಯ್ದು ಒಂದು ಸುಸಜ್ಜಿತವಾದ ಕೋಣೆಯನ್ನು ಹೊಕ್ಕರು. ಇವರು ಆ ಕೋಣೆಯನ್ನು ಪ್ರವೇಶಿಸುತ್ತಲೆ ಚಾಊ-ಇಯಾಂಗನು ತನ್ನ ಕೈಯೊಳಗಿನ ದೀಪವನ್ನು ನಂದಿಸಿ ಬಿಟ್ಟನು; ಹಾಗು ಅವನು ಅವಸರವಸರದಿಂದ ಎತ್ತೋ ಸರಿದು ಬಿಟ್ಟನು. ಆತನ ಆ ಬಗೆಯ ವ್ಯವಹಾರದಿಂದ ಬ್ಲೇಕನ ಮನಸ್ಸಿನಲ್ಲಿ ಒಂದು ಪ್ರಕಾರದ ಬಾಯಿಂದ ಒಡನುಡಿಯದಂತಹ ಭೀತಿಯು ಹುಟ್ಟಿತು. 'ಈ ಚೀನೀಯ ಚಾಊ ಇಯಾಂಗನು ತನ್ನ ವಿಶ್ವಾಸಘಾತುಕ ಜಾತಿಯನ್ನೇ ಹೊತ್ತನಲ್ಲನೆ?' ಬ್ಲೇಕನ ಅಂತರಂಗದಲ್ಲಿ ಈ ಬಗೆಯ ವಿಚಾರಗಳು ನಡೆದಿರಲು, ಅವನು ಮೆಲ್ಲನೆ ಚಾಊ ಇಯಾಂಗನನ್ನು ಹೆಸರುಗೊಂಡು ಕರೆದನು. ಅಷ್ಟರಲ್ಲಿ ಆ ಕೋಣೆಯು ಒಮ್ಮೆಲೆ ವಿದ್ಯುದ್ದೀಪಗಳಿಂದ ಬೆಳಗಹತ್ತಿತು; ಹಾಗು ಹತ್ತು-ಹನ್ನೆರಡು ಜನ ಭೀಷಣಾಕಾರದ ಚೀನೀಯ ಪುಂಡರು ಕೈಯಲ್ಲಿ ಹಿರಿದ ಕತ್ತಿ, ಕಿರೀಚ ಮುಂತಾದ ಆಯುಧಗಳಿಂದಲೂ ಲಾಠಿಗಳಿಂದಲೂ ಸಜ್ಜಾಗಿ ಅಲ್ಲಿಗೆ ಒಂದು ಇವರನ್ನು ಸುತ್ತುಗಟ್ಟಿ ನಿಂತರು.

ಕೂಡಲೆ ಡೆಭೆನಟನು ವ್ಯಾಕುಲಚಿತ್ತದಿಂದ:-''ಇದೇನು ಅತ್ಯಾಚಾರವು!'' ಎಂದಂದನು.

ಬ್ಲೇಕನು ತೀಕ್ಷ್ಣದೃಷ್ಟಿಯಿಂದ ಅವರೆಲ್ಲರನ್ನು ನೋಡಲು, ಚಾಊ-ಇಯಾಂಗನು ಅವರೆಲ್ಲರ ಹಿಂದುಗಡೆಯಲ್ಲಿ ಹಲ್ಲುಕಿರಿದು ನಗುತ್ತ ನಿಂತುಕೊಂಡದ್ದು ಕಂಡಿತು ಆ ಉಜ್ವಲವಾದ ಬೆಳಕಿನಲ್ಲಿ ಆತನನ್ನು ಆಪಾದಮಸ್ತಕದ ವರೆಗೆ ನಿರೀಕ್ಷಿಸಲು, ಅವನು ನಿಜವಾದ ಚಾಊ-ಇಯಾಂಗನಾಗಿರದೆ, ವೇಷಧಾರಿಯಾದ ಚಾಊ ಇಯಾಂಗನಿರುವನೆಂಬದು ತಿಳಿಯಿತು. ಆಗ ಮಾತ್ರ ತಮ್ಮ ಸ್ನೇಹಿತನೂ ಚಾಊ ಇಯಾಂಗನೂ ನಿಜವಾಗಿಯೂ ವೈರಿಗಳ ಕೈಸೇರಿರುವರೆಂಬದು ಅವನಿಗೆ ಖಾತ್ರಿಯಾಯಿತು. ವೈರಿಗಳು ತಮ್ಮ ಇಂಗಿತವನ್ನು ಅರಿತುಕೊಂಡು, ಕೌಶಲ್ಯದಿಂದ ತಮ್ಮನ್ನು ಇಲ್ಲಿಗೆ ಕರೆತಂದು, ಸೆರೆಹಿಡಿಯಲಿರುವ ಸಂಕಲ್ಪ ಮಾಡಿರುವರೆಂಬದು ತಿಳಿಯಿತು. ಆಗ ಆತ್ಮರಕ್ಷಣೆಯ ಉದ್ದೇಶದಿಂದ ಬ್ಲೇಕ-ಡೆಭೆನಟರು ತಮ್ಮ ತಮ್ಮ ಪಿಸ್ತೂಲುಗಳನ್ನು ಜೇಬಿ

ನಿಂದ ಹೊರಹೊರಡಿಸಿದರು; ಆದರೆ ಅವರು ಅವುಗಳಿಂದ ಗುಂಡು ಹೊಡೆಯುವ ಮೊದಲೇ ಚೀನಿಗರ ಲಾಠಿಗಳ ಬಲವಾದ ಪೆಟ್ಟುಗಳಿಂದ ಅವು ಅವರ ಕೈಗಳಿಂದ ಜಾರಿಬಿದ್ದವು. ಬಳಿಕ ಆ ಚೀನಿಗರು ಹಸಿದ ಹುಲಿಗಳಂತೆ ಅವರ ಮೈಮೇಲೆ ಸಾಗಿ ಹೋಗಿ ಅವರಿಬ್ಬರನ್ನೂ ಆಕ್ರಮಿಸಿಬಿಟ್ಟರು.

ಅಷ್ಟರಲ್ಲಿ ಒಬ್ಬ ಚೀನಿಗನ ಕೈಯ ಲಾಠಿಯ ಬಲವಾದ ಪೆಟ್ಟು ಡೆಭೆನಟನ ತಲೆಗೆ ಬಿತ್ತು. ಅದರಿಂದ ಆತನು ಎಚ್ಚರದಪ್ಪಿ ಬಿದ್ದನು. ಆಗ ಬ್ಲೇಕನು ಒಬ್ಬೊಂಟಿಗನಾಗಿ ಆ ವೈರಿದಲದ ಕೂಡ ಪ್ರಚಂಡವಾದ ಪರಾಕ್ರಮದಿಂದ ಕಾದಹತ್ತಿದನು. ಆತನ ಒದಿಕೆಯಿಂದಲೂ ಗುದ್ದುಗಳಿಂದಲೂ ಎಷ್ಟೋ ಜನ ಚೀನಿಗರು ನೆಲಹಿಡಿದು ಬಿದ್ದುಕೊಳ್ಳಬೇಕಾಯಿತು; ಆದರೆ ಅಷ್ಟೊಂದು ಜನ ವೈರಿಗಳ ಎದುರಿಗೆ ಒಬ್ಬೊಂಟಿಗನಾದ ಅವನು ಏನು ತಾನೆ ಮಾಡಲಿಕ್ಕೆ ಸಾಧ್ಯವಾದೀತು? ಆತನು ಬಹು ಕಷ್ಟದಿಂದ ಅವರ ಕೊಂಡಿಯೊಳಗಿಂದ ಪಾರಾಗಿ, ಒಂದು ಕುರ್ಚಿಯನ್ನು ತನ್ನ ಎರಡೂ ಕೈಗಳಿಂದ ಹಿಡಿದುಕೊಂಡು ಆ ಕೋಣೆಯ ಒಂದು ಮೂಲೆಯನ್ನು ಆಶ್ರಯಿಸಿದನು.

ಅವರೊಳಗಿನ ಎಂಟು ಜನ ಚೀನಿಗರು ಸಾವರಿಸಿಕೊಂಡು ಗರ್ಜಿಸುತ್ತ ಆತನನ್ನು ಮತ್ತೆ ಆಕ್ರಮಿಸ ಬಂದರು. ಅವನು ತನ್ನ ಕೈಯೊಳಗಿನ ಆ ಕುರ್ಚಿಯಿಂದ ಅವರಲ್ಲಿಯ ಎಲ್ಲಕ್ಕೂ ಮುಂದಿನ ಮೂವರನ್ನು ನೆಲಕ್ಕೆ ಕೆಡಹಿದನು. ಕಟ್ಟಕಡೆಗೆ ಒಬ್ಬ ಚೀನಿಗನು ಅಲ್ಲಿಯೇ ನೆಲಕ್ಕೆ ಬಿದ್ದಿದ್ದ ಬ್ಲೇಕನ ಪಿಸ್ತೂಲನ್ನೆತ್ತಿಕೊಂಡು ಅದರಿಂದ ಬ್ಲೇಕನಿಗೇ ಗುಂಡು ಹಾಕಲಿಕ್ಕೆ ಪ್ರಯತ್ನಿಸಿದನು. ಇಷ್ಟರಲ್ಲಿ ಆಹತಗೊಂಡ ಶರೀರದ, ನೆತ್ತರು ಹರಿಯುತ್ತಿದ್ದ ಹಣೆಯುಳ್ಳ ಒಬ್ಬ ಚೀನಿಗನು ಅಲ್ಲಿಗೆ ಧಾವಿಸಿ ಬಂದನು. ಆಗ ಅಲ್ಲಿಗೆ ಬಂದವನೇ ನಿಜವಾದ ಚಾಊ-ಇಯಾಂಗನೆಂಬುದು ಬ್ಲೇಕನಿಗೆ ತಿಳಿಯಿತು.

ಚಾಊ-ಇಯಾಂಗನು ಓಡುತ್ತೋಡುತ್ತ ಬ್ಲೇಕನ ಎದುರಿಗೆ ಬಂದು, ಅವನನ್ನು ಮರೆಕಟ್ಟಿಕೊಂಡು ನಿಂತನು. ಆತತಾಯಿಯಾದ ಚೀನಿಗನು ಬ್ಲೇಕನ ಮೇಲೆ ಗುರಿಯಿಟ್ಟು ಗುಂಡು ಹಾರಿಸಿದನು. ಅದು ಅವನಿಗೆ ಬಡಿಯದೆ, ಚಾಊ-ಇಯಾಂಗನ ಹೆಗಲೊಳಗೆ ನಟ್ಟಿತು. ಆರ್ತಧ್ವನಿಗೆಯ್ಯುತ್ತ ಚಾಊ-ಇಯಾಂಗನು ನೆಲಕ್ಕೆ ಬಿದ್ದುಬಿಟ್ಟನು! ಇಷ್ಟರಲ್ಲಿ ಮತ್ತೆ ಇಬ್ಬರು ಚೀನಿಗರು ಬ್ಲೇಕನ ಮೇಲೇರಿ ಹೋಗಿ, ಅವನ ಕೈಯೊಳಗಿನ ಆ ಕುರ್ಚಿಯನ್ನು ಕಸಿದುಕೊಂಡರು. ಈ ಸಾರೆ ಮಾತ್ರ ಬ್ಲೇಕನಿಂದ ಅವರಿಗಾವ ಕೇಡೂ ಉಂಟಾಗಲಿಲ್ಲ. ತನ್ನ ಸಲುವಾಗಿ ಚಾಊ-ಇಯಾಂಗನು ಮರಣಕ್ಕೆಸಿದ್ಧನಾದುದನ್ನು ಕಂಡು, ಬ್ಲೇಕನು ತನ್ನ ಜೀವದ ಮೇಲಿನ ಮಾಯಾ-ಮಮತೆಗಳನ್ನು ತೊರೆದಿದ್ದನು. ಅವನು ದೈವದ ಮೇಲೆ ಭಾರ

ವನ್ನು ಹಾಕಿ ವೈರಿಗಳ ಕೈಯಲ್ಲಿ ಆತ್ಮಸಮರ್ಪಣ ಮಾಡಿದನು.

ಕೆಲ ನಿಮಿಷಗಳ ವರೆಗೆ ಹೆಣದಂತೆ ಬಿದ್ದುಕೊಂಡಿದ್ದ ಚಾಲೂ ಇಯಾಂಗನು ಅತಿ ಕಷ್ಟದಿಂದ ತನ್ನ ಬಾಹುಗಳ ಮೇಲೆ ಭಾರವನ್ನಿಕ್ಕಿ ತಲೆಯನ್ನು ಎತ್ತಿದನು; ಹಾಗು ಬ್ಲೇಕನ ಮುಖದ ಕಡೆಗೆ ನೋಡಿ, ಬಹು ವೇದನಾಯುಕ್ತ ಧ್ವನಿಯಿಂದ: "ಸನ್ಮಾನ್ಯ ಮಹಾನುಭಾವರೇ, ಈ ಸಂಕಟವು ನನ್ನ ದೋಷದಿಂದ ಪ್ರಾಪ್ತವಾಗಿಲ್ಲ. ವೈರಿದಲದ ಗುಪ್ತಚರರು ಕಲಕತ್ತಾ ಕೋರ್ಟಿನ ಮೇಲಿನ ಜೂಜಿನ ಅಡ್ಡೆಯಲ್ಲೇ ನಮ್ಮನ್ನು ಗುರ್ತಿಸಿ, ಅಲ್ಲಿಂದ ಹೊರಬಿದ್ದೊಡನೆಯೇ ನಮ್ಮನ್ನು ಸೆರೆಹಿಡಿದಿರುವರು. ಅವರು ನಮ್ಮನ್ನು ತಮ್ಮ ಮುಖ್ಯಸ್ಥನ ಎದುರಿಗೆ ಒಯ್ದು ನಿಲ್ಲಿಸಲು, ಆತನು ನನಗೆ ಮರಣದ ಶಿಕ್ಷೆಯನ್ನು ವಿಧಿಸಿರುತ್ತಾನೆ. ನನ್ನ ಕೈಕಾಲುಗಳನ್ನು ಕಟ್ಟಿ, ಬಾಯಲ್ಲಿ ಅರಿವೆ ತುರುಕಿ ನನ್ನನ್ನು ಒಂದು ಕೋಣೆಯಲ್ಲಿ ಸೆರೆಯಿರಿಸಿದ್ದರು. ನಿಮ್ಮನ್ನು ಎಚ್ಚರಗೊಳಿಸುವದಕ್ಕೆಂದು ಬಹು ಪ್ರಯಾಸದಿಂದ ನಾನು ಅಲ್ಲಿಂದ ಇಲ್ಲಿಗೆ ಓಡಿ ಬಂದಿರುತ್ತೇನೆ; ಆದರೆ ಇಲ್ಲಿ ಬಂದು ನೋಡಲು, ನೀವು ವೈರಿಗಳ ಬಲೆಯಲ್ಲಿ ಸಿಕ್ಕಿರುತ್ತೀರಿ........"

ಚಾಲೂ-ಇಯಾಂಗನು ಮತ್ತೆ ಯಾವ ಮಾತನ್ನೂ ಆಡದಾದನು. ಹೆಚ್ಚಾದ ರಕ್ತಸ್ರಾವದಿಂದ ಆತನು ತೀರ ಅಶಕ್ತನಾಗಿದ್ದನು. ಅದರಿಂದ ಆತನ ಗೋಣು ನೆಲದ ಮೇಲೆ ಕಳಚಿ ಬಿತ್ತು! ಆ ಮೇಲೆ ಆತನು ಒಂದೆರಡು ಸಾರೆ ಕೈಕಾಲು ಜಾಡಿಸಿದಂತೆ ಮಾಡಿ, ಕೊನೆಯು ಶ್ವಾಸವನ್ನು ಬಿಟ್ಟನು! ಚಾಲೂ ಇಯಾಂಗನ ಪ್ರಾಣವು ದೇಹವನ್ನು ತ್ಯಜಿಸಿ ಹೋಯಿತೆಂಬದು ಬ್ಲೇಕನಿಗವಗತವಾಯಿತು.

ಇನ್ಸಪೆಕ್ಟರ ಡಭಿನಟನು ಇದು ಮೊದಲೇ ಮೂರ್ಛಿತಿಳಿದಿದ್ದು, ಬಿದ್ದಲ್ಲಿಂದಲೇ ಅದನ್ನೆಲ್ಲ ಕಂಡನು. ಆಗ ಆತನು: "ಈ ಬಡವನು ನಿರರ್ಥಕವಾಗಿ ಪ್ರಾಣಕ್ಕೆರವಾದನು! ನಮ್ಮಗಳ ಜೀವನದ ವಿಷಯದಲ್ಲಿಯೂ ಆಶೆಯಿಲ್ಲ. ಈ ದುರ್ವೃತ್ತರು ನಮ್ಮಗಳ ಮೇಲ ದಯೆದೋರಿಸಲಾರರು. ಸ್ಮಿಥ ಮತ್ತು ರಿಚರ್ಡ್ಸರ ಹಣೇಬರಹವು ಹೇಗಿದೆಯೋ ಯಾರು ಬಲ್ಲರು! ಅದು ನಮಗೆ ಗೋಚರವಾಗದಿರುವದು ಸುಖವೊ ದುಃಖವೊ? ಹೇಳಲಾರೆನು."

ಅದಕ್ಕೆ ಬ್ಲೇಕನು:—' ಡೆಭಿನಟರೇ, ಅವರು ಇದುವರೆಗೂ ಜೀವದಿಂದಿರುವರೇನು? ಅವರು ಈ ಮೊದಲೇ ಪರಲೋಕವನ್ನೈದಿರಬೇಕೆಂದು ನನ್ನ ಮತವಿದೆ. ಒಂದುವೇಳೆ ಅವರು ಇದುವರೆಗೆ ಜೀವದಿಂದಿದ್ದರೂ ಇನ್ನು ಅವರು ಇಬದುಕುವ ಆಶೆಯಿಲ್ಲ. ಪೋಲೀಸರ ದಂಡು ನಮ್ಮನ್ನು ಉದ್ಧಾರಗೊಳಿಸ ಬರುವದೆಂಬ ಆಶೆಯುಳಿದಿಲ್ಲ. ಸ್ಮಿಥನು ನಮ್ಮ ಪತ್ರವನ್ನು ಪಪ್ಪಲನ ಜೇಲಿಗೆ ತಲುಪಿಸಲಿಕ್ಕೆ ಶಕ್ತ

ನಾಗಿರುವದಿಲ್ಲ."

ಆ ಮೇಲೆ ಆ ಚೀನಿಗರೆಲ್ಲರೂ ಸೇರಿ ಡೆಭೆನಟನ ಹಾಗು ಬ್ಲೇಕನ ಕೈಗಳನ್ನು ಹಿಂದಿನಿಂದ ಬಿಗಿದಾಗಿ ಕಟ್ಟಿದರು. ಬಳಿಕ ಅವರೀರ್ವರ ಕಣ್ಣುಗಳನ್ನೂ ಕಟ್ಟಿದರು; ಹಾಗು ಅವರನ್ನು ಜಗ್ಗಿಕೊಂಡು ನಡೆದರು. ತಮ್ಮನ್ನು ಯಾವ ದಿಕ್ಕಿನಿಂದ ಯಾವ ಕಡೆಗೆ ಒಯ್ಯುತ್ತಿರುವರೆಂಬದು ಅವರಿಗೆ ಸ್ವಲ್ಪವೂ ತಿಳಿಯಲಿಲ್ಲ.

ಕಟ್ಟಕಡೆಗೆ ಅವರನ್ನೊತ್ತಟ್ಟಿಗೆ ಒಯ್ದು ನಿಲ್ಲಿಸಿದರು; ಹಾಗು ಅವರ ಕಣ್ಣುಗಳನ್ನು ಬಿಚ್ಚಿದರು. ತಮ್ಮನ್ನು ಒಂದು ಚಿಕ್ಕ ಕೋಣೆಗೆ ತಂದಿರುವರೆಂಬದು ಆಗ ಅವರಿಗೆ ತಿಳಿಯಿತು. ಆ ಕೋಣೆಯೊಳಗಿನ ವ್ಯವಸ್ಥೆಯು ವಿಶೇಷ ಪ್ರಕಾರದ್ದಾಗಿರಲಿಲ್ಲ. ಆ ಕೋಣೆಯಲ್ಲೊಂದು ಸಾಮಾನ್ಯವಾದ ದೀಪವು ಉರಿಯುತ್ತಿತ್ತು. ಬ್ಲೇಕನು ತನಗೆ ಪ್ರಾಪ್ತವಾಗಿದ್ದ ಆ ಕಠಿಣ ಪ್ರಸಂಗವನ್ನು ಮರೆತು, ವಿಸ್ಮಯಭರದಿಂದ ನಾಲ್ಕೂಕಡೆಗೆ ಟಕಮಕವೆಂದು ನೋಡಹತ್ತಿದನು. ಅಷ್ಟರಲ್ಲಿ ಎದುರಿಗಿನ ಒಂದು ಪರದೆಯನ್ನು ಸರಿಸಿ, ಒಬ್ಬ ಚೀನೀಯ ಯುವಕನು ಅಲ್ಲಿಗೆ ಬಂದನು. ಅವನ ಮೈಮೇಲೆಲ್ಲ ಚೀನೀಯರ ಉಡಿಗೆ-ತೊಡಿಗೆಗಳಿದ್ದವು. ಅವನು ಇಪ್ಪತ್ತೈದು-ಇಪ್ಪತ್ತಾರಕ್ಕಿಂತ ಹೆಚ್ಚು ದೊಡ್ಡವನಾಗಿರಲಿಲ್ಲ. ಅವನೊಬ್ಬ ಚೀನೀ ಫಿರಂಗಿಯಾಗಿದ್ದನು; ಅಂದರೆ, ಯುರೋಪಿಯನ್ನ-ಚೀನೀಯರ ಮಿಶ್ರ ರಕ್ತದಿಂದ ಹುಟ್ಟಿದವನೆಂಬದು ಆತನ ಮೈಬಣ್ಣದಿಂದಲೇ ಬ್ಲೇಕನು ಗುರತಿಸಿದನು. ಬ್ಲೇಕನು ಅವನನ್ನು ಇದು ಮೊದಲೆಂದೂ ನೋಡಿರದಿದ್ದರೂ, ಈ ಯುವಕನೇ ಚಾಯ್ನಾ ಫೀಲ್ಡಿನ ಸಿಂಹನಾದ ಉಷಂಡ ಚೆಂಡನೆಂಬ ಚೀನೀಯ ವಿದ್ರೋಹಿಗಳ ಮುಖ್ಯಸ್ಥನೆಂದು ತಿಳಕೊಂಡನು.

ಉಷಂಡ ಚೆಂಡನು ಅಲ್ಲಿಯದೊಂದು ಖುರ್ಚಿಯ ಮೇಲೆ ಕುಳಿತು ಬೇಫಿಕೀರ ದೃಷ್ಟಿಯಿಂದ ಬ್ಲೇಕ ಡೆಭೆನಟರನ್ನು ಆಪಾದಮಸ್ತಕದ ವರೆಗೆ ನಿರೀಕ್ಷಿಸಿ: "ಇದುವರೆಗೆ ನಿಮ್ಮ ಲೀಲಾನಾಟಕವು ಭರದಿಂದ ನಡೆದದ್ದು ಬಹು ಸಂತೋಷಕರವು. ಬೌದ್ಧಿಕ ಯುದ್ಧದಲ್ಲಿ ಕಡೆಗೆ ನಾನೇ ಗೆದ್ದಂತಾಯಿತು. ನೀವು ಬಹು ಮೂರ್ಖರೆಂದೇ ನಿಮ್ಮ ಪತ್ರಿದಾರಿಯ ಕಸಬಿನಿಂದ ನನ್ನನ್ನು ಹಿಡಿಯುತ್ತೇನೆಂದು ತಿಳಕೊಂಡದ್ದು. ಎಲೈ ರಾಬರ್ಟ ಬ್ಲೇಕನೇ, ನೀನು ಕಪಟ ವೇಷವನ್ನು ಧರಿಸಿದರೂ ನಾನು ನಿನ್ನನ್ನು ಗುರತಿಸಿದೆನು. ನಿನ್ನ ಎಲ್ಲ ಕೌಶಲ್ಯವು ಇಂದಿಗೆ ವ್ಯರ್ಥವಾಗಿ ಹೋಯಿತು. ನಿನ್ನ ಗುಪ್ತಹೇರನಾದ-ನಮ್ಮ ಸ್ವಜಾತಿದ್ರೋಹಿಯಾದ ಚಾಉ-ಇಯಾಂಗನೂ ನಿನ್ನ ಅನುಚರನಾದ ಸ್ಮಿಥನೆಂಬ ಪೋರನೂ ನನ್ನಿಂದ ಸೆರೆಹಿಡಿಯಲ್ಪಟ್ಟಿರುತ್ತಾರೆ. ಇನ್ಸಪೆಕ್ಟರ ಡೆಭೆನಟನೇ, ನೀನು ಯಾರು? ಎಂಥ ಮನುಷ್ಯನು? ಎಂಬದು ನನಗರಿಯದ ವಿಷಯವಾಗಿಲ್ಲ. ನಿನ್ನೆಯ ದಿವಸ

ದಲ್ಲಿ ನಾನು ನಿನ್ನ ಪ್ರಿಯಪುತ್ರನಾದ ರಿಚರ್ಡನನ್ನು ಕೌಶಲ್ಯದಿಂದ ಸೆರೆಹಿಡಿದಿದ್ದು, ಇಂದು ನೀನಾಗಿಯೇ ನನ್ನ ಬಲೆಯಲ್ಲಿ ಒಂದು ಬಿದ್ದಿರುತ್ತೀಯೆ."

ಅದಕ್ಕೆ ಇನ್ಸಪೆಕ್ಟರ ಡೆಭೆನಟನು ಉತ್ತರ ಕೊಡುತ್ತಾನೆ:— "ಅಹುದು; ದಸ್ಯುಗಳು ಕೆಲ-ಕೆಲವು ಪ್ರಸಂಗಗಳಲ್ಲಿ ವಿಜಯ ಹೊಂದಿದ್ದರಿಂದ, ತಾವು ದಿಗ್ವಿಜಯಿಗಳಾದೆವೆಂದು ತಿಳಿಯುತ್ತಿರುತ್ತಾರೆ. ನೀನು ಒಂದು ವೇಳೆ ನನ್ನ ಇಲ್ಲವೆ ನನ್ನ ಮಗನ ನಾಶಕ್ಕೆ ಕಾರಣನಾದರೆ ನಿನಗೆ ಗಲ್ಲಿನಶಿಕ್ಷೆಯೇ ವಿಧಿಸಲಾಗುವದು."

"ಡೆಭೆನಟಾ, ನಾನು ನಿನ್ನೀ ಮಾತಿಗೆ ಅಂಜುವೆನೆಂದು ತಿಳಿದಿರುತ್ತೀಯೇನು? ಇಂದು ರಾತ್ರಿಯಲ್ಲಿ ಪೋಲೀಸರು ನಿನಗೆ ಸಹಾಯವನ್ನೀಯಲಿಕ್ಕೆ ಬರಲಾರರು. ಯಾಕಂದರೆ, ಅವರಿಗೆ ಇದಾವ ಸುದ್ದಿಯೂ ತಿಳಿದಿರುವದಿಲ್ಲ."

"ನನ್ನ ಮಗನನ್ನಿಟ್ಟಿರುವದಾದರೂ ಎಲ್ಲಿ? ಅವನಿಗೆ ತೊಂದರೆಯನ್ನೇನಾದರೂ ಕೊಟ್ಟಿರುವೆಯೇನು?" ಎಂದು ಇನ್ಸಪೆಕ್ಟರನು ಬಳ್ಳೇ ಸಿಟ್ಟಿನಿಂದ ಪ್ರಶ್ನೆ ಮಾಡಲು,

"ಆತನೂ ಬ್ಲೇಕನ ಆ ಅನುಚರನೂ ಇದು ವರೆಗೂ ಜೀವಂತವಾಗಿರುವರು; ಆದರೆ ಅವರುಗಳ ಕಡೆಗಾಲವು ತೀರ ಸಮೀಪಿಸಿದೆ. ನೀವುಗಳೆಲ್ಲರೂ ಒಮ್ಮೆಲೆ ಕೊಲ್ಲಲ್ಪಡುವಿರಿ." ಹೀಗೆಂದು ಹೇಳಿ, ಉದ್ದಂಡ ಚಂಡನು ತನ್ನ ಕಡೆಯವರಿಗೆ ಮೆಲ್ಲನೆ ಏನನ್ನೋ ಹೇಳಿದನು ಆ ಕೂಡಲೆ ಅವರೆಲ್ಲರೂ ಅಲ್ಲಿಂದ ಹೊರಟು ಹೋದರು. ಬ್ಲೇಕನು ಆತನ ಅಭಿಪ್ರಾಯವನ್ನು ತಿಳಿದುಕೊಂಡನು. ಸಾಮ್ಯುಯಲ್ ರಾಬರ್ಟಸನಿಂದ ಈ ಮೊದಲು ಯಾವ ಗುಪ್ತ ವಿಷಯವನ್ನು ಅವನು ತಿಳಿದಿದ್ದನೋ, ಅದೆಲ್ಲವೂ ಆಗ ಬ್ಲೇಕನ ಮನಸ್ಸಿನಲ್ಲಿ ಬಂದಿತು. ಅದರಿಂದ ಅವನಲ್ಲಿ ಒಂದಿಷ್ಟು ಆಶೆಯ ಅಂಕುರವೂ ಹುಟ್ಟಿತು. ಅವನು ಆ ಗುಪ್ತ ಸಂಗತಿಯನ್ನು ಯಾರ ಮುಂದೂ ಒಡನುಡಿಯಲಿಕ್ಕಿಲ್ಲೆಂದು ಸಂಕಲ್ಪ ಮಾಡಿಕೊಂಡಿದ್ದನು; ಆದರೂ ತನ್ನ ಪ್ರಾಣಕ್ಕೊದಗಿದ ಅತಿ ಕಠಿಣವಾದ ಆ ಪ್ರಸಂಗದಲ್ಲಿ ಅವನು ಅದನ್ನು ಹಾಗೆಯೇ ಮನಸ್ಸಿನಲ್ಲಿ ಗುಪ್ತವಾಗಿರಿಸಿಕೊಳ್ಳಲಿಕ್ಕೆ ಒಪ್ಪಲಿಲ್ಲ.

ಬಳಿಕ ಬ್ಲೇಕನು ಡೆಭೆನಟನ ಕಿವಿಯಲ್ಲಿ ಮೆಲ್ಲಮೆಲ್ಲನೆ:—"ಡೆಭೆನಟರೆ, ನಿಮ್ಮ ರಿಚರ್ಡನಿಗೆ ನಿಮ್ಮ ಪ್ರಾಚೀನ ಇತಿಹಾಸ ಗೊತ್ತಿದೆಯೇನು? ಇಪ್ಪತ್ತೈದು ವರ್ಷಗಳ ಮುಂಚೆ ಚೀನ ದೇಶದೊಳಗಿನ ಕ್ಯಾಂಟನ್ ಪಟ್ಟಣದ ಆ ನಿಮ್ಮ ಚೀನೀಯ ಹೆಂಡತಿಯ ಸಂಗತಿಯು ಆತನಿಗೆ ಗೊತ್ತಿದೆಯೆ?"

ಡೆಭೆನಟ:—"ಇಲ್ಲ. ನನ್ನ ಪ್ರಿಯಪುತ್ರನೆದುರಿಗೆ ಆ ಅಪ್ರಿಯಕರ ಪ್ರಸಂಗದ ಸಂಗತಿಯನ್ನು ಹೇಳಿರುವದಿಲ್ಲ. ಇಷ್ಟೇ ಅಲ್ಲ, ಈ ಇಂಗ್ಲಂಡ ದೇಶದೊಳ

ಗಿನ ಯಾವನಿಗೂ ಆ ಸಂಗತಿಯು ಅವಗತವಾಗಿಲ್ಲ. ಯಾಕಂದರೆ, ಆ ನನ್ನ ತರುಣ ವಯಸ್ಸಿನೊಳಗಿನ ಉಚ್ಛೃಂಖಲ ಸಂಗತಿಯು ಯಾರ ಮುಂದೆ ತಿಳಿಸಲಿಕ್ಕೂ ಯೋಗ್ಯವಾಗಿರುವದಿಲ್ಲ.''

"ನನ್ನ ಅನುಮಾನವು ನಿಜವಾದರೆ ನೀವು ಇಂದು ಆ ವಿಷವೃಕ್ಷದ ಫಲ ಭೋಗವನ್ನು ಉಣ್ಣುವದಕ್ಕೆ ಸಿದ್ಧರಾಗಬೇಕಾಗುವದು."

''ನೀವು ಅನ್ನುವದಾದರೂ ಏನು? ನನ್ನ ಪೂರ್ವ ವಯಸ್ಸಿನೊಳಗಿನ ಆ ಪ್ರಣಯ ಕಥೆಗೂ ಸದ್ಯಕ್ಕೆ ನನಗುಂಟಾದ ಸಂಕಟಕ್ಕೂ ಸಂಬಂಧವೇನು?''

''ನಿಮಗೆ ಅದೆಲ್ಲವೂ ಬೇಗನೆ ತಿಳಿಯ ಬರುವದು. ನಾವು ಇಂದು ಈ ಬಗೆಯಾಗಿ ವಿಪನ್ನಾವಸ್ಥೆಗೀಡಾಗದಿದ್ದರೆ, ಆ ಅಪ್ರೀತಿಕರ ಪ್ರಸಂಗದ ಬಗ್ಗೆ ಆಲೋಚಿಸುವ ಕಾರಣವೇ ಉಂಟಾಗುತ್ತಿರಲಿಲ್ಲ.''

ಪರಕ್ಷಣದಲ್ಲಿಯೇ ಆ ಕೋಣೆಯ ಬಾಗಿಲವು ತೆರೆಯಲ್ಪಟ್ಟಿತು. ನಾಲ್ಕಾರು ಜನ ಚೀನೀಯ ದಸ್ಯುಗಳು ಹಗ್ಗಗಳಿಂದ ಹೆಡಮುರಿಗೆ ಬಿಗಿಯಲ್ಪಟ್ಟಂಥ ರಿಚರ್ಡನನ್ನೂ ಸ್ಮಿಥನನ್ನೂ ಅಲ್ಲಿಗೆ ಕರೆತಂದು ನಿಲ್ಲಿಸಿದರು. ಬ್ಲೇಕ-ಡೆಭೆನಟರೂ ಹೆಡಮುರಗೆ ಬಿಗಿಸಿಕೊಂಡು ಅಲ್ಲಿ ನಿಂತದ್ದನ್ನು ಕಂಡು ಸ್ಮಿಥ-ರಿಚರ್ಡರ ಹೌಹಾರಿತು! ತಮ್ಮಗಳ ಬಂಧಮುಕ್ತತೆಯ ವಿಷಯವಾಗಿ ಇದುವರೆಗೆ ಅವರಿಗೆ ಯಾವ ಆಶಾಂಕುರವು ತೋರುತ್ತಿದ್ದಿತೋ, ಅದು ಒಮ್ಮೆಲೆ ಕಮರಿ ಕಾಕಿಟ್ಟಿತು!

ಬಳಿಕ ಉಷಂಡ ಚಂಡನು ಅವರನ್ನುದ್ದೇಶಿಸಿ:—''ಎಲೈ ಜನಪ್ರಾಣಿಗಳೇ, ನಿಮ್ಮ ದೈವದಲ್ಲೇನಿದೆಯೆಂಬದನ್ನು ಕೇಳಿಕೊಳ್ಳಿರಿ. ನೀವೆಲ್ಲರೂ ನನ್ನ ಪರಮ ವೈರಿಗಳು. ನೀವೆಲ್ಲರೂ ನನ್ನ ಪ್ರತಿಯೊಂದು ಸಂಕಲ್ಪವನ್ನು ಸುಟ್ಟು ಸೂರೆಗೊಳ್ಳಲಿಕ್ಕೆ ಪ್ರಯತ್ನಿಸಿದವರು. ನಿಮ್ಮ ವಿಷಯಕ್ಕೆ ನನ್ನಲ್ಲಿ ಲವಮಾತ್ರವೂ ದಯೆಯು ಹುಟ್ಟಲಾರದು. ನನ್ನ ಅಪ್ಪಣೆಯ ಮೇರಗೆ ನಿಮ್ಮೆಲ್ಲರನ್ನೂ ಇನ್ನು ಒಂದು ತಾಸಿನೊಳಗಾಗಿಯೇ ಸಂಹರಿಸಿ ಬಿಡುವರು; ಹಾಗು ನಾಳೆ ಬೆಳಗಾಗುವಷ್ಟರಲ್ಲಿ ನಿಮ್ಮೆಲ್ಲರ ಹೆಣಗಳು ಟೇಮ್ಸ ನದಿಯಲ್ಲಿ ತೇಲಾಡುತ್ತಿರುವದನ್ನು ಕಾಣಬಹುದು. ನನ್ನ ಬೇರೆ ಎಲ್ಲ ಹಗೆಗಳು ಈ ಮೊದಲೇ ಯಾವ ದಾರಿ ಹಿಡಿದು ಹೋಗಿರುವರೋ, ನೀವಾದರೂ ಅದೇ ದಾರಿಯ ದಾರಿಕಾರರಾಗುವಿರಿ.''

ಆ ಎಲ್ಲ ಸೆರೆಯಾಳುಗಳನ್ನು ಬೇರೆ ಕಡೆಗೆ ಒಯ್ಯಬೇಕೆಂಬ ಸಂಜ್ಞೆಗಾಗಿ ಉಷಂಡ ಚಂಡನು ತನ್ನ ಬಲಗೈಯನ್ನು ಮೇಲಕ್ಕೆತ್ತಿದೊಡನೆಯೆ, ಬ್ಲೇಕನು ಏನನ್ನೋ ಹೇಳುವದಕ್ಕೆಂದು ಒಂದರಡು ಹೆಜ್ಜೆ ಮುಂದಕ್ಕೆ ಸರಿದನು. ಅದನ್ನು ಕಂಡು ಅವನು ತನ್ನ ಆ ಕೈಯನ್ನು ಕೆಳಗೆ ಮಾಡಿದನು.

ಆಗ ಬ್ಲೇಕನು:—"ನಾನು ನಿನಗೆ ಒಂದೆರಡು ಮಾತು ಹೇಳಬೇಕಾಗಿದೆ. ಅವುಗಳನ್ನು ಕೇಳಿಕೊಳ್ಳಲೇ ಬೇಕೆಂದು ನಾನು ನಿನ್ನನ್ನು ಒತ್ತಾಯಪಡಿಸದಿರಲಾರೆನು. ನೀನು ಚೀನ ದೇಶದ ಕ್ಯಾಂಟನ್ನ ಪಟ್ಟಣದಲ್ಲಿದ್ದ ಸಿತಾಓಳ ಭಗಿನಿಯ ಮಗನಾದ ಫ್ಯಾನ್ ಚಂಡನಹುದೋ-ಅಲ್ಲವೋ? ಎಂಬದನ್ನು ನಾನು ತಿಳಿಯಲಪೇಕ್ಷಿಸುತ್ತೇನೆ."

ಅದನ್ನು ಕೇಳಿ ಉಷಂಡ ಚಂಡನು ತುಸ ಗಾಬರಿಗೊಂಡ ದನಿಯಿಂದ:- "ಆ ಪಂಚಾಯತಿಯು ನಿನಗೇತಕ್ಕೆ?"

"ನನಗದರ ಅವಶ್ಯಕತೆಯಿದೆಯೆಂದೇ ನಾನದನ್ನು ಕೇಳಿರುವೆನು. ನೀನು ನಿಜ ಸಂಗತಿಯನ್ನು ಹೇಳುವಿಯಾ?"

"ಒಳ್ಳೇದು. ನಿನ್ನ ಅಂಬೋಣದಂತೆ ಒಂದು ಕಾಲದಲ್ಲಿ ನನ್ನ ಹೆಸರು ಅದೇ ಇತ್ತೆಂಬದನ್ನು ನಾನು ಒಪ್ಪದಿರಲಾರೆನು; ಆಗ ಹಾಗಿದ್ದರೂ ಈಗಿನ ನನ್ನ ಹೆಸರು ಉಷಂಡ ಚಂಡನೆಂದಿದೆ."

"ನಿನ್ನ ಹೆಸರು ಫ್ಯಾನ್ ಚಂಡನಿದ್ದುದನ್ನು ನೀನು ಒಪ್ಪುತ್ತಿರುವೆ. ನಿನ್ನ ಅಧಃಪತನವು ಹೇಗಾಗಿದೆಯೋ: ಹಾಗೆಯೇ ಅನೇಕ ಜನರಿಗೂ ಆಗುತ್ತಿರುತ್ತದೆ. ಪ್ರತ್ಯಕ್ಷ ನರಹತ್ಯೆ ಮಾಡಿದರೂ ಅವರಿಗೆ ಒಂದಿಷ್ಟು ಅನುತಾಪವಾಗುತ್ತಿರುವದಿಲ್ಲ; ಆವರೆ ತಂದೆಯನ್ನಾಗಲಿ, ಅಣ್ಣ-ತಮ್ಮಂದಿರನ್ನಾಗಲಿ ಕೊಲ್ಲುವಂತಹ ನರಪಶುವು ಈ ಭೂಮಂಡಲದಲ್ಲಿಯ ಯಾವುದೊಂದು ದೇಶದಲ್ಲಿರುವನೋ-ಇಲ್ಲವೋ? ಎಂಬದನ್ನು ನಾನರಿಯೆನು. ಇಂದು ನೀನು ನಿನ್ನ ತಂದೆಯನ್ನು ಕೊಲ್ಲಲುದ್ಯುಕ್ತನಾಗಿರುತ್ತೀ; ಅಲ್ಲದೆ ನಿನ್ನ ತಾಯಿಯ ಸವತಿಯ ಮಗನನ್ನೂ-ಅಂದರೆ ನಿನ್ನ ತಮ್ಮನನ್ನೂ-ಕೊಲ್ಲುವ ಸಂಕಲ್ಪ ಮಾಡಿರುತ್ತೀ."

ಉಷಂಡ ಚಂಡನು ಗಾಬರಿಯಿಂದ:—"ಏನೆನ್ನುವೆ? ನಾನು ಪಿತೃಹತ್ಯೆ-ಭ್ರಾತೃಹತ್ಯೆಗಳಿಗೆ ತೊಡಗಿರುವೆನೇ? ಬ್ಲೇಕರೇ, ನೀವು ಇದನ್ನೆಲ್ಲ ಅನ್ನುವದಾದರೂ ಯಾರಿಗೆ?" ಎಂದು ಕೇಳಿದನು.

"ನಾನು ಸತ್ಯವನ್ನೇ ನುಡಿಯುತ್ತಿರುವೆನು. ಈ ಇನ್ಸಪೆಕ್ಟರ ಡೆಭೆನಟನೇ ನಿನ್ನ ತಂದೆಯು; ಮತ್ತು ಈತನ ಮಗನಾದ ರಿಚರ್ಡನೇ ನಿನ್ನ ಸಾಪತ್ನ ಭ್ರಾತೃವು-ನಿನ್ನ ತಾಯಿಯ ಈ ದೇಶದ ಸವತಿಯ ಗರ್ಭದಲ್ಲಿ ಹುಟ್ಟಿದ ಮಗನು."

"ಇದು ಕಟ್ಟುಕಥೆಯು. ನಿಜವಲ್ಲ. ಜೀವವುಳಿಸಿಕೊಳ್ಳಲಿಕ್ಕೆಂದು ಎಷ್ಟೋ ಜನರು ತಂದೆ-ಅಣ್ಣ-ತಮ್ಮಂದಿರಾಗುತ್ತಿರುತ್ತಾರೆ. ನಿನ್ನ ಮಾತುಗಳನ್ನು ಪ್ರಮಾಣಿಸಿ ನೋಡದೆ ನಂಬುವಂತಹ ಮೂರ್ಖನು ನಾನಲ್ಲ. ನನ್ನ ತಂದೆಯ ಹೆಸರು ಜನ ಮೆರಿಡಿಥ್ ಎಂದಿತ್ತೆಂಬದನ್ನು ನಾನು ಕೇಳಿದ್ದೇನೆ. ಅವನು ಚೀನ

ದೇಶಕ್ಕೆ ಬಂದಿದ್ದ ಓರ್ವ ಇಂಗ್ಲಿಷ ಗೃಹಸ್ಥನಾಗಿದ್ದನಂತೆ.''

''ನಿನ್ನೆದುರಿಗೆ ನಿಂತುಕೊಂಡಿರುವ ಈ ಡೆಭೆನಟನೇ ಆ ಜನ ಮೆರಿಡಿಥನು. ಆ ಹೆಸರಿನಿಂದಲೇ ಇಪ್ಪತ್ತೈದು ವರ್ಷಗಳ ಮುಂಚೆ ಈತನು ಕ್ಯಾಂಟನ್‌ಪಟ್ಟಣದಲ್ಲಿ ನಿನ್ನ ತಾಯಿಯಾದ ಸುಲಾಇಓಳನ್ನು ಮದುವೆಯಾಗಿದ್ದನು. ಈತನ ಸದ್ಯದ ಹೆಸರು ಮರ್ಟನ್ ಡೆಭೆನಟನೆಂದಿರುತ್ತದೆ.''

ಸಮೀಪದಲ್ಲೇ ನಿಂತಿದ್ದ ಲಿಚರ್ಡನು ಈ ಅದ್ಭುತ ಸಂಗತಿಯನ್ನು ಕೇಳಿ, ವಿಸ್ಮಯಭರದಿಂದ ತಾನು ಸದ್ಯಕ್ಕೆ ಯಾವ ಕಡು ದುಃಖಕ್ಕೀಡಾಗಿರುವೆನೆಂಬುದನ್ನು ಕೂಡ ಮರೆತು ಬಿಟ್ಟನು! ಇನ್ಸಪೆಕ್ಟರ ಡೆಭೆನಟನು ಮೋರೆ ಕೆಳಗೆ ಮಾಡಿಕೊಂಡು ಪಿಟ್ಟನ್ನದೆ ನಿಂತುಕೊಂಡಿದ್ದನು.

ಆಗ ಉಪಂಡ ಚಂಡನು:—''ಬ್ಲೇಕರೇ, ಇದು ಬಹು ಅದ್ಭುತವಾದ ಸಂಗತಿಯೇ ಸರಿ. ನೀವು ಹೇಳುವದು ಸತ್ಯ-ಸತ್ಯವೇ? ಹೀಗಿರುವದು ಸಂಭವವಾದರೂ ಉಂಟೇ?''

''ಸಟಿಯೋ-ದಿಟವೋ? ಎಂಬ ಒಗ್ಗೆ ನೀನು ನಿನ್ನೀ ತಂದೆಯನ್ನೇ ಕೇಳಿಕೋ. ಈ ವಿಷಯದಲ್ಲಿ ನಾನು ಒಂದಕ್ಕರವನ್ನಾದರೂ ಸುಳ್ಳಾಡಿರುವದಿಲ್ಲ.''

''ಅಹುದು. ಚೀನದೇಶದ ಪ್ರವಾಸದಲ್ಲಿ ಕ್ಯಾಂಟನ್ನ ಪಟ್ಟಣದಲ್ಲಿ ನಾನು ಜನ ಮೆರಿಡಿಥನೆಂಬ ಹೆಸರನ್ನೇ ಧರಿಸಿದ್ದೆನು'' ಎಂದು ಡೆಭೆನಟನು ಹೇಳಿದನು.

''ನೀನು ಆ ಪಟ್ಟಣದಲ್ಲಿಯ ಸುಲಾಇಓ ಎಂಬ ಹೆಸರಿನ ಚೀನೀಯ ಯುವತಿಯನ್ನು ಮದುವೆಯಾಗಿದ್ದೆಯಾ? ಅವಳ ಗರ್ಭದಲ್ಲಿ ನಿನ್ನಿಂದ ಒಂದು ಗಂಡು ಕೂಸು ಹುಟ್ಟಿದ್ದಿತೋ? ' ಎಂದು ಉಪಂಡ ಚಂಡನು ಕೇಳಲು,

''ಅಹುದು; ಸುಲಾಇಓ ಎಂಬುದು ನನ್ನ ಚೀನೀಯ ಹೆಂಡತಿಯ ಹೆಸರೇ ಆಗಿತ್ತು. ಅವಳ ಗರ್ಭದಲ್ಲಿ ನನ್ನಿಂದಲೊಂದು ಗಂಡು ಕೂಸೂ ಹುಟ್ಟಿತ್ತು. ಆ ಹುಡುಗನು ಎರಡು ತಿಂಗಳ ವಯಸ್ಸಿನವನಿದ್ದಾಗಲೇ ಅವನ ತಾಯಿಯಾದ ಸುಲಾಇಓಳು ಸತ್ತು ಹೋದಳು.''

ಉಪಂಡ ಚಂಡನು ಕ್ಷಣಕಾಲವೇ ಸ್ತಂಭಿತನಾಗಿ, ಮತ್ತೆ:—ಹಾಗಾದರೆ ನೀನು ನಿಜವಾಗಿಯೂ ನನ್ನ ತಂದೆಯೇನು? ಇಷ್ಟು ದಿನಗಳ ನಂತರ ಇಂದೇ ನಾನು ನಿನ್ನನ್ನು ಕಣ್ಣಾರೆ ಕಂಡದ್ದು! ನಿನ್ನ ಎರಡನೇ ಹೆಂಡತಿಯ ಹೊಟ್ಟೆಯಲ್ಲಿ ಹುಟ್ಟಿರುವ ಈತನೇ ನನ್ನ ಸಾಪತ್ನ ಬಂಧುವೇ? ಆದರೆ ನಿಮ್ಮಂತಹ ವೈರಿಗಳು ನನಗೆ ಅನ್ಯರಾರೂ ಇರುವದಿಲ್ಲ; ನಾನು ನಿಮಗೆ ಪ್ರಾಣದಂಡಣದ ಅಪ್ಪಣೆಗೆಯ್ದ ಒಳಿಕ ನನಗೀ ಮರ್ಮಭೇದಕರ ಸಂಗತಿಯು ತಿಳಿಯಿತು.''

ಹೀಗೆಂದು ನುಡಿದು, ಉಪಂಡ ಚಂಡನು ಬ್ಲೇಕನ ಕಡೆಗೆ ಹೊರಳಿ ಒಳ್ಳೇ

ರೋಷದಿಂದ:— "ನೀನು ಇದನ್ನೆಲ್ಲ ಎಲ್ಲಿ ತಿಳಿದೆಯೆಂಬದನ್ನು ಹೇಳು ನೋಡೋಣ" ಎಂದು ಕೇಳಲು,

"ಕ್ಯಾಂಟನ್ ಪಟ್ಟಣದಲ್ಲಿಯ ಅಮೇರಿಕನ್ ಮಿಶನ್ನಿನ ಅಧ್ಯಕ್ಷನಾಗಿದ್ದ ಸಾಮ್ಯುಅಲ್ ರಾಬರ್ಟಸನ್‌ನೆಂಬ ಹೆಸರಿನ ಪಾದರಿಯ ಬಳಿಯಿಂದ ನಾನು ಇದನ್ನೆಲ್ಲ ಕೇಳಿಕೊಂಡಿರುತ್ತೇನೆ. ನಿನಗೆ ಆ ಪಾದರಿಯ ಗುರ್ತಿಲ್ಲವೆ?"

"ಬಲ್ಲೆನು; ಆದರೆ ನಿನಗಾತನ ಭೇಟಿಯೆಲ್ಲಾಯಿತು?"

"ಎರಡು ಮೂರು ದಿನಗಳ ಮುಂಚೆ ಈ ಲಂಡನ್ನ ಪಟ್ಟಣದೊಳಗಿನ ಬೇಕಾರ ಸ್ಟ್ರೀಟಿನಲ್ಲಿರುವ ನನ್ನ ಮನೆಗೆ ಅವನೇ ಬಂದಿದ್ದನು. ಕ್ಯಾಂಟನ್ ಪಟ್ಟಣದಿಂದ ಲಂಡನ್ನ ಪಟ್ಟಣಕ್ಕೆ ಹೊರಡುವ ಪೂರ್ವದಲ್ಲಿ ಅಲ್ಲಿಯ ಆತನ ಕೇವಲ ನಂಬಿಗೆಯುವನಿಂದ ಫ್ಯಾನ್‌ಚಂಡನೆಂಬ ಹೆಸರಿನ ಯಾವ ಬಾಲಕನನ್ನು ತನ್ನ ಆಶ್ರಯದಲ್ಲಿಟ್ಟುಕೊಂಡು ಸಾಕಿ, ಸಲಹಿ. ಓದು-ಬರಹ ಕಲಿಸಿ ಬುದ್ಧಿವಂತನನ್ನಾಗ ಮಾಡಿದ್ದನೋ ಆ ಫ್ಯಾನ್ ಚಂಡನೇ ಲಂಡನ್ನ ಪಟ್ಟಣದೊಳಗಿನ ಚೀನೀ ವಿದ್ರೋಹಿಗಳ ಮುಖ್ಯಸ್ಥನಿರುವನೆಂಬದು ಆತನಿಗೆ ತಿಳಿಯಿತು. ಆ ಸಂಗತಿಯು ತಿಳಿದ ಕೆಲ ದಿನಗಳಲ್ಲಿಯೇ ಆತನು ಈ ಲಂಡನ್ನ ಪಟ್ಟಣಕ್ಕೆ ಬಂದು, ಇಲ್ಲಿಯ ಬೇರೆ ಬೇರೆ ವೃತ್ತಪತ್ರಗಳಲ್ಲಿ ತಾನು ಚೀನದೇಶದಲ್ಲಿದ್ದಾಗ ಚೀನೀ ವಿದ್ರೋಹಿಗಳ ಬಗ್ಗೆ ತಿಳಿದ ಅಂದರೆ, ಸುಲಾಇಬಳ ಗರ್ಭದಲ್ಲಿ ಜನಿಸಿದ ಫ್ಯಾನ್ ಚಂಡನೆಂಬವನೇ ಇಲ್ಲಿಯ ಚೀನೀ ವಿದ್ರೋಹಿಗಳ ದಳಪತಿಯು ಎಂಬ ಸಂಗತಿಯನ್ನು ಪ್ರಕಟಿಸಿರುತ್ತಾನೆ. ಆತನು ಈ ಗೌಪ್ಯವನ್ನು ಪೋಲೀಸರಿಗೆ ತಿಳಿಸದೆ, ನನಗೇ ಹೇಳಿರುತ್ತಾನೆ. ನಿನ್ನ ವಿಷಯದ ಇದೆಲ್ಲ ಸಂಗತಿಯನ್ನು ನಾನು ಆ ಪಾದ್ರಿಯಿಂದಲೇ ತಿಳಕೊಂಡಿರುವೆನು. ಆತನು ಹೇಳಿದ್ದು ನಿಜವೋ-ಸುಳ್ಳೋ ಎಂಬದನ್ನು ನೀನೇ ಯೋಚಿಸು.'

"ಆ ರಾಬರ್ಟಸನ್ ಪಾದ್ರಿಯ ಮಾತು ಸಟಿಯೇ ಇರಲಿ-ದಿಟವೇ ಇರಲಿ, ಆದರೆ ಈ ಇನ್ಸಪೆಕ್ಟರ ಡೆಭಿನಟನೇ ಇಪ್ಪತ್ತೈದು ವರ್ಷಗಳ ಮುಂಚೆ ಚೀನ ದೇಶಕ್ಕೆ ಪ್ರಯಾಣ ಬೆಳೆಸಿದ ಜನ ಮೆರಿಡಿಥನೆಂಬದನ್ನು ನೀವು ತಿಳಿದ ಬಗೆಹೇಗೆ?"

"ಇವರು ಚೀನ ದೇಶಕ್ಕೆ ಹೋಗಿ ನಿನ್ನ ತಾಯಿಯನ್ನು ಲಗ್ನವಾಗುವ ಮೊದಲೇ ನನ್ನ-ಇವರ ಪರಿಚಯುವಾಗಿದ್ದಿತು. ಇಪ್ಪತ್ತೈದು ವರ್ಷಗಳ ಮುಂಚೆ ನಾನು ಒಂದು ವಿಶೇಷ ಕೆಲಸಕ್ಕೆಂದು ಚೀನದೇಶಕ್ಕೆ ಹೋಗಿರಲು, ಒಂದು ದಿನ ರಾತ್ರಿ ಅಡ್ಡಾಡುತ್ತ-ಡ್ಡಾಡುತ್ತ ಕ್ಯಾಂಟನ್ ಪಟ್ಟಣದ ಬದಿಯ ಚೀನಾಪಳ್ಳಿಗೆ ಹೋಗಿದ್ದೆನು ಅಷ್ಟರಲ್ಲಿ ಅಲ್ಲಿಯ ಒಂದು ಕತ್ತಲೆ ಮುಸುಕಿದ ಕೂಟದಲ್ಲಿಯ ಕೆಲ ಚೀನೀಯ ಪುಂಡರು ವಿದೇಶೀಯನೆಂದು ನನ್ನನ್ನು ತಿರಸ್ಕರಿಸಿ, ನನ್ನನ್ನು

ಕೊಲ್ಲಲಿಕ್ಕೆಂದು ಸುತ್ತುಗಟ್ಟಿದರು. ಕೂಡಲೆ ನಾನು ನನ್ನ ಜೀವವುಳಿಸಿಕೊಳ್ಳ ಲಿಕ್ಕೆಂದು ಒತ್ತಟ್ಟಿಗಿನ ಒಂದು ದಾರಿ ಹಿಡಿದು ಓಡುತ್ತಿರಲು, ಅವರು ನನ್ನನ್ನು ಬೆನ್ನಟ್ಟಿ ಒರಹತ್ತಿದರು. ಅಷ್ಟರಲ್ಲಿ ಅಲ್ಲಿಯ ಒಂದು ಮನೆಯ ಬಾಗಿಲೆದುರಿಗೆ ಸಹಜವಾಗಿ ನಿಂತುಕೊಂಡಿದ್ದ ಚೀನೀಯ ವೇಷದ ಇವನು ನನಗೆ ತಮ್ಮ ಮನೆ ಯಲ್ಲಿ ಆಶ್ರಯವನ್ನಿತ್ತನು. ಅದರಿಂದ ನಾನು ಅಂದಿನ ಪ್ರಾಣಸಂಕಟದಿಂದ ಪಾರಾದೆನು. ಒಳಗೆ ಹೋದ ಮೇಲೆ ಇವನು ತನ್ನ ನಿಜ ಸಂಗತಿಯನ್ನು ತಿಳಿಸಿ ದನು. ಅದೇ ಕಾಲಕ್ಕೆ ಇವನು ತಾನೊಬ್ಬ ಚೀನೀಯ ಯುವತಿಯನ್ನು ಲಗ್ನ ವಾದುದರಿಂದ ತಾನು ಹೀಗೆ ಈ ಚೀನೀಪಳ್ಳಿಯಲ್ಲಿ ಚೀನೀಯರ ವೇಷದಿಂದ ವಾಸಿಸುತ್ತೇನೆಂದು ಹೇಳಿದ್ದನು; ಮತ್ತು ತಾನು ಇಲ್ಲಿ ಜನ ಮೆರಿಡಿಥ್‌ನೆಂಬ ಹೆಸರನ್ನಿಟ್ಟುಕೊಂಡಿರುವೆನೆಂದೂ ತಿಳಿಸಿದ್ದನು.''

ಬ್ಲೇಕನು ಹೇಳಿದ ಆ ಸಂಗತಿಗಳನ್ನೆಲ್ಲ ಕೇಳಿ ಉಷಂಡ ಚಂಡನು ಸ್ತಬ್ಧ ನಾಗಿ ಬಿಟ್ಟನು. ಆ ಗುಪ್ತ ಸಂಗತಿಗಳನ್ನು ಕೇಳಿ ಅವನ ಅಂತರಂಗದಲ್ಲಿ ಯಾವ ಭಾವನೆಯು ಸಂಚಾರವಾಯಿತೆಂಬುದು ಆತನ ಮುಖಾವಲೋಕನದಿಂದ ಬ್ಲೇಕ ನಿಗೆ ಅನುಮಾನವಾಗಲಿಲ್ಲ. ಪರಕ್ಷಣದಲ್ಲಿಯೇ ಉಷಂಡ ಚಂಡನ ಕಣ್ಣುಗಳು ತಿರಸ್ಕಾರದಿಂದಲೂ ಸಿಟ್ಟಿನಿಂದಲೂ ಕಿಡಿ ಸುರಿಸಹತ್ತಿದವು. ಅವನು ಒಳ್ಳೇ ರೋಷದಿಂದ ಎದ್ದು ನಿಂತು, ಇನ್ಸಪೆಕ್ಟರ ಡಭೆನಟನನ್ನು ಕುರಿತು:— ''ನೀನೇ ನನ್ನ ತಂದೆಯೆಂಬ ವಿಷಯದಲ್ಲಿ ಇನ್ನು ಅನುಮಾನವುಳಿಯಲಿಲ್ಲ; ಆದರೆ ನನಗೆ ಜನ್ಮಕೊಟ್ಟ ತಂದೆಯಾಗಿದ್ದರೂ ನೀನು ನಿನ್ನೀ ಮಗನ ವಿಷಯದ ಕರ್ತವ್ಯವನ್ನು ಮಾಡಿರುವುದಿಲ್ಲ. ನಿನ್ನ ಅವಹೇಲನೆಯ-ಉಪೇಕ್ಷೆಯ ಯೋಗದಿಂದಲೆ ನನ್ನ ಬಾಲ್ಯ ಕಾಲದ ಎಲ್ಲ ಉಚ್ಚ ಅಭಿಲಾಷೆಗಳು ವ್ಯರ್ಥವಾದವು. ತಂದೆಯ ಸ್ನೇಹ, ಪ್ರಯತ್ನ ಮತ್ತು ಆದರಗಳ ಅಭಾವದಿಂದಲೂ ಪ್ರತಿ ನಿತ್ಯದ ದುಃಸಹವಾದ ದಾರಿದ್ರ್ಯದ ಬಾಳಿ ನಿಂದಲೂ ಬಳಲಿದ ನಿನ್ನೀ ಮಗನು ಇಂದಿನ ಈ ಅಧೋಮಾರ್ಗಕ್ಕೆಳಿಸಿರುವನು. ಈ ನನ್ನ ಅಧಃಪಾತಕ್ಕೆ ನೀನೇ ಸಂಪೂರ್ಣವಾಗಿ ಹೊಣೆಗಾರನು. ನೀನು ಸಾಮಾ ಜಿಕ ನಿಯಮಗಳನ್ನುಲ್ಲಂಘಿಸಿ, ಭವಿಷ್ಯತ್ಕಾಲದ ಫಲಾಫಲಗಳನ್ನು ಯೋಚಿಸದೆ, ನನ್ನ ತಾಯಿಯೊಡನೆ ಲಗ್ನವಾದೆ. ನಿನ್ನ ಆಗಿನ ಆ ಕ್ಷಣಿಕ ಮೋಹ-ಪ್ರೇಮ ಗಳ ಫಲವೇ ನನ್ನನ್ನು ಈ ಘೋರವಾದ ದುರ್ಗತಿಗೂ ದುಃಖಕ್ಕೂ ಈಡು ಮಾಡಿ ರುತ್ತದೆ. ನನ್ನ ತಾಯಿಯ ಮರಣದ ನಂತರ ನನ್ನನ್ನು ಸಂರಕ್ಷಿಸುವದು ನನ್ನ ಜನ್ಮಗತ ಅಧಿಕಾರ-ಮರ್ಯಾದೆಯನ್ನು ಕಾಪಾಡಿ ನನಗೆ ಯಥಾ ಯೋಗ್ಯವಾದ ಶಿಕ್ಷಣ ಕೊಡುವದು ನಿನ್ನ ಕರ್ತವ್ಯವಾಗಿತ್ತು; ಆದರೆ ಅಪ್ಪಾ, ನೀನು ನಿನ್ನ ಆ ಕರ್ತವ್ಯಕರ್ಮವನ್ನು ಪರಿಪಾಲಿಸಿರುತ್ತೀಯೇನು? ನೀನು ನನ್ನನ್ನು ನಿನ್ನ ಮಗ

ನೆಂದು ಹೇಳಿಕೊಳ್ಳಲಿಕ್ಕೆ ಕೂಡ ನಾಚಿಕೊಂಡು, ನನ್ನನ್ನು ನನ್ನ ಅಜ್ಜಿಯ ವಶ ಕ್ಕೊಪ್ಪಿಸಿದ್ದದ್ದೇ ಶಕ್ಯ ಓಡಿ ಬಂದೆ. ಆ ಮೇಲೆ ನೀನು ಒಂದು ದಿವಸವಾದರೂ ನನ್ನ ಒಗ್ಗೆ ವಿಚಾರಿಸಿದಯೇನು? ನೀನು ನನ್ನ ಉಪಜೀವಿಕೆಗೆಂದು ಕ್ಯಾಂಟನ್ ಪಟ್ಟಣ ದೊಳಗಿನ ಒಂದು ಬ್ಯಾಂಕಿನಲ್ಲಿ ಸಾಕಷ್ಟು ಹಣ ಶೇಖರಿಸಿಟ್ಟಿದ್ದೀನೋ ನಿಜ; ಆದರೆ ಮುಂದೆ ಕೆಲ ದಿನಗಳಲ್ಲಿಯೇ ಆ ಬ್ಯಾಂಕು ಪದ್ಧತಿಯ ಮೇರೆಗೆ ದಿವಾಳಿ ಹೊಡೆ ಯಿತು. ಅಂದಿನಿಂದ ನನ್ನ ಕಷ್ಟಗಳಿಗೆ ಮೇರೆಯೇ ಉಳಿಯದಾಯಿತು!''

'ಅಷ್ಟು ಖಾತ್ರಿಯು ಆ ಬ್ಯಾಂಕೂ ದಿವಾಳಿ ಹೊಡೆಯಿತೆ? ಇದು ಒಹು ಆಶ್ಚರ್ಯದ ಸಂಗತಿಯಾಗಿದೆ. ನನಗೆ ಆ ಯಾವ ಸಂಗತಿಯೂ ಗೊತ್ತಿಲ್ಲ.'' ಡೆಭೆ ನಟನೆಂದನು.

''ಅದಕ್ಕಾಗಿ ನಾನು ಕ್ಷೋಭೆಗೊಳ್ಳಲಿಲ್ಲ. ಬ್ಯಾಂಕಿನಿಂದ ಕಾಲಕಾಲಕ್ಕೆ ದುಡ್ಡು ಒಂದಿದ್ದರೆ, ನಾನು ನನ್ನ ಚರಿತಾರ್ಥವನ್ನು ಸಾಗಿಸಿಕೊಳ್ಳುತ್ತಿದ್ದೆ ನೆಂತೂ ಅಲ್ಲ; ಯಾವ ನನ್ನ ತಂದೆಯು ನನ್ನನ್ನು ತನ್ನ ಮಗನೆಂದು ಸ್ವೀಕರಿಸ ಲಿಲ್ಲವೋ, ಮಗನ ವಿಷಯದ ತನ್ನ ಕರ್ತವ್ಯವನ್ನು ಪಾಲಿಸಲಿಲ್ಲವೋ, ಅಂಥವನು ದಯವಿಟ್ಟು ಕೊಟ್ಟ ಹಣವನ್ನು ಸ್ವೀಕರಿಸುವದೆಂದರೆ, ಅಪಮಾನವಲ್ಲದೆ ಮತ್ತೇನು? ಅಂದಿನಿಂದಲೇ ನಾನು ದುರ್ಗತಿಗೆಳಸಿ, ಇತ್ತೀಚೆಗೆ ಅದರ ಸೀಮೆಯನ್ನು ಕೂಡ ದಾಟಿರುತ್ತೇನೆ. ನನ್ನ ಚಿಕ್ಕಮ್ಮನು ನನ್ನನ್ನು ಪರಿಪಾಲಿಸಲಿಕ್ಕೆ ಅಸಮರ್ಥಳಾದರೂ ನನ್ನೆದುರಿಗೆ ನನ್ನ ಜನಕನ ವಿಷಯದ ಸಂಗತಿಯನ್ನು ಗುಪ್ತವಾಗಿರಿಸಿದಳು. ಕಡೆಗೆ ಉದರಂಭರಣಕ್ಕೆ ಅಭಾವವಾದ ಒಳಿಕ ನಾನು ಒಬ್ಬ ಚೀನೀಯ ಕಾರಖಾನದಾರ ನಲ್ಲಿ ಚಾಕರಿಗೆ ನಿಂತೆನು. ಆ ಕಾರಖಾನದಾರನಿಗೊಬ್ಬ ಸುಂದರಿಯಾದ ಕನ್ಯೆ ಯಿದ್ದಳು. ನಾನು ಅವಳನ್ನು ಪ್ರೀತಿಸಹತ್ತಿದೆನು. ಒಂದು ದಿನ ನಾನು ಆಕೆಯ ತಂದೆಯ ಒಳಿಯಲ್ಲಿ ಆಕೆಯನ್ನು ನನಗೆ ಕೊಟ್ಟು ಲಗ್ನ ಮಾಡಬೇಕೆಂಬ ಮಾತ ನ್ನೆತ್ತಲು, ಆ ಡಾಂಭಿಕ ಕಾರಖಾನದಾರನು ಒಮ್ಮೆಲೆ ಸಿಟ್ಟಿಗೆದ್ದು: ''ಹೋಗೋ ಹೋಗು; ಫಿರಂಗಿಯ ಪಾದರಕ್ಕೆ ಹುಟ್ಟಿದವನೇ!'' ಎಂದು ಬೈದು ಕಳಿಸಿ ದನು. ಅವನು ಅಂದು ನನ್ನನ್ನು ಹಲವು ಮಾತುಗಳಿಂದ ಚೆನ್ನಾಗಿ ಜರೆದನು. ಅಂದಿನ ಆತನ ಬೈಗಳೂ, ತಿರಸ್ಕಾರದ ಮಾತುಗಳೂ ಈಗಲೂ ನನ್ನ ಕಿವಿಯಲ್ಲಿ ಚೆನ್ನಾಗಿ ಕೇಳಿಸುತ್ತಲಿವೆ. ಅದು ವರೆಗೂ ನಾನು ನನ್ನ ಜನ್ಮವೃತ್ತಾಂತವನ್ನು ತಿಳಿದಿರಲಿಲ್ಲ. ಅದರಿಂದ ನಾನು ಆ ಡಾಂಭಿಕನ ಮಾತಿನಲ್ಲಿ ವಿಶ್ವಾಸವಿಡದಾ ದೆನು. ಕೂಡಲೆ ನಾನು ನನ್ನ ಚಿಕ್ಕಮ್ಮನ ಒಳಿಗೆ ಹೋಗಿ, ಕಾರಖಾನೆಯಲ್ಲಿ ನಡೆದ ಸಂಗತಿಯನ್ನೆಲ್ಲ ಹೇಳಲು, 'ಚಿಪೂನಾನೆಂಬ ಆ ಕಾರಖಾನದಾರನು ಏನು ಹೇಳಿದನೋ, ಅದೆಲ್ಲವೂ ನಿಜವೇ,' ಎಂದು ಅವಳು ತಿಳಿಸಿದಳು. ನನ್ನ

ತಂದೆಯು 'ಜನ ಮೆರಿಡಿಥ'ನೆಂಬ ಹೆಸರಿನ ಓರ್ವ ಆಂಗ್ಲ ಫಿರಂಗಿಯೆಂಬದನ್ನು ನಾನು ಅಂದೇ ಎಲ್ಲಕ್ಕೂ ಮೊದಲು ನನ್ನ ಚಿಕ್ಕಮ್ಮನಿಂದ ಕೇಳಿಕೊಂಡದ್ದು! ನನ್ನ ತಾಯಿಯ ನಿಧನದ ನಂತರ ಅವನು ನನ್ನನ್ನು ನನ್ನ ಚಿಕ್ಕಮ್ಮನ ಉಡಿಯಲ್ಲಿ ಹಾಕಿ, ತಾನು ಸ್ವದೇಶಕ್ಕೆ ಹೊರಟು ಹೋದನಂತೆ. ಆ ಸಂಗತಿಯು ತಿಳಿದ ಕೂಡಲೆ ನಾನು ಅಲ್ಲಿಯ ಅಮೇರಿಕನ್ ಮಿಶನ್ನಿಗೆ ಹೋಗಿ, ಅಲ್ಲಿಯ ಅಧ್ಯಕ್ಷನಾದ ಸಾಮ್ಯುಅಲ್ ರಾಬರ್ಟಸನ್‌ನೆಂಬ ಪಾದ್ರಿಯನ್ನು ಕಂಡೆನು. ಆತನು ನನ್ನನ್ನು ತನ್ನ ಬಳಿಯಲ್ಲಿಯೇ ಇಟ್ಟುಕೊಂಡು, ನನ್ನ ಪ್ರತಿಪಾಲನೆಯ ಮತ್ತು ಶಿಕ್ಷಣದ ಭಾರವನ್ನು ವಹಿಸಿಕೊಂಡನು. ನನ್ನ ಮೇಲೆ ಆತನ ಅನುಗ್ರಹವು ಚೆನ್ನಾಗಿದ್ದಿತು. ಅದರಿಂದ ನಾನು ಅವನಿಗೆ ನನ್ನ ಅಂತರಂಗಿಕ ಮರ್ಮವನ್ನು ತಿಳಿಸಿ, ನನಗೆ ನನ್ನ ತಾಯಿಯ ಕುಲದ ಚೀನೀಯ ಹೆಂಡತಿಯನ್ನು ವರಿಸುವದು ಅಶಕ್ಯವಾದರೆ ಆಗಲೊಲ್ಲದೇಕೆ; ನನ್ನ ತಂದೆಯ ಜಾತಿಯ ಕನ್ಯೆಯನ್ನಾದರೂ ದೊರಕಿಸಿಕೊಡಿರೆಂದು ಕೇಳಿದೆನು. ನನ್ನ ಆ ಮಾತಿಗೆ ಆತನು ಹೇಳಿದ ಉತ್ತರದಿಂದ ನನ್ನ ಮರ್ಮಾಹತವಾಯಿತು! ನನ್ನಲ್ಲಿಯ ಎಲ್ಲ ಆಶೆ-ಅನುಮಾನಗಳೂ ಲೋಪವಾಗಿ ಬಿಟ್ಟವು! ಆಗ ಅವನು ತನ್ನ ಕ್ರೈಸ್ತಧರ್ಮದ ಉದಾರತೆ, ಸಮತೆ, ವಿಶ್ವಕೌಟುಂಬಿಕ ಭ್ರಾತೃಭಾವ ಮುಂತಾದವುಗಳನ್ನೆಲ್ಲ ಒಮ್ಮೆಲೆ ಮರೆತು:— "ಎಲೈ ಫ್ಯಾನ್‌ಚಂಡಾ, ನೀನು ಭಿನ್ನ-ಭಿನ್ನ ರಕ್ತಗಳಿಂದ ಹಾದರದಿಂದ-ಹುಟ್ಟಿದ ಫಿರಂಗಿಯಾಗಿರುತ್ತೀಯೆ. ಅದರಿಂದ ನಿನಗೆ ಯಾವ ಚೀನಿಗನೂ ತನ್ನ ಕನ್ಯೆಯನ್ನು ಕೊಡಲಾರನು; ಮತ್ತು ಅದೇ ಕಾರಣದಿಂದ ನಿನಗೆ ಯಾವಳೊಬ್ಬ ಇಂಗ್ಲಿಷ ಜಾತಿಯ ಕನ್ಯೆಯೂ ದೊರೆಯಲಾರಳು." ಎಂದು ಸ್ಪಷ್ಟವಾಗಿ ಹೇಳಿದನು. ನಾನು ಚಿಖೂನಾ ಎಂಬ ಹೆಸರಿನ ಆ ಕಾರಖಾನದಾರನ ಮಗಳಾದ ಲಾಲಿಯನ್ನು ಕೇಳ ಹೋದಾಗ, ಆತನಿಂದ ಅನಿಸಿಕೊಂಡ ಮಾತುಗಳನ್ನು ಆ ಪಾದ್ರಿಗೆ ತಿಳಿಸಲು, ಅದನ್ನು ಕೇಳಿ ಅವನು ಅಚ್ಚರಿಪಡಲಿಲ್ಲ! ಅಂದಿನಿಂದ ನಾನು ಚೀನಿಗರು ಮತ್ತು ಇಂಗ್ಲಿಷರು ಈ ಉಭಯ ಜಾತಿಗಳವರ ತಿರಸ್ಕಾರಕ್ಕೆ ಪಾತ್ರನಾದ ವ್ಯಕ್ತಿಯಾನಾಗಿರುತ್ತೇನೆಂದು ತಿಳಿದುಕೊಂಡೆನು. ಅಂದು ಸಿಟ್ಟಿನಿಂದಲೂ ಅಪಮಾನದಿಂದಲೂ ನನ್ನ ಸರ್ವಾಂಗವೂ ಉರಿಯತೊಡಗಿತು. ಆ ಕೂಡಲೆ ನಾನು ಆ ಮಿಶನ್ನನ್ನು ತ್ಯಜಿಸಿ, ಆ ಕ್ಯಾಂಟನ್ ಪಟ್ಟಣದೊಳಗಿನ ಬಹು ಪುರಾತನ ಕಾಲದ ಬುದ್ಧವಿಹಾರವನ್ನು ಹೊಕ್ಕೆನು; ಮತ್ತು ಅಲ್ಲಿಯ ಆ ನಮ್ಮ ಬುದ್ಧದೇವನೆದುರಿಗೆ ಹೋಗಿ 'ನಾನು ನನ್ನ ಶೇಷಾಯುಷ್ಯವನ್ನೆಲ್ಲ ಆಂಗ್ಲ ಫಿರಂಗಿಗಳ ಕೂಡ ದ್ವೇಷ ಬೆಳೆಸುವ ಹಾಗು ಅವರಿಗೆ ಪ್ರತಿಯೊಂದು ಬಗೆಯಿಂದ ಕೇಡು ಬಗೆಯುವ ಕಾರ್ಯದಲ್ಲಿ ಕಳೆಯುವೆನೆ'ಂದು ಪ್ರತಿಜ್ಞೆ ಮಾಡಿರುತ್ತೇನೆ. ನಾನು

ಅಂದಿನಿದಲೇ ಆಂಗ್ಲಫಿರಂಗಿಗಳ ಸರ್ವನಾಶಕ್ಕೆ ಪ್ರವೃತ್ತನಾಗಿರುತ್ತೇನೆ. ನಾನು ನನ್ನೀ ಪ್ರತಿಜ್ಞೆಯನ್ನು ಎಷ್ಟು ಕಟ್ಟುನಿಟ್ಟಾಗಿ ಪರಿಪಾಲಿಸುತ್ತಿರುವೆನೆಂಬ ವಿಷಯವು ನಿಮಗೆ ಅರಿದಾಗಿಲ್ಲ. ನಾನು ಆಗಲೆ ಕ್ಯಾಂಟನ್ ಪಟ್ಟಣದಿಂದ ಹಾಂಗಕಾಂಗಿಗೆ ಹೋಗಿ, ಅಲ್ಲಿಯ ಚೀನೀ ವಿದ್ರೋಹಿಗಳಲ್ಲಿ ಸೇರಿಕೊಂಡೆನು. ಆ ಮೇಲೆ ನಾನು ಆ ಸಮಿತಿಯ ಲಂಡನ್ನ ಪಟ್ಟಣದೊಳಗಿನ ಶಾಖೆಯ ಮುಖ್ಯಸ್ಥನೆಂದು ಇಲ್ಲಿಗೆ ಬಂದು ಇಲ್ಲಿಯ ಪ್ರಚಂಡ ಕೆಲಸಕ್ಕೆ ತೊಡಗಿರುತ್ತೇನೆ''

'ಕಳೆದ ಎರಡು-ಮೂರು ವರ್ಷಗಳಿಂದ ನಾನು ಇಲ್ಲಿಯ ಪೋಲೀಸರ ಕೂಡ ವಿರೋಧ ಬೆಳೆಸಿರುತ್ತೇನೆ; ಮತ್ತು ನಾನು ನನ್ನ ಸಮಿತಿಯ ಹಿತಕ್ಕಾಗಿ ಹಲವು ಹೊಸ ಹೊಸ ಉಪಾಯಗಳಿಂದ ಧನ ಸಂಗ್ರಹಿಸಿರುತ್ತೇನೆ. ನನಗುಂಟಾದ ಅಪಮಾನದ ಸೇಡಿಗಾಗಿ ನಾನು ನಿಮ್ಮ ಜಾತಿಯ ಜನರಿಗೆ ಅಲ್ಪ-ಸ್ವಲ್ಪಾದರೂ ತೊಂದರೆ ಕೊಟ್ಟಿರುವದು ಒಹು ಗೌರವದ ವಿಷಯವೆಂದು ನನ್ನ ಮನಸ್ಸಿನಲ್ಲಿ ತಿಳಿದುಕೊಂಡಿದ್ದೇನೆ. ನಾನು ನಿಮ್ಮ ಆಂಗ್ಲಫಿರಂಗಿಗಳನ್ನು ಎಷ್ಟು ತಿರಸ್ಕರಿಸುತ್ತಿರುವೆನೆಂಬದನ್ನು ಹೇಳಲಿಕ್ಕೆ ನಿಮ್ಮ ಭಾಷೆಯಲ್ಲಿ ಯೋಗ್ಯವಾದ ಶಬ್ದಗಳೇ ಇಲ್ಲವೆಂದು ನನ್ನ ಭಾವನೆಯಾಗಿದೆ. ನಾನು ಬಯಸುತ್ತಿದ್ದುದೇನಂದರೆ, ಇಷ್ಟು ಕಷ್ಟ, ಇಷ್ಟು ದುಃಖ, ಇಷ್ಟು ಅವಮಾನ-ಅವಹೇಲನೆಗಳಿಗೆ ಕಾರಣನಾದ ನನ್ನ ತಂದೆಯು ಒಂದಿಲ್ಲೊಂದು ದಿನ ನನಗೆ ಭೆಟ್ಟಿಯಾಗಬೇಕು; ಹಾಗು ನಾನು ಅಂದು ಆತನಿಗೆ ಆತನ ದುರ್ವ್ಯವಹಾರದ ಪ್ರತಿಫಲವನ್ನು ಕೊಡಲಿಕ್ಕೆ ಸಮರ್ಥನಾಗದಿದ್ದರೆ, ನನ್ನ ಅಂತರಂಗಿಕ ಕ್ರೋಧದ ಜ್ವಾಲೆಗಳು ಕುಗ್ಗಲಿಕ್ಕಿಲ್ಲ. ನನ್ನ ಮನಸ್ಸಿಗೆ ನಿಜವಾದ ಶಾಂತಿಯೇ ದೊರೆಯಲಿಕ್ಕಿಲ್ಲವೆಂದು. ಇಂದು ಶ್ರೀ ಬುದ್ಧದೇವನ ಕೃಪೆಯಿಂದ ನನಗಾ ಸುಯೋಗವು ಪ್ರಾಪ್ತವಾಗಿರುತ್ತದೆ; ನನ್ನ ಬಹು ದಿನಗಳ ಮನೋವಾಂಛಿತವು ಈಡೇರಿರುತ್ತದೆ.''

ಉಷಂಡ ಚಂಡನ ಬಾಯಿಂದ ಹೊರಟ ಆ ತೀವ್ರ ತಿರಸ್ಕಾರ ಸೂಚಕ ನುಡಿಗಳನ್ನು ಕೇಳಿ, ಇನ್ಸಪೆಕ್ಟರ ಡೆಭಿನಟನು ಭಯಂಕರವಾದ ಅಪರಾಧಿಯಂತೆ ಮೋರೆ ತಗ್ಗಿಸಿಕೊಂಡು ನಿಂತಿದ್ದನು. ಆಗ ಆತನ ಅಂತಃಕರಣದಲ್ಲಿ ಅನುತಾಪಾನಲವು ಪ್ರಜ್ವಲಿತವಾಗಿತ್ತು. ಅದರಿಂದ ಅವನು ಬಾಯಿಂದ ಒಂದು ಮಾತನ್ನೂ ಆಡಲಸಮರ್ಥನಾಗಿದ್ದನು. ಆತನ ಮಗನಾದ ರಿಚರ್ಡನ ಬಾಯಿಂದಲೂ ಯಾವ ಮಾತೂ ಹೊರಡಲಿಲ್ಲ. ಉಷಂಡ ಚಂಡನ ಆ ಕರ್ಮಕಥೆಯನ್ನು ಕೇಳಿ, ಬ್ಲೀಕನು ಮನಸ್ಸಿನಲ್ಲಿ:— ''ಇನ್ನು ನಾವು ಈತನ ಕೈಯಿಂದ ಪಾರಾಗಲಾರೆವು; ಇವನು ತನ್ನ ತಂದೆಯನ್ನು ಕೂಡ ಕ್ಷಮಿಸಿ ಬಿಟ್ಟು ಬಿಡಲಾರನು.'' ಎಂದನು.

ಉಷಂಡ ಚಂಡನು ಈ ಮೇರೆಗೆ ಆತ್ಮವೃತ್ತವನ್ನು ಹೇಳಿ, ತನ್ನ ಹೃದಯ

ಭಾರವನ್ನು ಕಡಿಮೆ ಮಾಡಿಕೊಂಡ ಬಳಿಕ, ಮೆಲ್ಲಮೆಲ್ಲನೆ ಕುರ್ಚಿಯ ಬಳಿಗೆ ಹೋಗಿ, ಹಾಯ್! ಎಂದು ಅದರ ಮೇಲೆ ಕುಳಿತು, ಎರಡೂ ಕೈಗಳಿಂದ ತನ್ನ ಮೋರೆಯನ್ನು ಮುಚ್ಚಿಕೊಂಡು ಕೆಲ ನಿಮಿಷಗಳ ವರೆಗೆ ಸ್ತಬ್ಧನಾಗಿ ಏನನ್ನೋ ಯೋಚಿಸಿದನು. ಕಡೆಗೆ ಅವನು ತನ್ನ ಮೋರೆಯನ್ನೆತ್ತಿ ನಿದ್ದೆಯಿಂದೆಚ್ಚತ್ತವನಂತೆ ಅತ್ತಿತ್ತ ಹೊರಳಿ ನೋಡಿ: —"ನನ್ನ ಸಿಟ್ಟು ಸಂಪೂರ್ಣವಾಗಿ ಇಳಿಯಿತು; ಇನ್ನು ಮೇಲೆ ನಾನು ನಿಮ್ಮಗಳ ವಿಷಯವಾಗಿ ಮಾಡತಕ್ಕ ಕರ್ತವ್ಯವನ್ನು ನಿಶ್ಚಯಿಸಿರುತ್ತೇನೆ ನಾನು ನಿಮ್ಮಗಳ ಮರಣದಂಡನೆಯ ಶಿಕ್ಷೆಯನು ರದ್ದುಪಡಿಸಿರುತ್ತೇನೆ ಅದರಿಂದ ಇನ್ನು ಮೇಲೆ ನಿಮ್ಮಗಳನ್ನಾರನ್ನೂ ಹತ್ಯೆಗೆಯ್ಯಲಾರರು; ಆದರೆ ಇಂದು ನನ್ನ ತಂದೆಯನ್ನು ನನ್ನ ಬಳಿಯಲ್ಲಿಯೇ ಇರಗೊಡಿರಿ. ನಾನು ಆತನೊಡನೆ ಕೆಲ ಗೌಪ್ಯ ವಿಷಯದ ಬಗ್ಗೆ ಮಾತನಾಡಬೇಕಾಗಿದೆ. ಮಿಕ್ಕವರೆಲ್ಲರನ್ನೂ ಮುಕ್ತಗೊಳಿಸಿರುತ್ತೇನೆ. ನೀವೆಲ್ಲರೂ ಇಲ್ಲಿಂದ ಹೊರಟುಹೋಗಬಹುದು." ಎಂದು ಹೇಳಿ, ತನ್ನ ಸೇವಕರಿಂದ ಅವನ ಬಂಧನಗಳನ್ನು ಬಿಡಿಸಿದನು.

ಆಗ ರಿಚರ್ಡನು ಅನ್ನುತ್ತಾನೆ:—"ಆಗದು; ಹಾಗಾಗದು. ನಾನು ನನ್ನ ತಂದೆಯನ್ನು ಇಲ್ಲಿಯೇ ಬಿಟ್ಟು ಹೋಗುವದಿಲ್ಲ. ಒಂದುವೇಳೆ ಆತನು ಇಲ್ಲಿರುವ ಅವಶ್ಯಕತೆಯಿದ್ದರೆ, ನಾನೂ ಅವನೊಡನೆ ಇಲ್ಲಿಯೇ ಇರುವವನು."

ಉಪಂಡ ಚಂಡ: —"ನನ್ನ ಅಪ್ಪಣೆಯು ಸರ್ವಥಾ ವ್ಯರ್ಥವಾಗಲಾರದು. ನೀವು ಮೂರೂ ಜನರು ಈಗಲೆ ಇಲ್ಲಿಂದ ಹೊರಟು ಹೋಗಿರಿ. ನನ್ನೊಡನೆ ವಾದಿಸುವದರಿಂದ ಪ್ರಯೋಜನವಾಗಲಾರದು."

ರಿಚರ್ಡ: —"ನಾನು ನನ್ನ ತಂದೆಯನ್ನು ಬಿಟ್ಟು ಹೊರಡುವದಿಲ್ಲ. ಅವನನ್ನು ಕೊಲ್ಲುವದೇ ನಿನ್ನ ಇಚ್ಛೆಯಿದ್ದರೆ, ಮೊದಲು ನನ್ನನ್ನು ಕೊಂದು, ಆ ಮೇಲೆ ಅವನ ಮೈಗೆ ಕೈ ಹಚ್ಚಬೇಕಾದೀತು?"

"ಮೂರ್ಖ ತರುಣಾ! ನಾನು ನಿನ್ನ ಮನಸ್ಸಿನಂತೆಯೇ ನಡೆಯಬೇಕೆಂದು ಬಯಸುತ್ತೀಯೇನು? ನೀನು ಅದನ್ನೆಲ್ಲ ಬಿಟ್ಟು ಬಿಡು. ನಾನು ನಿನಗೆ ಈಗ ಇಷ್ಟೇ ತಿಳಿಸುವೆನು: ಇನ್ನು ನಾನು ಪಿತೃಹತ್ಯೆಗೆ ಉದ್ಯುಕ್ತನಾಗುವದಿಲ್ಲ. ಅವನು ಇಂದು ನನ್ನ ಬಳಿಯಲ್ಲಿ ಸುಖವಾಗಿರಲಿ. ನೀವು ಮೂವರೂ ಈಗಲೆ ಇಲ್ಲಿಂದ ಹೊರಡಿರಿ."

"ನಾನು ನಿನ್ನಂತಹ ಪಿಶಾಚಿಯ ನುಡಿಯನ್ನು ನಂಬತಕ್ಕವನಲ್ಲ. ನನ್ನ ತಂದೆಯನ್ನು ಬಿಟ್ಟು ತೆರಳುವವನಲ್ಲ-ತಿಳಿಯಿತೇ?" ಎಂದು ರಿಚರ್ಡನು ಉತ್ತೇಜಿತನಾಗಿ ನುಡಿಯಲು,

"ಇನ್ಸಪೆಕ್ಟರ ಡೆಭಿನಟನು ರಿಚರ್ಡನನ್ನು ಸುಮ್ಮನಿರಿಸಿ:— "ತಮ್ಮಾ,

ರಿಚರ್ಡಾ, ಹಾಗೆನಬೇಡ. ನೀನು ಈತನ ಮಾತಿಗೆ ಪ್ರತ್ಯುತ್ತರವನ್ನು ಹೇಳಬೇಡ. ನೀವೆಲ್ಲರೂ ಹೋಗಿರಿ. ನಾನು ಇಂದು ಬರುವದಿಲ್ಲ. ಈತನು ಏನು ಹೇಳ-ಕೇಳಬೇಕಾಗಿದೆಯೋ, ಅದೆಲ್ಲವನ್ನೂ ಲಾಲಿಸುವದಕ್ಕೆಂದು ನಾನು ಸನ್ನಿಷ್ಠೆಯಿಂದಲೇ ಇಂದು ಇಲ್ಲಿ ಇರುತ್ತೇನೆ. ನನಗೆ ಇನ್ನು ಇಲ್ಲಿ ಯಾವ ಬಗೆಯ ಅಂಜಿಕೆಯೂ ಉಳಿದಿರುವದಿಲ್ಲ. ಯಾಕಂದರೆ ಈ ಹುಡುಗನೂ ನಿನ್ನಂತೆ ನನ್ನ ಮಗನೇ ಆಗಿರುವನು. ಇವನು ನನ್ನಿಂದ ಬಹು ದಿನಗಳಿಂದ ಉಪೇಕ್ಷಿಸಲ್ಪಟ್ಟಂಥ ಸ್ನೇಹವಂಚಿತ ಹತಭಾಗ್ಯನಾದ ನನ್ನ ಮಗನಾಗಿರುತ್ತಾನೆ, ತಿಳಿಯಿತೆ?''

ಬ್ಲೇಕನಿಗೆ ಉಷಂಡ ಚಂಡನ ಉದ್ದೇಶವು ತಿಳಿಯಲಿಲ್ಲ; ಆದರೆ ಆತನ ಮಾತಿಗೆ ವಾದಿಸುವದರಿಂದ ಏನೂ ಪ್ರಯೋಜನವಾಗದೆಂಬದನ್ನು ಮಾತ್ರ ಅವನು ಮನಗಂಡನು; ಆತನ ಅನುಗ್ರಹ ವಾಣಿಯಲ್ಲೇ ಭರವಸೆಯನ್ನಿಟ್ಟು ನಡೆಯದ ಹೊರತು, ಗತ್ಯಂತರವಿಲ್ಲೆಂಬದು ಆತನಿಗೆ ಖಾತ್ರಿಯಾಯಿತು. ಅದರಿಂದ ಅವನು ಕ್ಷಣಕಾಲವೇ ಯೋಚಿಸಿ, ಉಷಂಡ ಚಂಡನನ್ನು ಕುರಿತು: 'ಮಹಾನುಭಾವನೇ, ನಾವಿನ್ನು ಹೋಗುವೆವು; ಆದರೆ ನೀನು ಯಾವ ಆಂಗ್ಲಯುವತಿಯನ್ನು ಬಂಧನದಲ್ಲಿರಿಸಿರುವೆಯೋ, ಅವಳನ್ನು ನಮ್ಮ ಜೊತೆಗೆ ಬರಗೊಡುವದಿಲ್ಲವೆ?'' ಎಂದು ಕೇಳಲು,

''ಇಲ್ಲ; ಅವಳು ಬರಲಾರಳು. ಈಗಲವಳು ಮಲಗಿ ಬಿಟ್ಟಿದ್ದಾಳೆ. ಅದರಿಂದ ಈಗ ನಾನವಳ ನಿದ್ರಾಭಂಗಗೊಳಿಸಲಾರೆನು. ಇನ್ನು ಅವಳಿಗೆ ಯಾವ ಬಗೆಯ ಕೇಡೂ ಉಂಟಾಗಲಾರದು. ನಾಳೆ-ನಾಡದ್ದರಲ್ಲೇ ನಾನವಳನ್ನು ಬಂಧಮುಕ್ತಗೊಳಿಸುವೆನ ; ಹಾಗು ಆ ಕೂಡಲೆ ಅವಳನ್ನು ನನ್ನ ಸಾಪತ್ನಬಂಧುವಿನ ಬಳಿಗೆ ಕಳಿಸುವೆನು. ನನ್ನ ಈ ಮಾತಿನಲ್ಲಿ ಅವಿಶ್ವಾಸ ಪಡದೆ ನಂಬಿ, ದಯವಿಟ್ಟು ಹೊರಟು ಹೋಗಿರಿ.''

ಬಳಿಕ ರಿಚರ್ಡನು ತನ್ನ ತಂದೆಯ ಬಳಿಗೆ ಹೋಗಿ, ನನ್ನೊಡನೆ ಈಗಲೆ ಮನೆಗೆ ಬರಬೇಕೆಂದು ಹಟ ಮಾಡಹತ್ತಿದನು; ಆದರೆ ಇನ್ಸಪೆಕ್ಟರ ಡಭಿನಟನು ಆತನ ಮಾತಿಗೊಪ್ಪದೆ, ಅಂದು ತಾನೊಬ್ಬನೇ ಉಷಂಡ ಚಂಡನ ಬಳಿಯಲ್ಲಿರಲಿಕ್ಕೆ ಸಂಕಲ್ಪ ಮಾಡಿದನು ಅದರಿಂದ ಬ್ಲೇಕನು ರಿಚರ್ಡ-ಸ್ಮಿತ್ಥರೊಡನೆ ಇನ್ನು ಇಲ್ಲಿಂದ ಹೊರಡುವದೇ ಯೋಗ್ಯವೆಂದು ಮನಸ್ಸಿನಲ್ಲಿ ನಿಶ್ಚಯಿಸಿ ಹೊರಡಲನುವಾದನು. ಆ ಕೂಡಲೆ ಅಲ್ಲಿಯ ಪಹರೆಯವರು ಆ ಮೂವರ ಕಣ್ಣುಗಳನ್ನೂ ಮೊದಲಿನಂತೆ ಚೆನ್ನಾಗಿ ಕಟ್ಟಿ, ಅವರ ಕೈಗಳನ್ನು ಹಿಡಿದುಕೊಂಡು ಆ ಕೋಣೆಯಿಂದ ಹೊರಬಿದ್ದು, ಅವರನ್ನು ಹಲವು ಅಟ್ಟಗಳನ್ನು ಹತ್ತಿಸಿ-ಇಳಿಸಿ, ಅತ್ತಿತ್ತ ತಿರುಗಾಡಿಸಿ, ಅರ್ಧ ತಾಸಿನ ಮೇಲೆ ಅವರನ್ನೊತ್ತಟ್ಟಿಗೆ ಒಯ್ದು ಅವರ ಕಣ್

ಗಳನ್ನು ಬಿಚ್ಚಿ ಬಿಟ್ಟರು.

ಆಗ ಅವರೆಲ್ಲರೂ ಕಣ್ದೆರೆದು ನೋಡುತ್ತಾರೆ; ತಾವು ಟೇಮ್ಸ ನದೀ ತೀರಕ್ಕೆ ಸಮೀಪವಾದ ಒಂದು ನಿರ್ಜನವಾದ ದಾರಿಯಲ್ಲಿ ನಿಂತುಕೊಂಡಿದ್ದರು! ಆಗ ರಿಚರ್ಡನು ಬ್ಲೇಕನನ್ನು ಕುರಿತು:—"ಮಹನೀಯರೇ, ಇದುವರೆಗೆ ಕಂಡ ದೃಶ್ಯಗಳೆಲ್ಲ ಯಾವದೋ ಒಂದು ಸ್ವಪ್ನದಲ್ಲಿ ಕಂಡ ದೃಶ್ಯಗಳಂತೆಯೇ ಆಗಿ ಹೋದವು. ಬ್ಲೇಕರೇ, ಸತ್ಯಲೋಕದಲ್ಲಿ ಈ ಬಗೆಯ ಅದ್ಭುತ ಸಂಗತಿಗಳಾಗ ಬಲ್ಲವೆ? ಈಗ ನಾವು ಪೂರ್ವರಂತೂ ಬಂಧಮುಕ್ತರಾದೆವು; ಆದರೆ ನಮ್ಮ ತಂದೆಯವರ ದೈವದಲ್ಲೇನಿದೆಯೋ, ಅದಾರು ಹೇಳಬೇಕು? ನಾವು ಇನ್ನು ಅವರನ್ನು ಜೀವಂತವಾಗಿ ಕಾಣಬಹುದೋ?"

"ಆ ಬಗ್ಗೆ ಖಂಡಿತವಾಗಿ ಏನನ್ನೂ ಹೇಳಲಾರೆನು; ಆದರೆ ಉಪಂಡ ಚಂಡನು ಎಂತಹ ದುರ್ವೃತ್ತನಾಗಿದ್ದರೂ ತನಗೆ ಜನ್ಮ ಕೊಟ್ಟ ತಂದೆಯನ್ನು ಕೊಲ್ಲಲಾರನೆಂದೆನಿಸುತ್ತದೆ; ಅವನು ಸುಳ್ಳು ಹೇಳಿರಲಾರನೆಂದು ತೋರುತ್ತದೆ; ಆದರೂ ಡೆಫೆನಟರ ದೈವದಲ್ಲೇನಿದೆಯೋ ಅದನ್ನು ನಾಳೆಯೇ ತಿಳಿಯಬೇಕಾಗು ವದು. ಈಗ ಆ ವಿಷಯಕ್ಕೆ ತರ್ಕ-ವಿತರ್ಕ ಮಾಡುವದರಿಂದ ಪ್ರಯೋಜನ ವೇನೂ ಆಗಲಾರದು."

"ಆದರೆ ಆ ಪಿಶಾಚಿಯ ಮಾತನ್ನು ನಂಬದೆ, ಅವನಿಂದ ಅಪ್ಪನನ್ನು ಬಿಡಿಸಿ ಕೊಂಡು ಬರಲಿಕ್ಕೆ ನಾವು ಯಥಾಸಾಧ್ಯವಾಗಿ ಪ್ರಯತ್ನಿಸುವದೇ ಹಿತವು; ಮತ್ತು ಆ ಅಭಾಗಿನಿಯಾದ ಮೇರಿಯ ಬಂಧಮುಕ್ತತೆಯ ಬಗ್ಗೆ ನಾವು ಇದು ವರೆಗೆ ಯಾವ ಪ್ರಯತ್ನವನ್ನೂ ಮಾಡಿರುವದಿಲ್ಲ. ಅವಳಿಗುಂಟಾಗಿರುವ ವಿಪ ತ್ತನ್ನು ನೆನೆ ನೆನೆದು ನನ್ನ ಮನಸ್ಸು ತಲ್ಲಣಿಸಿ ಬಿಟ್ಟಿದೆ"

ಬಳಿಕ ಅವರೆಲ್ಲರೂ ಅಲ್ಲಿಂದ ಪಪ್ಪಲಿನ ಜೇಲಿನ ದಾರಿ ಹಿಡಿದು ಸಾಗಿರು ವಾಗ ಸ್ಮಿತ್ಥನು ತನಗುಂಟಾಗಿದ್ದ ವಿಪತ್ತಿನ ಸಂಗತಿಯನ್ನು ಬ್ಲೇಕನಿಗೆ ಹೇಳುತ್ತ ನಡೆದಿದ್ದನು. ಮುಂದೆ ಕೆಲ ನಿಮಿಷಗಳಲ್ಲಿಯೇ ಅವರೆಲ್ಲರೂ ಅಲ್ಲಿಗೆ ಹೋಗಿ ತಲುಪಿದರು. ಅಲ್ಲಿಗೆ ಹೋಗುವಷ್ಟರಲ್ಲಿ ಸ್ಯಾಂಡವೇರ ಲೇನಿನೊಳಗಿನ ೧೪ನೇ ನಂಬರಿನ ಮನೆಯ ಕಾವಲಿಗೆ ಹೋಗಿದ್ದ ಪೋಲೀಸರು ಅಲ್ಲಿಯ ನೆಲಮನೆಯೊಳ ಗಿಂದ ಹೊರಬೀಳುತ್ತಿದ್ದ ಎಪ್ಪತ್ತು ಜನ ಚೀನೀ ವಿದ್ರೋಹಿಗಳನ್ನು ಸೆರೆ ಹಿಡಿ ದಿದ್ದರು. ಅಂದಿನ ಅಲ್ಲಿಯ ಗುಪ್ತ ಸಭೆಗೆ ಹಾಂಗಕಾಂಗದಿಂದ ಬಂದಿದ್ದ ಅವರ ಪ್ರಮುಖನೂ ಆ ಎಪ್ಪತ್ತರಲ್ಲೇ ಸೆರೆ ಹಿಡಿಯಲ್ಪಟ್ಟಿದ್ದನು. ಅಲ್ಲಿಯ ಚೀನೀವಿದ್ರೋಹಿಗಳು ಓಡಿ ಹೋಗಲಿಕ್ಕೆ ಸಾಕಷ್ಟು ಪ್ರಯತ್ನಿಸಿದರೂ ಅಂದು ಅವರಿಗೆ ಸಾಧ್ಯವಾಗಲಿಲ್ಲ. ಇದಲ್ಲದೆ ಅವರ ಬಳಿಯಲ್ಲಿ ಆ ವಿದ್ರೋಹೀ ಸಮಿ

ತಿಯ ಸಂಬಂಧದ ಯಾವ ಮಹತ್ವದ ಕಾಗದ-ಪತ್ರಗಳಿದ್ದವೋ, ಅವೆಲ್ಲವೂ ಪೋಲೀಸರ ಕೈ ಸೇರಿದ್ದವು. ಅವುಗಳಲ್ಲಿ ಲೋಕದೊಳಗಿನ ಎಲ್ಲ ಚೀನೀ ವಿದ್ರೋಹಿಗಳ ಹೆಸರು-ದೆಸೆಗಳು ಬರೆಯಲ್ಪಟ್ಟಿದ್ದವಲ್ಲದೆ, ಅವರು ತಮ್ಮ ಸಮಿತಿಗೆ ಯಾವ ಯಾವ ಬಗೆಯಿಂದ ಹಣ ಸಂಗ್ರಹ ಮಾಡುತ್ತಿದ್ದರೆಂಬ ವಿಷಯವೆಲ್ಲವೂ ಸಂಗ್ರಹಿತವಾಗಿದ್ದುದರಿಂದ, ಅವರ ಅಪರಾಧಗಳಿಗೆ ಬೇರೆ ಪ್ರಮಾಣಗಳ ಅವಶ್ಯಕತೆಯೇ ಉಳಿದಿರಲಿಲ್ಲ.

ಸ್ಯಾಂಡವೀರಲೇನಿನ ಆ ಮನೆಯ ಪಹರೆಗೆ ಹೋದ ಪೋಲೀಸರ ಗುಂಪಿನ ಮುಖ್ಯಸ್ತನು ಸಾರ್ಜಂಟ ಪೋಲೋ ಎಂಬವನಿದ್ದನು. ಅವನು ಮಹತ್ವದ ಆ ಕಾಗದ ಪತ್ರಗಳನ್ನೆಲ್ಲ ತನ್ನ ಡೆಸ್ಕಿನಲ್ಲಿ ಭದ್ರವಾಗಿರಿಸಿದ್ದನು; ಮತ್ತು ಕೈದಿಗಳನ್ನು ಜೇಲಿನೊಳಗಿನ ಬೇರೆ ಬೇರೆ ಕೋಣೆಗಳಲ್ಲಿ ಸೇರಿಸಿ ಭದ್ರವಾದ ಪಹರೆಯನ್ನಿಟ್ಟಿದ್ದನು; ಆದರೆ ಬ್ಲೇಕನು ಆಗ ಆ ಕೈದಿಗಳನ್ನಾಗಲಿ. ಕಾಗದ-ಪತ್ರಗಳನ್ನಾಗಲಿ ನೋಡುವ ಹವ್ಯಾಸಕ್ಕೆ ತೊಡಗಲಿಲ್ಲ. ಅವನು ಅಲ್ಲಿ ನಡೆದ ಸಂಗತಿಯನ್ನೆಲ್ಲ ಪೋಲೋನಿಂದ ಕೇಳಿಕೊಂಡವನೇ, ರಿಚರ್ಡನನ್ನು ಕುರಿತು: "ತಮ್ಮಾ ರಿಚರ್ಡಾ, ನಾವು ಇನ್ನು ಒಂದು ನಿಮಿಷವನ್ನೂ ವ್ಯರ್ಥವಾಗಿ ಕಳೆಯುವಂತಿಲ್ಲ. ನಮ್ಮ ಪ್ರಯತ್ನಗಳಿಗೆ ಈಗ ಬಹುಮಟ್ಟಿಗೆ ಯಶ ದೊರೆತಿದ್ದರೂ, ಮುಖ್ಯ ಕೆಲಸವು ಬಾಕಿಯೇ ಉಳಿದಿವೆ. ಈ ಪುಂಡರ ಮುಖ್ಯಸ್ತನಿನ್ನೂ ನಿರಾಪದನೇ ಆಗಿರುತ್ತಾನೆ ತನ್ನ ತಂಡದ ಜನರು ಪೋಲೀಸರಿಂದ ಬಂಧಿಸಲ್ಪಟ್ಟಿರುವರೆಂಬ ಸಂಗತಿಯು ಆತನಿಗೆ ತಿಳಿದ ಕೂಡಲೆ, ಅವನು ಸಿಟ್ಟಿನಿಂದ ಅಧೀರನಾಗಿ, ನಿನ್ನ ತಂದೆಯನ್ನು ಕೊಲ್ಲಬಹುದಾಗಿದೆ. ಮೇರಿಯ ಜೀವಕ್ಕಾದರೂ ವಿಪತ್ತುಂಟಾಗದಿರದು. ಆದುದರಿಂದ ಈಗಿಂದೀಗಲೆ ಎಷ್ಟು ಜನ ಪೋಲೀಸರನ್ನು ಹೊರಡಿಸಬಲ್ಲೆಯೋ, ಅಷ್ಟು ಜನರನ್ನು ಹೊರಡಿಸು ನಾನು ಈ ಕ್ಷಣವೇ ಅವರೊಡನೆ ಬ್ಲ್ಯಾಗ್ಸಮನ್ ಸ್ಟ್ರೀಟಿನೊಳಗಿನ ಆ ಮನೆಗೆ ತೆರಳುತ್ತೇನೆ. ಮತ್ತೊಬ್ಬ ಸಾರ್ಜಂಟನು ತನ್ನೊಡನೆ ಕೆಲವು ಶಿಪಾಯಿಗಳನ್ನು ತಕ್ಕೊಂಡು ಅದಕ್ಕೆ ಸಮೀಪಿಸಿದ ಮನೆಗಳನ್ನೆಲ್ಲ ಜಡತಿ ಮಾಡಲಿ. ಉಷಂಡ ಚಂಡನಾಗಲಿ, ಆತನ ಯಾವದೊಬ್ಬ ಅನುಯಾಯಿಯಾಗಲಿ ಅಲ್ಲಿಂದ ಹೊರಬಿದ್ದು ಹೋಗದಂತೆ ನಾನು ಅವರ ವ್ಯವಸ್ಥೆಯನ್ನು ಮಾಡುವೆನು. ಆ ಸಾರ್ಜಂಟನು ಸುತ್ತಲೂ ಭದ್ರವಾದ ಪಹರೆಯನ್ನಿರಿಸಿ, ಬಳಿಕ ನನ್ನನ್ನು ಬಂದು ಕೂಡಿಕೊಳ್ಳಲಿ ನಂತರ ನಾನೂ ಅವನೂ ಸೇರಿಯೇ ಉಷಂಡ ಚಂಡನ ಆ ಗುಪ್ತ ಗಹ್ವರವನ್ನು ಶೋಧಿಸುವೆವು ನೀನೂ ಸ್ಮಿತ್ಸನೂ ಕೆಲ ಜನ ಪೋಲೀಸರೊಡನೆ ಅತ್ತ ಕಡೆಯ ಆ ಕಮಲಾಲಯದೊಳಗಿನ ಆ ಪರದೆಯ ಹಿಂದಿನ ಮೆಟ್ಟಿಲುಗಳ ಬಳಿಗೆ ಬಂದು ಕಾಯ್ರಿ. ನಿಮ್ಮೊಡನೆ ಎರಡು-

ಮೂರು ನೂಲಿನ ಹಗ್ಗಗಳೂ, ನೂಲಿನ ಹಗ್ಗದಿಂದ ಮಾಡಲ್ಪಟ್ಟ ಏಣಿಗಳೂ ಇರಲಿ. ಮೋರೀ ವಿಭಾಗಗಳನ್ನು ಎಲ್ಲಿ ನೆರೆಯಿಟ್ಟಿರುವರೆಂಬದು ಸ್ಮಿತ್ಥನಿಗೆ ಚೆನ್ನಾಗಿ ಗೊತ್ತಿದೆ. ಆದರಿಂದ ನೀವಿಬ್ಬರೂ ಅಲ್ಲಿಗೆ ಹೋಗಿ, ಅವಳ ಬಂಧಮುಕ್ತತೆಗೆ ಪ್ರಯತ್ನಿಸಿರಿ. ನನ್ನ ಕೆಲಸವಾದ ಬಳಿಕ ನಾನು ನನ್ನ ಸಂಗಡಿಗರೊಡನೆ ನಿಮ್ಮನ್ನು ಬಂದು ಸೇರುವೆನು."

ಬ್ಲೇಕನು ಉಪಂಡ ಚಂಡನನ್ನು ಸೆರೆ ಹಿಡಿಯುವ ಸಲುವಾಗಿ-ಸಿಂಹನನ್ನು ಕೊಲ್ಲಲಿಕ್ಕೆ ಶಾರ್ದೂಲವು ಹವಣಿಸುವಂತೆ-ಈ ಬಗೆಯ ವ್ಯವಸ್ಥೆ ಮಾಡಿದ್ದೇನೊ ನಿಜವು; ಆದರೆ ಅವನನ್ನು ಜೀವಂತಸ್ಥಿತಿಯಲ್ಲಿ ಸೆರೆ ಹಿಡಿಯುವದಾಗುವದೋ-ಇಲ್ಲವೋ ಎಂಬದನ್ನು ಅವನು ನಿಶ್ಚಯಿಸದಾಗಿದ್ದನು. ಮೇಲಾಗಿ ಇನ್ಸಪೆಕ್ಟರ ಡೆಫೆನಟನನ್ನು ಜೀವಂತಸ್ಥಿತಿಯಲ್ಲಿ ಮತ್ತೆ ಕಂಡೇನೆಂಬ ಆಶೆ-ಭರವಸೆಗಳನ್ನೂ ಆತನು ಧರಿಸಲಾರದವನಾಗಿದ್ದನು. ಆತನ ದುರ್ಮರಣದ ಸಂದೇಹದಿಂದ ಬ್ಲೇಕನು ಬಹು ವ್ಯಾಕುಲನಾಗಿದ್ದನು.

---

೧೭ನೇ ತೆರೆ.

## ದೃಢತೆಯಿಂದಾದ ಪ್ರಯೋಜನ.



ಅಂದೇ ರಾತ್ರಿಯ ಹನ್ನೊಂದು ಗಂಟೆಯ ಸಮಯಕ್ಕೆ ಬ್ಲೇಕನು ಹನ್ನೆರಡು ಜನ ಪೋಲೀಸರೊಡನೆ ಬ್ಲ್ಯಾಕ್ಸಮನ್ ಸ್ಟ್ರೀಟಿನೊಳಗೆ ಹೊಕ್ಕನು. ಮುಂದೆ ಕೆಲ ನಿಮಿಷಗಳಲ್ಲಿಯೇ ಸಾರ್ಜಂಟ ಒಬ್ಬನ್ನನು ಅವನ ಬಳಿಗೆ ಬಂದು: "ಬ್ಲೇಕರೇ, ನಾನು ನನ್ನ ಸಂಗಡವಿದ್ದ ಸಾಲ್ವತ್ತು ಜನ ಪೋಲೀಸರೊಡನೆ ಈ ಸುತ್ತಮುತ್ತಲಿನ ಮನೆಗಳಿಗೆ ಪಹರೆ ಮಾಡುತ್ತಿರುವೆನು. ಡ್ಯೂಕ ರಿಚರ್ಡರೂ ಸ್ಮಿತ್ಥನೂ ಕೆಲ ಜನ ಪೋಲೀಸರೊಡನೆ ಕಮಲಾಲಯಕ್ಕೆ ಹೋಗಿರುತ್ತಾರೆ. ಅವರು ಈಗಾಗಲೆ ಲೀ ಕೋಯಂಗನನ್ನು ಸೆರೆ ಹಿಡಿದಿರುತ್ತಾರೆ; ಆದರೆ ಆತನು ಯಾವ ಸಂಗತಿಯನ್ನೂ ಹೇಳದಾಗಿದ್ದಾನೆ."

ಕೂಡಲೆ ಬ್ಲೇಕನು ಆ ಪೋಲೀಸರನ್ನು ಸಂಗಡ ಕರಕೊಂಡು ಈ ಮೊದಲು ವರ್ಣಿಸಲ್ಪಟ್ಟಂಥ ಮೋಟ್ಟಗಳನ್ನು ಏರಿದನು; ಮತ್ತು ಪ್ರಕಾಶಮಾನಗಳಾದ ದೀಪಗಳನ್ನು ಹಚ್ಚಿ ಅಲ್ಲಿಯ ಪ್ರತಿಯೊಂದು ಕೋಣೆಯನ್ನು ಶೋಧಿಸತೊಡಗಿದನು; ಆದರೆ ಆ ಯಾವ ಕೋಣೆಯಲ್ಲೂ ಒಬ್ಬ ಮನುಷ್ಯನೂ ಇರಲಿಲ್ಲ. ಯಾವ ಕೋಣೆಯಲ್ಲಿ ಚಾಊ ಇಯಾಂಗನ ಹೆಣವು ಬಿದ್ದುಕೊಂಡಿ

ದ್ದಿತೋ, ಆ ಕೋಣೆಯೊಳಗಿನ ಪಾವಟಿಗೆಗಳನ್ನೇರಿ ಮೇಲಟ್ಟಕ್ಕೆ ಸಾಗಿದರು. ಆ ಮೇಲಟ್ಟದ ಛಾವಣಿಯೊಳಗಿಂದ ಬೇರೆ ಮೇಲಟ್ಟಗಳನ್ನು ಸೇರಲಿಕ್ಕೆ ಕಠಿಣವಾಗಲಿಲ್ಲ. ಈ ಮೇಲಟ್ಟಗಳಲ್ಲಿಯ ಯಾವದೊಂದು ಕೋಣೆಯಲ್ಲೇ ಉಪಂಡಚಂಡನು ಅಡಗಿ ಕುಳಿತಿರಬೇಕೆಂದು ಬ್ಲೇಕನ ತರ್ಕವಿದ್ದಿತು; ಆದರೆ ಅಲ್ಲಿಯು ಯಾವ ಕೋಣೆಯಲ್ಲೂ ಆತನ ಸುಳಿವು ಹತ್ತಲೇ ಇಲ್ಲ. ಮುಂದೆ ಹಾಗೆಯೇ ಹೋಗಲು, ಅವರಿಗೆ ಅಲ್ಲಿಯದೊಂದು ಮನೆಯಲ್ಲಿ ರಿಚರ್ಡ-ಸ್ಮಿತ್ಥರ ಭೆಟ್ಟಿಯಾಯಿತು.

ಆಗ ಸ್ಮಿತ್ಥನು:—"ಒಡೆಯರೇ, ತಾವು ಇತ್ತ ಕಡೆಗೇ ಬಂದು ಬಿಟ್ಟಿರಲ್ಲ! ಝಡತಿಯ ಕೆಲಸದಿಂದೇನು ಪ್ರಯೋಜನವಾಯಿತು?"

"ನಮ್ಮ ಪ್ರಯತ್ನಗಳೆಲ್ಲವೂ ನಿರರ್ಥಕವಾದವು. ನಿಮಗೆ ಮೇರಿಯ ಪತ್ತೆಯು ಹತ್ತಿತೇ?"

"ಒಡೆಯರೇ, ಇಲ್ಲ. ಈ ಮೊದಲು ಅವಳನ್ನು ಯಾವ ಕೋಣೆಯಲ್ಲಿ ಬಂಧಿಸಿಟ್ಟಿದ್ದರೋ, ಇಂದು ಅವಳು ಅಲ್ಲಿಲ್ಲ. ಅವಳನ್ನು ಬೇರೆ ಎಲ್ಲಿಗೆ ಒಯ್ದಿರುವರೋ ತಿಳಿಯದಾಗಿದೆ. ಅವಳನ್ನು ಶೋಧಿಸುವ ಬಗ್ಗೆ ನಾವು ಕೊಂಚವೂ ಮನಸರಿ ಮಾಡಿಲ್ಲ."

ಆಗ ರಿಚರ್ಡನು ನಿರಾಶೆಯಿಂದ:—"ಮೇರಿಯನ್ನೂ ನನ್ನ ತಂದೆಯನ್ನೂ ಮತ್ತೆಲ್ಲಿಗೋ ಒಯ್ದಿರಬೇಕು; ಇಲ್ಲವೆ ಕೊಲೆಗೈದಿರಬೇಕು. ಇಲ್ಲಿಯ ಪ್ರತಿಯೊಂದು ಮನೆಯಲ್ಲೂ ಒಂದು ಪಿಳ್ಳೆ ಕೂಡ ಇರುವದಿಲ್ಲ. ಪೋಲೀಸರು ಇಲ್ಲಿಗೆ ಬರುವ ಮೊದಲೇ ಉಪಂಡಚಂಡನು ತನ್ನ ಪರಿವಾರದೊಡನೆ ಎತ್ತೋ ಮಾಯವಾಗಿರುವನೆಂದೂ ಮೇರಿಯ ಹಾಗು ಅಪ್ಪನ ಹೆಣಗಳನ್ನು ಇಲ್ಲಿಯೇ ಎಲ್ಲಿಯಾದರೂ ಮುಚ್ಚಿಟ್ಟಿರಬೇಕೆಂದೂ ನನಗನಿಸುತ್ತಿದೆ."

"ನಿನ್ನ ಅನುಮಾನವು ನಿಜವೆಂದು ತೋರುವದಿಲ್ಲ. ಉಪಂಡಚಂಡನೂ ನಿನ್ನ ತಂದೆಯೂ ಇಲ್ಲಿಯೇ ಸಮೀಪದಲ್ಲೆಲ್ಲಾದರೂ ಇರಬೇಕು. ಮೇರಿಯಾದರೂ ಜೀವದಿಂದಿರುವಳೆಂದೇ ನನ್ನ ನಂಬಿಗೆಯು; ಆದರೆ ದುರ್ಭಾಗ್ಯಪೀಡಿತರಾದ ನಮಗೆ ಮಾತ್ರ ಇನ್ನೂ ಅವರ ಸಂಧಾನವು ಹತ್ತಲೊಲ್ಲದು." ಬ್ಲೇಕನು ನುಡಿದನು.

ಬಳಿಕ ಬ್ಲೇಕನು ಆ ಎಲ್ಲ ಪೋಲೀಸ ಸೈನ್ಯದೊಡನೆ ಮತ್ತೊಮ್ಮೆ ಆ ಎಲ್ಲ ಮನೆಗಳನ್ನು ಝಡತಿ ಮಾಡತೊಡಗಿದನು. ಪ್ರತಿಯೊಂದು ಮನೆಯನ್ನೂ, ಅದರ ಮೇಲಿನ ಅಟ್ಟ-ಮಾಳಿಗೆಗಳನ್ನೂ, ಅವುಗಳಲ್ಲಿಯ ಪ್ರತಿಯೊಂದು ಕೋಣೆ

ಯನ್ನೂ ಅವನು ನಿರೀಕ್ಷಿಸಹತ್ತಿದನು. ಆದರೂ ಅವರ ಪ್ರಯತ್ನಕ್ಕೆ ಯಶವು ದೊರೆಯಲಿಲ್ಲ. ಕ್ರಮೇಣ ರಾತ್ರಿಯು ಹೆಚ್ಚಿತು. ಇಷ್ಟರಲ್ಲಿ ಕಮಲಾಲಯದಲ್ಲಿ ಎಂಟು ಜನ ಚೀನಿಗರು ಸೆರೆ ಹಿಡಿಯಲ್ಪಟ್ಟರೆಂಬ ಸಂಗತಿಯು ಬ್ಲೇಕನಿಗೆ ತಿಳಿಯಿತು. ಅವರೆಲ್ಲರೂ ಉಪಂಡ ಚಂಡನ ಅನುಯಾಯಿಗಳಾಗಿದ್ದರೂ, ಅವರು ಯಾವ ಮಾತನ್ನೂ ಹೇಳಲಿಲ್ಲ ಪ್ರತಿಯೊಬ್ಬರಿಗೆ ನಾಲ್ಕೆಂಟು ಏಟು ಕೊಟ್ಟರೂ ಪಿಟ್ಟೆನ್ನದೆ ಎಲ್ಲರೂ ನಿಸ್ತಬ್ಧರಾಗಿದ್ದರು.

ಆಗ ಬ್ಲೇಕನು ಹತಾಶಭಾವದಿಂದ ಅನ್ನುತ್ತಾನೆ:—"ಉಪಂಡ ಚಂಡನು ಹೋದಗ್ದೆಲ್ಲಿಗೆಂಬದು ತಿಳಿಯುವದೇ ಕಠಿಣವಾಗಿದೆ. ಅವನು ನಿಶ್ಚಯವಾಗಿಯೂ ಯಾವುದೊಂದು ಗುಪ್ತಸ್ಥಳದಲ್ಲಿ ಅಡಗಿ ಕುಳಿತಿರಬೇಕು. ಅವನು ಅಡಗಿರುವ ಸ್ಥಳವು ಭೂಗರ್ಭದಲ್ಲಿಯ ಯಾವುದೊಂದು ಗುಪ್ತವಾದ ಗವಿಯಾಗಿರಬೇಕು; ಇಲ್ಲವೆ ಅವನಿದ್ದ ಮನೆಯ ಸುಳಿವೇ ನಮಗಿನ್ನೂ ಹತ್ತಿರಲಿಕ್ಕಿಲ್ಲ."

ಮತ್ತೆ ಕೆಲವು ಮನೆಗಳ ಝಡತಿ ಮಾಡಲು, ಹಲವು ಜನ ಚೀನಿಗರನ್ನು ಸೆರೆ ಹಿಡಿದರು. ಅವರಲ್ಲಿಯ ಕೆಲವರು ಮಂಚಗಳ ಕೆಳಗೆ, ಕೆಲವರು ಮನೆಯಲ್ಲಿಯ ದೊಡ್ಡ ಬೀರು-ಕಪಾಟುಗಳಲ್ಲಿ ಅಡಗಿಕೊಂಡು ಕುಳಿತಿದ್ದರು. ಅವರಲ್ಲಿಯ ಎಷ್ಟೋ ಜನರ ಜುಟ್ಟ-ಚಂಡಿಕೆಗಳನ್ನು ಪೋಲೀಸರಿಂದ ಕತ್ತರಿಸಿದರು! ಆದರೂ ಅವರ ಬಾಯಿಂದ ಶಬ್ದಗಳೇ ಹೊರಡಲಿಲ್ಲ. ಅವರಿಗೆ ಎಂಥ ಭಯ-ಭೀತಿಗಳನ್ನು ತೋರಿದರೂ, ನಿಜ ಸಂಗತಿಯನ್ನು ಹೇಳಿದರೆ ನಿಮ್ಮನ್ನು ಬಿಟ್ಟು ಬಿಡುವೆವೆಂಬ ಪ್ರಲೋಭವನ್ನು ತೋರಿದರೂ ಅವರಿಂದ ಯಾವ ಸಂಗತಿಯೂ ಹೊರಬೀಳಲಿಲ್ಲ; ಹಾಗು ಆ ಝಡತಿಯ ಕಾರ್ಯದಿಂದ ಯಾವ ಪ್ರಯೋಜನವೂ ಆಗಲಿಲ್ಲ.

ಬ್ಲೇಕನು ಆ ರಾತ್ರಿಯಲ್ಲಿ ಆ ಚಾಯ್ನಾಫೀಲ್ಡಿನ ಮನೆಗಳೊಳಗಿನ ಬೇರೆ ಬೇರೆ ಕೋಣೆಗಳನ್ನು ಒಂದೇ ಸವನೆ ಹುಡುಕುತ್ತ ನಡೆದಿರಲು, ಒಂದು ಮನೆಯ ಒಂದು ಕೋಣೆಯಲೊತ್ತಟ್ಟಿಗಿದ್ದ ಒಂದು ಗುಪ್ತವಾದ ಬಾಗಿಲವನ್ನು ಕಂಡು ಹಿಡಿದನು. ಆ ಕದದ ಬಣ್ಣಕ್ಕೂ ಗೋಡೆಯ ಬಣ್ಣಕ್ಕೂ ಸ್ವಲ್ಪವೂ ಭೇದವಿರದ್ದರಿಂದ, ಅದನ್ನು ಒಮ್ಮೆಲೆ ಕಂಡು ಹಿಡಿಯುವದು ಅಶಕ್ಯವಾಗಿತ್ತು. ಕೂಡಲೆ ನಾಲ್ಕಾರು ಜನರು ಸೇರಿ ದೂಡಿ-ದೂಡಿ ಆ ಕದವನ್ನು ಮುರಿದರು.

ಆ ಬಾಗಿಲದೊಳಗಿಂದ ಅವರು ಯಾವ ಕೋಣೆಯಲ್ಲಿ ಪ್ರವೇಶಿಸಿದರೋ, ಅದನ್ನು ಕಂಡು ಬ್ಲೇಕನು ಇದು ಮೊದಲು ಉಪಂಡ ಚಂಡನೊಡನೆ ಮಾತು-ಕಥೆಗಳನ್ನಾಡಿದ ಕೋಣೆಯೇ ಇವೆಂದು ಗುರುತಿಸಿದನು; ಆದರೆ ಈಗ ಅಲ್ಲಿ ಯಾರೊಬ್ಬರ ಸುಳಿವೂ ಇರಲಿಲ್ಲ.

ಬ್ಲೇಕನು ಆ ಕೋಣೆಯು ಸಂದಿಮೂಲೆಗಳನ್ನೆಲ್ಲ ಪರೀಕ್ಷಿಸಿದ ನಂತರ, ಅದರ ಗೋಡೆಗಳ ಕಡೆಗೆ ಸೂಕ್ಷ್ಮವಾಗಿ ಅವಲೋಕಿಸತೊಡಗಿದನು. ಅವನು ಅಲ್ಲಿಯ ಪ್ರತಿಯೊಂದು ಗೋಡೆಗಳನ್ನು ಕೈಮುಟ್ಟಿ ಬಡಿದು ನೋಡುತ್ತ ಕಡೆಗೊಂದು ಗೋಡೆಯು ಬಳಿಗೆ ಬಂದು ನಿಂತುಕೊಂಡನು. ಅವನು ಅದರ ಒಂದು ಭಾಗ ವನ್ನು ಮೆಲ್ಲನೆ ತಟ್ಟುತ್ತಲೆ ಅದು ಪೊಳ್ಳಾಗಿದೆಯೆಂಬದು ಅವನಿಗೆ ಕೂಡಲೆ ಕಂಡು ಬಂದಿತು. ಮತ್ತೆ ಮತ್ತೆ ಅದನ್ನು ಬಡಿಯು ಹತ್ತಲು, ಅದು ಧಪ್ ಧಪ್ ಎಂದು ಯಾವುದೊಂದು ತೆರವಾದ ಸಂದುಕದ ಮುಚ್ಚಳದ ಮೇಲಿನ ಕರಾಘಾತದಂತೆ ಧ್ವನಿಗೊಡಹತ್ತಿತು. ಆ ಧ್ವನಿಯನ್ನು ಕೇಳಿ ಬ್ಲೇಕನು ಒಮ್ಮೆಲೆ ಗಟ್ಟಿಯಾಗಿ:- "ಈಗ ಉಪಂಡ ಚಂಡನ ಪತ್ತೆಹತ್ತಿದಂತಾಯಿತು!" ಎಂದು ಕೂಗಿದನು.

ಆ ಮೇಲೆ ಅವನು ಆ ಪೊಳ್ಳು ಗೋಡೆಯು ಬಾಗಿಲವನ್ನು ಹುಡುಕಲು ಅಶಕ್ತನಾದನು. ಅದನ್ನು ಪತ್ತೆಹಚ್ಚುವದು ಅಷ್ಟೊಂದು ಸಹಜವಾದ ಕೆಲಸವಾಗಿ ರಲಿಲ್ಲ. ಬ್ಲೇಕನ ಆ ಮುಂದ ಕೆಲಸವು ರಿಚರ್ಡನಿಗೆ ಸರಿಬೀಳದ್ದರಿಂದ ಅವನು ಅಲ್ಲಿಯದೊಂದು ಖುರ್ಚಿಯನ್ನೆತ್ತಿಕೊಂಡು ಅದನ್ನು ಆ ಗೋಡೆಯು ಮೇಲೆ ಅಲ್ಲಲ್ಲಿ ಬಲವಾಗಿ ಅಪ್ಪಳಿಸಲಾರಂಭಿಸಿದನು. ಕೆಲ ಜನ ಪೋಲೀಸರು ತಮ್ಮಲ್ಲಿಯ ಬಂದೂಕಿನಿಂದಲೂ ಲಾಠಿಯಿಂದಲೂ ಆ ಗೋಡೆಯು ಮೇಲೆ ಒಡಿಯುಹತ್ತಿದರು.

ಆ ಗೋಡೆಯು ಒಂದು ಭಾಗದಲ್ಲೊಂದು ಗುಪ್ತವಾದ ಸ್ಪ್ರಿಂಗಿದ್ದಿತು. ಹೀಗೆ ಹಲವರು ಹಲವು ಬಗೆಯಿಂದ ಆ ಗೋಡೆಯನ್ನು ತಟ್ಟುತ್ತಿರಲು, ಯಾರ ಆಘಾತದಿಂದಲೋ ಆ ಸ್ಪ್ರಿಂಗು ಕಳಚಿ ಹೋಯಿತು; ಹಾಗು ಅಲ್ಲಿಯ ಒಂದು ಹಲಗೆಯು ಕಳಚಿ ನೆಲಕ್ಕೆ ಬೀಳಲು, ಒಂದು ಕಿಂಡಿಯು ಕಾಣಿಸಹತ್ತಿತು. ಬ್ಲೇಕನು ಕೆಲಜನ ಅನುಚರರೊಡನೆ ಆ ಕಿಂಡಿಯಲ್ಲಿ ಹೊಕ್ಕನು. ಆ ಕಿಂಡಿ ಯೊಳಗಿಂದ ಅವರೆಲ್ಲರೂ ಒಂದು ಸುಸಜ್ಜಿತವಾದ ದಿವಾಣಖಾನೆಯನ್ನು ಪ್ರವೇಶಿ ಸಿದರು. ಅಲ್ಲಿ ಎಲ್ಲ ಕಡೆಗೂ ಹೊರಳಿ ಹೊರಳಿ ನೋಡಿದರೂ ಯಾರೂ ಕಣ್ಣಿಗೆ ಕಾಣಿಸಲಿಲ್ಲ; ಆದರೆ ಆ ದಿವಾಣಖಾನೆಯು ಒಂದು ಮೂಲೆಯಲ್ಲೊಂದು ಬಾಗಿಲವಿರುವದು ಗೋಚರವಾಯಿತು. ಅದು ಭದ್ರವಾಗಿಕ್ಕಿರದ್ದರಿಂದ ಅದನ್ನು ತೆರೆದು, ಎಲ್ಲರೂ ಅದರಾಚೆಯು ಕೋಣೆಯಲ್ಲಿ ಹೋದರು.

ಆ ಹೊಸ ಕೋಣೆಗೆ ಅದೊಂದೇ ಪ್ರದೇಶದ್ವಾರವಿದ್ದು ಬೇರೆ ದಿಕ್ಕುಗಳ ಲ್ಲೆಲ್ಲ ಭದ್ರವಾದ ಗೋಡೆಗಳಿದ್ದವು. ಆ ಗೋಡೆಯು ಹೊರಮಗ್ಗಲಿಗೆ ಯಾವ ಹಲವು ಕೋಣೆಗಳಿದ್ದವೋ ಅವುಗಳೊಳಗಿಂದ ಈ ಕೋಣೆಯನ್ನು ಪ್ರವೇಶಿಸಲಿಕ್ಕೆ ಆಸ್ಪದವಿರಲಿಲ್ಲ. ಅಂಥ ಆ ನಾಲ್ಕೂ ಕಡೆಯಿಂದ ಅತಿ ಭದ್ರವಾದ ಆ ಗುಪ್ತ ಕೋಣೆಯನ್ನು ಹೊಕ್ಕು ಬ್ಲೇಕನು ಯಾವ ರೋಮಾಂಚಿತ ದೃಶ್ಯವನ್ನು

ಕಂಡನೋ, ಅದರಿಂದ ಅವನ ಸರ್ವಾಂಗವೂ ಥರಗುಟ್ಟಿ ನಡುಗಲಾರಂಭಿಸಿತು. ರಿಚರ್ಡನು ರೋಷಗೊಂಡರೂ ಸ್ತಂಭದಂತೆ ಸುಮ್ಮನೆ ನಿಂತುಬಿಟ್ಟನು!

ಆ ಕೋಣೆಯಲ್ಲೊಂದು ಅತ್ಯಂತ ಪ್ರಕಾಶಮಾನವಾದ ದೀಪವು ಉರಿಯುತ್ತಿತ್ತು. ಎದುರಿಗಿನ ಕಟ್ಟೆಯ ಮೇಲೊಂದು ತೀರ ದೊಡ್ಡದಲ್ಲದಂತಹ ಬುದ್ಧ ಮೂರ್ತಿಯು ಸ್ಥಾಪಿಸಲ್ಪಟ್ಟಿತ್ತು. ಆ ಮೂರ್ತಿಯ ಎದುರಿನಲ್ಲೊಂದು ಬೆಲೆಯುಳ್ಳ ರತ್ನಗಂಬಳಿಯು ಹಾಸಲ್ಪಟ್ಟಿದ್ದು, ಅದರ ಮೇಲೆರಡು ಹೆಣಗಳು ಬಿದ್ದುಕೊಂಡಿದ್ದವು! ಇನ್ಸಪೆಕ್ಟರ ಡೆಭೆನಟ ಮತ್ತು ಉಷಂಡ ಚಂಡ ಇವರ ಶವಗಳು ಒಂದರಮಗ್ಗಲಲ್ಲೊಂದು ಬಿದ್ದಿದ್ದವು. ಸಮೀಪದಲ್ಲಿಯೇ ಒಂದು ಎತ್ತರವಾದ ಸ್ಟೂಲದಿತ್ತು. ಅದರ ಮೇಲೆರಡು ಹಳದೀಬಣ್ಣದ ರೇಶಿಮೆಯಿಂದ ಮಾಡಲ್ಪಟ್ಟ ಸುಲಿಕೆಗಳೂ, ಎರಡು ಒಳ್ಳೇ ಹದನಾದ ಚೂರಿಗಳೂ, ದ್ರಾವಕದಿಂದ ತುಂಬಿದ ಒಂದು ಸಣ್ಣ ಕುಪ್ಪಿಯೂ, ಒಂದೆರಡು ಹಗ್ಗಗಳೂ ಇದ್ದವು. ಚೂರಿಗಳಿಗಾಗಲಿ ಹಗ್ಗಗಳಿಗಾಗಲಿ ರಕ್ತವು ಸ್ವಲ್ಪವೂ ಹತ್ತಿರಲಿಲ್ಲ

ಬೇಕನು ಹತಾಶನಾಗಿ ಮುಂದುಗಾಣದೆ ಆ ಹೆಣಗಳ ಹತ್ತರ ಹೋಗಿ ಕುಳಿತುಕೊಂಡನು. ಅವನು ಅವುಗಳನ್ನು ಪರೀಕ್ಷಿಸಿ ಗಂಭೀರ ದನಿಯಿಂದ: ಇವರಿಬ್ಬರೂ ಸತ್ತಿರುತ್ತಾರೆ. ಇವರು ಸತ್ತು ಎರಡು-ಎರಡೂವರೆ ತಾಸಾಗಿರಬಹುದಾಗಿದೆ. ನಾನು ಈ ಮೊದಲು ಯಾವ ವಿಷಯಕ್ಕೆ ಅನುಮಾನಗ್ರಸ್ತನಾಗಿದ್ದೆನೋ, ಕಡೆಗೆ ಅದೇ ನಿಜವಾಗಿ ಹೋಗಿದೆ! ಉಷಂಡ ಚಂಡನಿಗೆ ತನ್ನ ಅನುಚರರು ಪೋಲೀಸರಿಂದ ಬಂಧಿತರಾದ ಸಂಗತಿಯು ತಿಳಿದು, ಇನ್ನು ತಾನೂ ಅವರ ಕೈಗೆ ಸಿಗದ ಹೊರತು ಗತ್ಯಂತರವಿಲ್ಲೆಂಬದು ಗೊತ್ತಾಗಲು, ತನ್ನ ತಂದೆಯು ವಿಷಯಕವಾಗಿದ್ದ ಆತನ ಸಿಟ್ಟು ಒಮ್ಮೆಲೆ ಮರಕಳಿಸಿ ಅವನು ಹತವೀರ್ಯನಾಗಿರಬೇಕು. ಆಗ ಅವನು ತನ್ನ ತಂದೆಯನ್ನು ಕ್ಷಮಿಸಲಾರದವನಾದಗೂ ಸ್ವಹಸ್ತದಿಂದ ಪಿತೃಹತ್ಯೆ ಮಾಡುವದು ಅವನಿಗೆ ಸರಿದೋರಿರಲಿಕ್ಕಿಲ್ಲ. ಅವನು ತನ್ನ ಕುಲದೇವರೆದುರಿಗೆ ತನ್ನ ತಂದೆಯ ನಿಷ್ಠುರತೆ-ಅಸಡ್ಡೆಗಳ ಪ್ರತಿಫಲವನ್ನು ಅವನಿಗೆ ಕೊಟ್ಟೇ ತೀರುವೆನೆಂದು ಪ್ರತಿಜ್ಞೆ ಮಾಡಿದ್ದನಾದ್ದರಿಂದ, ಅದೇ ದೇವರೆದುರಿಗೆ ಡೆಭೆನಟನಿಗೆ ಆತ್ಮಹತ್ಯೆ ಮಾಡಿಕೊಳ್ಳಲಿಕ್ಕೆ ನಿರ್ಬಂಧಿಸಿ, ಆ ಮೇಲೆ ತಾನೂ ಆತ್ಮಹತ್ಯೆ ಮಾಡಿಕೊಂಡಿರಬೇಕು. ಇವರೀರ್ವರ ನಡುವೆ ಏನೇನು ಮಾತು-ಕಥೆಗಳಾದವೆಂಬದನ್ನು ಅನುಮಾನಿಸುವದು ಅಶಕ್ಯವಾಗಿರುತ್ತದೆ. ಆದರೂ ಅವನು ತನ್ನ ತಂದೆಯ ಎದುರಿಗೆ ಆತ್ಮಹತ್ಯೆಯ ಸಾಮುಗ್ರಿಗಳನ್ನೆಲ್ಲ ಇರಿಸಿರುತ್ತಾನೆ. ರೇಶ್ಮೆಯ ಸುಲಿಕೆ, ವಿಷದ ಕುಪ್ಪಿ, ಹದನಾದ ಚೂರಿ, ನೇಣಿನ ಹಗ್ಗ ಮುಂತಾದ ಚತುರ್ವಿಧ ಸಾಮುಗ್ರಿಗಳೂ ಸಜ್ಜಾಗಿರಿಸಲ್ಪಟ್ಟಿವೆ. ಚೀನದೇಶದಲ್ಲಿ ಈ ಬಗೆಯ ಚತು

ವಿಧ ಆತ್ಮಹತ್ಯೆಯ ಉಪಾಯಗಳೇ ಪ್ರಚಾರದಲ್ಲಿರುತ್ತವೆ. ರಿಚರ್ಡಾ, ಈ ನಾಲ್ಕೂ ಉಪಕರಣಗಳಲ್ಲಿಯ ವಿಷದ ಕುಪ್ಪಿಯಿಂದಲೇ ನಿನ್ನ ತಂದೆಯೂ ಅಣ್ಣನಾದ ಉಷಂಡ ಚಂಡನೂ ತಮಗೆ ಮರಣವನ್ನು ತಂದುಕೊಂಡಿರುವಂತೆ ತೋರುತ್ತಿದೆ''

ಅದನ್ನು ಕೇಳಿ ರಿಚರ್ಡನು: ''ಇದೆಂಥ ಮೈಮೇಲೆ ಮುಳ್ಳೇಳುವಂತಹ ಭೀಷಣ ಕೃತಿಯು! ನನ್ನ ಹತಭಾಗ್ಯ ತಂದೆಯ ಎಂಥ ಶೋಚನೀಯ ಸ್ಥಿತಿಯಿದು! ಆತನು ಇಪ್ಪತ್ತೈದು ವರ್ಷಗಳ ಪೂರ್ವದಲ್ಲಿ ತಾರುಣ್ಯಾವಸ್ಥೆಯ ಮೋಹದಿಂದ ಕ್ಯಾಂಟನ್ನ ಪಟ್ಟಣದಲ್ಲಿ ಯಾವ ಪಾಪ ಮಾಡಿದ್ದನೋ, ಅದಕ್ಕೆ ಇಂದು ಇಂಥ ಕಠೋರ ಪ್ರಾಯಶ್ಚಿತ್ತವಾಗಬೇಕೇ? ನಾನು ನನ್ನ ತಂದೆಯ ಕೂಡ ಇಲ್ಲಿಯೇ ಇದ್ದಿದ್ದರೆ, ಅವನು ಈ ಬಗೆಯಾಗಿ ಆತ್ಮಹತ್ಯೆ ಮಾಡಿಕೊಳ್ಳುವ ಪ್ರಸಂಗವೇ ಉಂಟಾಗುತ್ತಿರಲಿಲ್ಲ; ಆದರೆ ಆಗ ಹಾಗಾಗುವಂತೆಯೇ ಇದ್ದಿಲ್ಲ.''

''ನಿಜ; ಹಾಗೆ ಮಾಡಲಿಕ್ಕೆ ಬೇರೆ ಉಪಾಯವೇ ಇರಲಿಲ್ಲ. ನಾನು ಪೋಲೀಸರ ದಂಡಿನೊಡನೆ ಇಲ್ಲಿಗೆ ಶಕ್ಯವಾದಷ್ಟು ತೀವ್ರವಾಗಿ ಬಂದರೂ ಈ ಗೌಪ್ಯವಾದ ಸ್ಥಳದ ಪತ್ತೆಯು ನಮಗೆ ಬೇಗನೆ ಹತ್ತಲಿಲ್ಲ.''

''ಬ್ಲೇಕರೇ, ನನ್ನ ತಂದೆಯಂತೂ ಒತ್ತಾಯದಿಂದ ಆತ್ಮಹತ್ಯೆ ಮಾಡಿಕೊಂಡಿರುವನು; ಮೇರಿಯೂ ಒಂದುವೇಳೆ ಕೊಲೆಗೆಯ್ಯಲ್ಪಟ್ಟಿದ್ದರೆ, ನಾನು ಇನ್ನು ಈ ಸಂಸಾರದಲ್ಲಿ ಯಾರ ಸಲುವಾಗೆಂದು ಉಳಿಯಬೇಕು? ನಾನೀಗ ಇಲ್ಲಿಯೇ ಬಿದ್ದಿರುವ ಈ ಚೂರಿಯಿಂದ ಇರಿದುಕೊಂಡು, ನನ್ನ ಎಲ್ಲ ಆಶೆ ಚಿಂತೆಗಳನ್ನೂ ತೊರೆದು ಬಿಡುವೆನು. ನನಗೆ ಈ ಸಂಸಾರದಲ್ಲಿ ಇನ್ನಾವ ಬಂಧನವೂ ಉಳಿದಿಲ್ಲ'' ಎಂದೆಂದು ರಿಚರ್ಡನು ದುಃಖಾತಿರೇಕದಿಂದ ಡೆಫೇನಟನ ಹೆಣದ ಬಳಿಯಲ್ಲಿದ್ದ ಹದನಾದ ಚೂರಿಗೆ ಕೈ ಹಾಕಲು, ಬ್ಲೇಕನು ಅವನ ಕೈಯೊಳಗಿನ ಆ ಚೂರಿಯನ್ನು ಕಸುವಿನಿಂದ ಕಿತ್ತುಕೊಂಡು:—

''ರಿಚರ್ಡಾ, ನೀನು ಇಷ್ಟೊಂದು ಹತಾಶನಾಗಬೇಡ. ತುಸ ಧೈರ್ಯ ತಾಳು. ಉಷಂಡ ಚಂಡನ ಆ ಕ್ರೋಧವು ಮುಖ್ಯವಾಗಿ ನಿನ್ನ ತಂದೆಯ ಮೇಲೆಯೇ ಇದ್ದಿತು. ಆ ಪಿರಂಗಿಯು-ಭಿನ್ನ ಭಿನ್ನ ಜಾತಿಗಳ ರಕ್ತದಿಂದ ಹುಟ್ಟಿದ ಉಷಂಡ ಚಂಡನು-ನಿನ್ನ ತಂದೆಯನ್ನು ಕೊಂದು ತನ್ನ ಪ್ರತಿಹಿಂಸೆಯನ್ನು ತೀರಿಸಿಕೊಂಡಿರುತ್ತಾನೆ. ಮೇರಿಯ ವಿಷಯದಲ್ಲಿ ಆತನ ಸಿಟ್ಟಿರಲಿಕ್ಕೆ ಕಾರಣವಿಲ್ಲ. ಅದರಿಂದ ಅವನು ಅವಳನ್ನು ಕೊಲೆಗೆಯ್ಯುವ ಸಂಭವವಿಲ್ಲ. ಅವಳು ಯಾವ ಅನಿಷ್ಟಕ್ಕೂ ಸಿಕ್ಕುಬೀಳದೆ ಸುಖವಾಗಿರಬೇಕೆಂದು ನನಗನಿಸುತ್ತಿದೆ.''

ರಿಚರ್ಡ:—''ಹಾಗಾದರೆ ನಾವು ಇದು ವರೆಗೆ ಶೋಧಿಸಿದರೂ ಅವಳ ಪತ್ತೆಯು ಎಲ್ಲಿಯೂ ಅದೇಕೆ ಹತ್ತಲಿಲ್ಲ?''

"ಇಷ್ಟರಲ್ಲೇ ಆವಳ ಪತ್ತೆಯು ಹತ್ತೀತು; ಅಧೀರನಾಗಬೇಡ." ಎಂದು ಹೇಳಿ, ಬ್ಲೀಕನು ಅಲ್ಲಿಂದೆದ್ದು ಸಮೀಪದ ಬೇರೆ ಬೇರೆ ಮನೆಗಳನ್ನು ಹುಡುಕ ಹತ್ತಿದನು. ಎಷ್ಟೋ ಮನೆಗಳನ್ನು ಹುಡುಕಿ ಬೇಸತ್ತ ಒಳಿಕ, ಒಂದು ಮನೆ ಯಲ್ಲಿ ಒಂದು ಪರದೆಯಿದ್ದು, ಆ ಪರದೆಯ ಒಳಿಯಲ್ಲಿ ಓರ್ವ ತಾರ್ತರ ದೇಶದ ಹೆಂಗಸು ಬಿಚ್ಚುಗತ್ತಿಯನ್ನು ಹಿಡಿದುಕೊಂಡು ಪಹರೆ ಮಾಡುತ್ತಿದ್ದುದು ಕಂಡಿತು. ಬ್ಲೀಕನು ಪಿಸ್ತೂಲನ್ನು ಕೈಯಲ್ಲಿ ಹಿಡಿದುಕೊಂಡು ಅವಳೆದುರಿಗೆ ಹೋಗಿ, ಒಮ್ಮೆಲೆ ಅವಳ ಕೈಯೊಳಗಿನ ಕತ್ತಿಯನ್ನು ಕಸಿದುಕೊಂಡನು; ಹಾಗು ಅವಳ ಹೆಡಮುರಿಗೆ ಬಿಗಿಸಿದನು. ಅದೆಲ್ಲ ಆಕಸ್ಮಿಕ ಪ್ರಕಾರವನ್ನು ಕಂಡು ಆ ಮುದು ಕೆಯು ನಡುಗುತ್ತ-ನಡುಗುತ್ತ ಬ್ಲೀಕನ ಕಾಲಿಗೆರಗಿ, ತನ್ನ ಜೀವವುಳಿಸಬೇಕೆಂದು ಅಂಗಲಾಚಿ ಬೇಡಿಕೊಳ್ಳಲುಪಕ್ರಮಿಸಿದಳು.

ಆಗ ಬ್ಲೀಕನು ಆಕೆಯನ್ನು ಕುರಿತು: "ಮುದುಕೀ, ನಮ್ಮಿಂದ ನಿನಗಾವ ಕೇಡೂ ಆಗಬಾರದೆಂದು ಇಚ್ಛಿಸುತ್ತಿದ್ದರೆ, ನೀನು ಆ ಇಂಗ್ಲಿಷ ಯುವತಿಯ ವಾಸ್ತವ್ಯವನ್ನು ಕೂಡಲೆ ನಮಗೆ ತೋರಿಸಿ ಕೊಡು."

"ನನ್ನನ್ನು ಹಿಂಸಿಸಬೇಡಿರಿ ಆ ಆಂಗ್ಲ ಯುವತಿಯು ಈ ಮನೆಯಲ್ಲೇ ಸುಖರೂಪವಾಗಿರುತ್ತಾಳೆ. ನಡೆಯಿರಿ, ನಾನು ನಿಮಗೆ ಅವಳ ಭೇಟಿ ಮಾಡಿಸು ತ್ತೇನೆ." ಎಂದು ಆ ಮುದುಕೆಯು ಹೇಳಿತು.

ಆ ಪರದೆಯ ಹಿಮ್ಮಗ್ಗಲಿನ ಮನೆಯಲ್ಲೊಂದು ಗುಪ್ತವಾದ ಕಳ್ಳಕೋಣೆ ಯಿದ್ದಿತು. ಬ್ಲೀಕ-ರಿಚರ್ಡರು ಆ ಮುದುಕೆಯನ್ನು ಮುಂದೆ ಮಾಡಿಕೊಂಡು ಆ ಕೋಣೆಯನ್ನು ಹೊಕ್ಕು ನೋಡುತ್ತಾರೆ, ಮೇರಿಯು ಅಲ್ಲಿಯದೊಂದು ಚಿಕ್ಕದಾದ ಮಂಚದ ಮೇಲಿನ ಮೆತ್ತನ್ನ ಹಾಸುಗೆಯ ಮೇಲೆ ಮಲಗಿಕೊಂ ಡಿರುತ್ತಾಳೆ. ಇವರೆಲ್ಲರ ಆಗಮನದ ಗದ್ದಲದಿಂದ ಉತ್ತರರಾತ್ರಿಯೊಳಗಿನ ಮೇರಿಯ ನಿದ್ರೆಗೆ ಭಂಗವುಂಟಾಗಲು, ಅವಳು ಕಣ್ಣು ತಿಕ್ಕುತ್ತ ಎದ್ದು ಕುಳಿತು ಬಾಗಿಲ ಕಡೆಗೆ ನೋಡಲು, ಬಾಗಿಲೊಳಗಿಂದ ಬ್ಲೀಕ-ರಿಚರ್ಡರೂ, ತನ್ನ ಕಾವ ಲಿನ ಮುದುಕೆಯೂ ಒಳಗೆ ಬಂದು ಅವಳೆದುರಿಗೆ ನಿಂತರು. ಆಗ ಅವಳು ಬ್ಲೀಕನ ಮುಖದ ಕಡೆಗೆ ಟಕಮಕವೆಂದು ನೋಡಿದಳು. ಪರಕ್ಷಣದಲ್ಲಿಯೇ ಅವಳ ದೃಷ್ಟಿಯು ರಿಚರ್ಡನ ಮುಖದ ಕಡೆಗೆ ಹೊರಳಿತು. ಆಗಲವಳು ವ್ಯಾ- ಕುಲ ಸ್ವರದಿಂದ:—"ನೀವು ಡ್ಯೂಕ ರಿಚರ್ಡರೇ ಅಹುದೇನು? ನೀವು ನನ್ನನ್ನು ಬಂಧಮುಕ್ತಗೊಳಿಸುವ ಸಲುವಾಗಿಯೇ ಬಂದಿರುತ್ತೀರೇನು? ನಾನು ನನ್ನ ಕಣ್ಣುಗಳನ್ನು ನಂಬಲಾರದವಳಾಗಿರುತ್ತೇನೆ" ಎಂದು ಅಂದಳು.

ಕೂಡಲೆ ರಿಚರ್ಡನು ನಿಂತಲ್ಲಿಂದ ಟಣ್ಣನೆ ಜಿಗಿದು ಹೋಗಿ ಮೇರಿಯನ್ನು

ತನ್ನ ಬಾಹುಪಾಶಗಳಲ್ಲಿ ಗಟ್ಟಿಯಾಗಿ ಹಿಡಿದು ಆಲಿಂಗಿಸಿಕೊಂಡು, ಉನ್ಮತ್ತನಂತೆ ಅವಳನ್ನು 'ಲಟಲಟ'ನೆ ಮುದ್ದಿಸಿ: "ಮೇರೀ, ನನ್ನ ಪ್ರಾಣಪ್ರಿಯಳಾದ ಮೇರೀ, ನೀನು ನನಗೆ ನಿಜವಾಗಿಯೂ ಮತ್ತೆ ಉಪಲಬ್ಧಳಾದೆಯೇನು? ಅಯ್ಯೋ! ಕಳೆದ ಎಷ್ಟೋ ದಿನಗಳಿಂದ ನಾನೆಷ್ಟು ಕಷ್ಟಪಟ್ಟೆನಲ್ಲ! ದೇವಾ, ಪರಮೇಶ್ವರಾ! ನಿನ್ನ ಗುಣಾನುವಾದವನ್ನು ಎಷ್ಟು ಮಾಡಿದರೂ ಅಲ್ಪವೇ ಸರಿ. ಭಗವಂತಾ, ನೀನು ನನ್ನೀ ಪ್ರಾಣಪ್ರಿಯಳನ್ನು ಈ ನಮ್ಮ ಶತ್ರುನಗರದಲ್ಲಿ ಇಷ್ಟು ಸೌಖ್ಯದಿಂದ ಇಟ್ಟಿರುವೆಯಲ್ಲವೆ? ಹಾಗು ಇವಳನ್ನು ಇಂದು ನನಗೆ ಮತ್ತೆ ದೊರಕಿಸಿ ಕೊಟ್ಟೆಯಲ್ಲವೆ? ಧನ್ಯ! ಧನ್ಯ! ನಾನೇ ಧನ್ಯನು!"

ಮೇರಿಯು ರಿಚರ್ಡನ ಹೃದಯದಲ್ಲಿ ತನ್ನ ತಲೆಯನ್ನಿರಿಸಿಕೊಂಡು: — "ಡ್ಯೂಕರೇ, ನಾನು ನಿಮ್ಮ ಆಶೆಯನ್ನು ಬಿಟ್ಟಂತಾಗಿತ್ತು. ನಾನು ಈ ಕಠಿಣ ಸೆರೆಮನೆಯಿಂದ ಪಾರಾದೇನೆಂಬ ಆಶೆಯೇ ನನಗುಳಿದಿರಲಿಲ್ಲ."

ಇಷ್ಟೆಲ್ಲ ಪ್ರಕಾರವು ನಡೆದಿರುವಾಗ ರಾತ್ರಿಯು ತೀರಿ ಬೆಳಗು ಹರಿಯ ಬಂದಿತ್ತು. ಬ್ಲೇಕನು ಹೊರಗೆ ಒಂದು ನೋಡುತ್ತಾನೆ, ಅರುಣೋದಯವಾಗಿತ್ತು. ಉಷಃಕಾಲದ ಸೊಬಗಿನಿಂದ ಚರಾಚರಸೃಷ್ಟಿಯು ರಮಣೀಯವಾಗಿ ತೋರುತ್ತಿತ್ತು. ನಾಲ್ಕೂ ಕಡೆಯ ಜನರು ತಮ್ಮ ತಮ್ಮ ಕೆಲಸಗಳಿಗೆ ತೊಡಗುವ ಸಂಭ್ರಮದಲ್ಲಿದ್ದುದರಿಂದ, ಕಲರವವು ಕೇಳಲುಪಕ್ರಮಿಸಿತ್ತು.

ಬಳಿಕ ರಿಚರ್ಡನು ಮೇರಿಯನ್ನು ಕಂಕುಳದಲ್ಲೆತ್ತಿಕೊಂಡು ಆ ಕೋಣೆಯಿಂದ ಹೊರಗೆ ಒಂದನು.

ಅಷ್ಟರಲ್ಲಿ ಸ್ಮಿತ್ಥನು ಬ್ಲೇಕನನ್ನು ಕುರಿತು: "ಒಡೆಯರೇ, ನಿನ್ನೆಯ ರಾತ್ರಿಯು ಬಳ್ಳೇ ಭಯಾನಕವಾಗಿತ್ತಲ್ಲವೆ? ಇಂತಹ ಭೀಕರವಾದ ರಾತ್ರಿಯನ್ನು ನಾನು ಇದುವರೆಗೂ ಕಂಡಿರಲಿಲ್ಲ; ಮತ್ತು ಮುಂದೆ ಎಂದೂ ಕಾಣಲಿಕ್ಕಿಲ್ಲ. ದೇವರ ದಯೆಯಿಂದಲೇ ನಾವೀ ರಾತ್ರಿಯನ್ನು ಕಳೆದಿರುತ್ತೇವೆ" ಎನ್ನಲು,

"ಅಹುದು. ಅದು ಬಹು ಭಯಾನಕವಾದಿರುಳೆನ್ನಲಿಕ್ಕೆ ಸಂಶಯವಿಲ್ಲ; ಆದರೆ ಆ ಭಯಾನಕರಾತ್ರಿಯು ಕಳೆದು ಹೋದ್ದರಿಂದ, ಇನ್ನು ಈ ವಿಶಾಲವಾದ ಲಂಡನ್ನಪಟ್ಟಣದಲ್ಲಿಯೂ ಬ್ರಿಟಿಶ ನಾಡಿನಲ್ಲಿಯೂ ಸುಖ-ಶಾಂತಿಗಳು ಚಿರಕಾಲ ನೆಲೆಗೊಳ್ಳಬಹುದಾಗಿವೆ."

ಹೀಗೆಂದು ನುಡಿದು ಬ್ಲೇಕನು ಕೆಲ ಜನ ಪೋಲೀಸರನ್ನು ಆ ಹೆಣಗಳ ಬಳಿಯಲ್ಲಿ ಪಹರೆಗಿರಿಸಿ, ಉಳಿದ ಎಲ್ಲ ಪೋಲೀಸರೊಡನೆ ಆ ಮೋಲಟ್ಟದ ಕೋಣೆಯಿಂದ ಹೊರಬಿದ್ದನು.

ಅಲ್ಲಿಯ ದೃಶ್ಯಗಳನ್ನೆಲ್ಲ ಕಂಡು ಮೇರೀ ವೆಭಾನಳ ತನು-ಮನಗಳು

ಕಾತರಗೊಂಡಿದ್ದವು. ನಡೆಯಲಿಕ್ಕೆ ಕೂಡ ಅವಳಲ್ಲಿ ಶಕ್ತಿಯುಳಿದಿರಲಿಲ್ಲ. ಅದರಿಂದ ರಿಚರ್ಡನು ಅವಳನ್ನೊಂದು ಬಾಡಿಗೆಯ ಮೋಟಾರಿನಲ್ಲಿ ಕುಳ್ಳಿರಿಸಿಕೊಂಡು ಪಪ್ಪಲಿನ ಜೇಲಿಗೆ ಕರೆತಂದನು; ಹಾಗು ಆ ಕೂಡಲೆ ಒಬ್ಬ ಅನುಭವಿಕ ಡಾಕ್ಟರನನ್ನು ಕರೆಯಿಸಿ, ಅವಳ ಪ್ರಕೃತಿಯನ್ನು ತೋರಿಸಿದನು. ಅವಳನ್ನು ಆ ಪಪ್ಪಲಿನೊಳಗಿನ ಒಂದು ಕಡೆಯ ಅಟ್ಟದ ಮೇಲಿನ ಪ್ರಶಸ್ತವಾದ ಕೋಣೆಯಲ್ಲಿರಿಸಿ, ಆ ಮನೆಯ ದಾದಿಯು ಅವಳನ್ನು ಚನ್ನಾಗಿ ಉಪಚರಿಸಲುಪಕ್ರಮಿಸಿದಳು.

ಇಷ್ಟೆಲ್ಲ ಅತ್ತ ಕಡೆಯ ಕೆಲಸಗಳನ್ನೆಲ್ಲ ಪೂರೈಸಿಕೊಂಡ ಮೇಲೆ ಬ್ಲೇಕನು ಮೊದಲನೇ ದಿನ ರಾತ್ರಿಯಲ್ಲಿ ಬಂಧಿಸಲ್ಪಟ್ಟ ಸೆರೆಯಾಳುಗಳನ್ನು ನೋಡ ಹೋದನು. ಬ್ಲೇಕನನ್ನು ಕಾಣುತ್ತಲೆ ಉಷಂಡ ಚಂಡನ ಅನುಚರರಲ್ಲಿಯ ಹಲಕೆಲವರ ಪಿತ್ಥವು ತಲೆಗೇರಿತು! ಅದರಿಂದ ಅವರು ಅವನನ್ನು ಬಾಯಿಗೆ ಬಂದಂತೆ ಬೈಯಹತ್ತಿದರು. ಕೆಲ ನಿರುಪದ್ರವಿಗಳಾದ ಹಿಮ್ಮೇಳದವರು, ತಮ್ಮ ಮೂರ್ಖತನವನ್ನು ಒಪ್ಪಿಕೊಂಡು ಬ್ಲೇಕನ ಕಾಲಿಗೆ ಬಿದ್ದು, ತಮಗೆ ಜೀವದಾನ ಕೊಡಿಸಬೇಕೆಂದು ಪ್ರಾರ್ಥಿಸತೊಡಗಿದರು; ಆದರೆ ಆ ಸೆರೆಯಾಳುಗಳಲ್ಲಿ ಬ್ಲೇಕನ ಮೇಲೆ ಹಲ್ಲು ಕಡೆಯುವವರ ಸಂಖ್ಯೆಯೇ ಹೆಚ್ಚಾಗಿತ್ತೆಂಬದು ಸ್ಪಷ್ಟವಾಗಿ ಕಂಡು ಬರುತ್ತಿತ್ತು.

ಬಳಿಕ ಬ್ಲೇಕ-ಸ್ಮಿಥ್ಥರು ರಿಚರ್ಡನ ಮನೆಯಲ್ಲೇ ಅಲ್ಪೋಪಹಾರವನ್ನು ತೀರಿಸಿಕೊಂಡು, ವಿಶ್ರಾಂತಿಗಾಗಿ ತಮ್ಮ ಮನೆಯ ದಾರಿ ಹಿಡಿದರು. ಅಂದಿನ ಅಪರಾಹ್ಣಕಾಲದ ಲಂಡನ್ನ ನಗರದಲ್ಲಿಯ ದೈನಿಕ ಪತ್ರಿಕೆಗಳಲ್ಲೆಲ್ಲ ಆ ಚೀನೀ ವಿದ್ರೋಹಿಗಳನ್ನು ಬಂಧಿಸಿದ ಸುದ್ದಿಯೇ ಸುದ್ದಿಯು. ಆ ವಾರ್ತೆಯಿಂದ ಆ ಪಟ್ಟಣದೊಳಗಿನ ಜನರಿಗೊಂದು ಬಗೆಯ ಹಾಯ್! ಎನಿಸಿತು. ಆ ವಿಷಯದ ಹೊಸ ಹೊಸ ಸುದ್ದಿಗಳಿಂದ ಅಂದು ತಾಸು-ತಾಸಿಗೂ ದೈನಿಕಪತ್ರಿಕೆಗಳ ಹೊಸ ಹೊಸ ಆವೃತ್ತಿಗಳು ಹೊರಡುತ್ತಿದ್ದವು. ಆ ಸುದ್ದಿಗಳನ್ನು ಓದಿ ಚಾಯ್ನಾಫೀಲ್ಡಿನ ಸಿಂಹನಾಗಿದ್ದ ಉಷಂಡ ಚಂಡನೆಂಬ ತರುಣನು ಪಪ್ಪಲಿನ ಜೇಲಿನ ಇನ್ಸಪೆಕ್ಟರನಾಗಿದ್ದ ಮರ್ಟನ್ ಡೆಭೆನಟನೊಡನೆ ಕಾದಿದನೆಂಬದೂ, ಕಡೆಗೆ ಅವರಿಬ್ಬರೂ ಅಲ್ಲಿಯೇ ಸತ್ತು ಬಿದ್ದಿರುವರೆಂಬದೂ ಎಲ್ಲರಿಗೂ ಗೊತ್ತಾಯಿತು.

ಅಂದೇ ಅಪರಾಹ್ಣಕಾಲದಲ್ಲಿ ಅವೆರಡೂ ಹೆಣಗಳು ಪಪ್ಪಲಿನ ಸೆರೆಮನೆಗೆ ತರಲ್ಪಟ್ಟವು. ರಿಚರ್ಡನು ತನ್ನ ತಂದೆಯ ಶವದ ಬಳಿಯಲ್ಲಿ ಕುಳಿತು ಕೇವಲ ಬಾಲಕನಂತೆ ಹಾಡಿ ಹಾಡಿಕೊಂಡು ಅಳಹತ್ತಿದನು; ಆದರೆ ಪ್ರಾಣಸಖಿಯಾದ ಮೇರಿಯ ಜೀವಕ್ಕೆ ಧಕ್ಕೆ ತಟ್ಟದ್ದನ್ನು ನೆನಿಸಿ, ಅವನು ಆ ತನ್ನ ಪಿತೃನಿಧನದ ಸಂಗತಿಯನ್ನು ಸ್ವಲ್ಪ ಸ್ವಲ್ಪಾಗಿ ಮರೆಯಹತ್ತಿದನು. ಲೋಕದ ಎಲ್ಲ ಆಗು-

ಹೋಗುಗಳನ್ನು ಕಣ್ಣು ಮರೆ ಮಾಡಿ, ಲೋಕದಲ್ಲಿ ಮತ್ತೆ ಹೊಸ ಚೈತನ್ಯವನ್ನು ಹುಟ್ಟಿಸುವ ಶಕ್ತಿಯು ಮರವಿನಲ್ಲೇ ಇದ್ದುದರಿಂದ, ಆ ಭಗವನ್ಮಾಯೆಯು ಲೋಕಕಲ್ಯಾಣಕ್ಕಾಗಿಯೇ ಇದೆಯೆಂದು ನಿರ್ಬಾಧವಾಗಿ ಹೇಳಬಹುದು.

ಭವಿಷ್ಯತ್ಕಾಲದೊಳಗಿನ ಸುಖ-ಶಾಂತಿಗಳ ಲಾಲಸೆಯಿಂದ ಆವೃತ್ತವಾದ ರಿಚರ್ಡನ ಮನಸ್ಸು ಆಗ ರಿಚರ್ಡನಿಗುಂಟಾದ ಆ ಪರಮ ದುಃಖವನ್ನು ಹಿಂದೂಡಿ ಬಿಟ್ಟಿತು.

———

## ಉಪಸಂಹಾರ.




ಷಂಡ ಚಂಡನ ಆತ್ಮಹತ್ಯೆಯ ನಂತರ ಮೂರು-ನಾಲು ದಿನಗಳ ಮೇಲೆ ಒಂದು ದಿನ ಸಂಜೆಯ ಕಾಲಕ್ಕೆ ಬ್ಲೀಕನು ತನ್ನ ಬೈಠಕಿನ ಕೋಣೆಯಲ್ಲಿ ಕುಳಿತುಕೊಂಡು ಯಾವುದೊಂದು ದೈನಿಕಪತ್ರವನ್ನೋದುತ್ತಿದ್ದನು. ಇಷ್ಟರಲ್ಲಿ ಆತನ ಮನೆಯ ತಲೆಬಾಗಿಲೊಳಗಿನ ಕಾಲ್‌ಬೆಲ್ಲಿ (Call Bell)ನ ಥಣಣಣಣ ಸಪ್ಪಳವಾಗಲಾರಂಭಿಸಿತು. ಮುಂದೆ ಒಂದೆರಡು ನಿಮಿಷಗಳಲ್ಲಿ ಆತನ ಮನೆಯ ತೊತ್ತು ಹೋಗಿ ಬಾಗಿಲವನ್ನು ತೆರೆದಳು. ಆಗ ಒಬ್ಬ ಅಪರಿಚಿತ ವ್ಯಕ್ತಿಯು ಬಾಗಿಲ ಒಳಿಯಲ್ಲಿ ನಿಂತುಕೊಂಡಿದ್ದಿತು. ಆತನು ಒಂದು ಕೈಯಲ್ಲಿ ಕೊಡೆಯನ್ನು ಹಿಡಿದಿದ್ದು, ಮತ್ತೊಂದು ಕೈಯಲ್ಲೊಂದು ಬ್ಯಾಗ್ ಹಿಡಿದಿದ್ದನು. ಆ ಗೃಹಸ್ಥನು ಒಳ್ಳೇ ಎತ್ತರವೂ ಧಷ್ಟಪುಷ್ಟವೂ ಆದ ಶರೀರದವನು. ಮುಖವರ್ಣವು ತೀರ ಕೆಂಪಾಗಿದ್ದಿತು. ಮೋರೆಯ ಮೇಲೆ ಉದ್ದುದ್ದನ್ನ ಗಡ್ಡ-ಮೀಸೆಗಳಿದ್ದವು. ಉಡಿಗೆ-ತೊಡಿಗೆಗಳು ರೀತಿಯವಾಗಿರದೆ, ಸಭ್ಯಗೃಹಸ್ಥನಂತಿದ್ದವು. ಅದರಿಂದ ಆತನನ್ನು ನೋಡಿದೊಡನೆಯೆ ಇವನೊಬ್ಬ ಹಳ್ಳಿಯವನೆಂಬದನ್ನು ಆ ತೊತ್ತು ಕಂಡುಕೊಳ್ಳದಿರಲಿಲ್ಲ.

ಆಗ ಆ ತೊತ್ತು 'ನಿಮ್ಮ ಹೆಸರೇನೆ'ಂದು ಕೇಳಲು, ನನ್ನ ಹೆಸರು 'ವೆಭಾನ ರಾಬರ್ಟ'ನೆಂದು ಆತನು ಹೇಳಿದನು. ಕೂಡಲೆ ಅವಳು ಅವನನ್ನು ಬ್ಲೀಕನ ಕೋಣೆಗೆ ಕರೆದೊಯ್ದು ಬಿಟ್ಟಳು. ವೆಭಾನ ರಾಬರ್ಟನು ಬ್ಲೀಕನನ್ನು ಅಭಿವಂದಿಸಿ: "ಬ್ಲೀಕರೇ, ತಾವು ಸುಖವಾಗಿರುವಿರಷ್ಟೇ? ನಾನು ನಿಮ್ಮನ್ನು ಇದುವರೆಗೂ ಪ್ರತ್ಯಕ್ಷವಾಗಿ ಕಂಡಿರಲಿಲ್ಲ; ಆದರೆ ನನ್ನ ಹೆಸರು ಇಷ್ಟರಲ್ಲಿ ತಮಗೆ ತಿಳಿದಿರಲಾರದೆಂದು ನನ್ನ ನಂಬಿಗೆಯಿದೆ. ನಾನು ಸಮರಶೆಟ್ ಜಿಲ್ಲೆಯೊಳಗಿನ ಕೊಯಾಂಟಿಕ್ ಎಂಬ ಹಳ್ಳಿಯ ಜೂಡಿದಾರನಾದ ರಾಬರ್ಟ ವೆಭಾನನೆಂಬವನು. ಈಗಲಾದರೂ ತಮಗೆ ನನ್ನ ಪರಿಚಯವಾಯಿತೆ?" ಎಂದು ಕೇಳಲು,

ಕೂಡಲೆ ಬ್ಲೇಕನು ಆಸನದಿಂದೆದ್ದು ಒಂದು ಆತನ ಕೈ ಹಿಡಿದು ಶೆಕ್ ಹ್ಯಾಂಡ ಕೊಟ್ಟು, ಅವನನ್ನು ತನ್ನ ಬಳಿಯ ಕುರ್ಚಿಯ ಮೇಲೊಯ್ದು ಕುಳ್ಳಿರಿಸಿಕೊಂಡು, ಒಳ್ಳೇ ಆದರಭಾವವನ್ನು ತೋರ್ಪಡಿಸುತ್ತ: "ಮಹನೀಯರೇ, ತಮ್ಮ ಪ್ರಖ್ಯಾತಿಯನ್ನು ಚನ್ನಾಗಿ ಬಲ್ಲೆನು. ಇಂದು ತಮ್ಮ ಸಾಕ್ಷಾತ್ಕಾರವಾದ ಬಗ್ಗೆ ನನಗೆ ಬಹು ಸಂತೋಷವೆನಿಸಿದೆ. ಈ ದಿನ ನೀವು ಬಂದೇ ಬರುವಿರೆಂಬದನ್ನು ನಾನು ಈ ಮೊದಲೇ ತಿಳಿದಿದ್ದೆನು. ನೀವು ನಿಮ್ಮ ಮಗಳ ವಿಷಯದಲ್ಲಿ ಬಹು ಉತ್ಕಂಠಿತರಾಗಿರಬಹುದಲ್ಲವೆ?"

"ಅಹುದು. ಮಹಾನುಭಾವರೇ, ನನ್ನ ಮಗಳ ಬಗ್ಗೆ ನಾನು ದುಶ್ಚಿಂತೆಗೊಳಗಾಗಿರುತ್ತೇನೆ. ಅವಳು ಈ ಲಂಡನ್ನ ಪಟ್ಟಣಕ್ಕೆ ಹೊರಟು ಬಂದಂದಿನಿಂದ ಅವಳ ಬಗ್ಗೆ ನನಗಾವ ವರ್ತಮಾನವೂ ತಿಳಿದಿರುವದಿಲ್ಲ. ಅವಳು ಪತ್ರವನ್ನೇಕೆ ಬರೆದಿಲ್ಲವೆಂಬದು ತಿಳಿಯಲಶಕ್ಯವಾಯಿತು. ರಿಚರ್ಡ ಡೆಭೆನಟನು ನನಗೆರಡು ಸಂಕ್ಷಿಪ್ತ ಪತ್ರಗಳನ್ನೇನೋ ಬರೆದಿದ್ದನು. ಅವುಗಳಿಂದ ಮೇರಿಯು ಸುಖರೂಪವಾಗಿರುವಳೆಂಬದಿಷ್ಟೇ ಗೊತ್ತಾಯಿತು; ಆದರೆ ಆತನ ಆ ಪತ್ರಗಳಿಂದ ನನ್ನ ಮನಸ್ಸಿನ ಸಮಾಧಾನವಾಗಲಿಲ್ಲ. ಮೇರಿಯು ಯಾವ ಬಗೆಯ ಪೋಷಾಕಿನಿಂದ ಲಂಡನ್ನಿಗೆ ಬಂದಳೆಂಬ ವಿಷಯಕ್ಕೆ ಅವನು ಎಲ್ಲಕ್ಕೂ ಮೊದಲೊಂದು ತಂತೀ ಕೊಟ್ಟಿದ್ದನು. ಆ ತಂತಿಯ ವಾರ್ತೆಯನ್ನೋದಿ ನನ್ನ ಮನಸ್ಸಿನಲ್ಲಿ ನಾನಾ ಬಗೆಯ ಸಂಶಯಗಳು ಉದ್ಭವಿಸಿದವು. ಮೇರಿಯ ಸಂಧಾನಕ್ಕಾಗಿ ಲಂಡನ್ನಿಗೆ ಬರಬೇಕೆಂದು ನಾನು ಅಂದಿನಿಂದಲೇ ಯೋಚಿಸತೊಡಗಿರುವೆನು. ನಾನೇ ಬರಬೇಕೆಂದಿದ್ದರೆ, ನನಗೆ ಇನ್ನೂ ಮೂರು-ನಾಲ್ಕು ದಿನಗಳ ಅವಧಿಯು ಬೇಕಾಗುತ್ತಿತ್ತು; ಆದರೆ ಇಂದು ಬೆಳಿಗ್ಗೆ ಆಕಸ್ಮಿಕವಾಗಿ ರಿಚರ್ಡನ ತಂತಿಯು ಬಂದಿತು. ಅದರಲ್ಲಿ ಅವನು ಕೂಡಲೆ ಹೊರಟು ಬರಬೇಕೆಂದು ನನಗೆ ತಿಳಿಸಿರುತ್ತಾನೆ. ಅದರಿಂದ ನಾನು ಎಕ್ಸಪ್ರೆಸ್ಸ ಬಂಡಿಯನ್ನೇರಿ ತ್ವರೆಯಿಂದ ಹೊರಟು ಬಂದಿರುತ್ತೇನೆ. ಈ ಲಂಡನ್ನ ಪಟ್ಟಣದೊಳಗಿನ ಪ್ಯಾಡಿಂಟನ್ ಸ್ಟೇಶನ್ನಿನಲ್ಲಿಳಿದು ನಾನು ಅಲ್ಲಿಯ ಸ್ಟಾಲಿನಲ್ಲೊಂದು ದೈನಿಕ ಪತ್ರವನ್ನು ಕೊಂಡುಕೊಂಡು ಓದತೊಡಗಿದೆನು. ತಾವು ಚೀನಾವಿದ್ರೋಹಿಗಳ ಗುಂಪನ್ನೊಂದು ಸೆರೆ ಹಿಡಿದು ನಮ್ಮ ಬ್ರಿಟಿಶನಾಡಿನ ಸುಖ-ಶಾಂತಿಗಳನ್ನು ಹೆಚ್ಚಿಸಿದಿರೆಂಬದೂ, ಅವರ ಜಾಲದಲ್ಲಿ ಸಿಕ್ಕಿದ್ದ ಹಳ್ಳಿಗಾಡಿನ ಒಬ್ಬ ಆಂಗ್ಲ ತರುಣಿಯನ್ನು ಮುಕ್ತಗೊಳಿಸಿದಿರೆಂಬದೂ ಆ ಪತ್ರವಾಚನದಿಂದ ನನಗೆ ಗೊತ್ತಾಯಿತು. ನಾನು ಕೂಡಲೆ ಪಪ್ಪಲಿನ ಜೇಲಿಗೆ ಹೋಗಿ ಅಲ್ಲಿಯ ಒಬ್ಬ ಸಾರ್ಜಂಟನಿಂದ ಆ ಆಂಗ್ಲಯುವತಿಯ ಹೆಸರು ಮೇರೀ ವೆಭಾನಳೆಂಬದನ್ನು ಕೇಳಿಕೊಂಡೆನು. ಚೀನೀಯ ವಿದ್ರೋಹಿಗಳು ಅವ

ಳನ್ನು ಮೋಸಗೊಳಿಸಿ ಸೆರೆ ಹಿಡಿದಿರಲು, ನೀವು ಬಹು ಕೌಶಲ್ಯದಿಂದ ಮೇರಿಯನ್ನು ಬಂಧಮುಕ್ತಗೊಳಿಸಿರುತ್ತೀರಿ. ಅದರಿಂದ ನಿಮ್ಮ ವಿಷಯವಾಗಿ ನನ್ನಲ್ಲಿ ಎಷ್ಟು ಕೃತಜ್ಞತಾಭಾವವುಂಟಾಗಿದೆಯೆಂಬದನ್ನು ನಾನು ಬಾಯಿಂದ ಒಡನುಡಿಯಲಾರದವನಾಗಿದ್ದೇನೆ. ನಾನು ಮೇರಿಯನ್ನೊಮ್ಮೆ ಕಣ್ತುಂಬ ನೋಡ ಬಯಸುವೆನೆಂದು ಅಲ್ಲಿಯ ಸಾರ್ಜಂಟನಿಗೆ ಅರಿಕೆ ಮಾಡಿಕೊಳ್ಳಲು, ಮೇರಿಯೂ ರಿಚರ್ಡನೂ ಕೂಡಿ ಬ್ಲೀಕರ ಮನೆಯ ಕಡೆಗೆ ತೆರಳಿರುತ್ತಾರೆಂದು ಅವನು ನನಗೆ ತಿಳಿಸಿದನು. ನಾನು ಪಪ್ಪಲಿನ ಜೇಲಿನಿಂದ ಮೇರಿಯ ಭೆಟ್ಟಿಗಾಗಿ ಇಲ್ಲಿಗೆ ಧಾವಿಸಿ ಬಂದಿರುತ್ತೇನೆ. ಬ್ಲೀಕರೇ, ದಯವಿಟ್ಟು ನನಗೆ ಮೇರಿಯ ಭೇಟಿಯನ್ನು ಬೇಗನೆ ಮಾಡಿಸುವಿರಾ?'' ಎಂದು ಕೇಳಿಕೊಳ್ಳಲು,

"ವೆಭಾನರೇ, ನೀವು ಇಲ್ಲಿಗೆ ಬಂದದ್ದು ವಿಹಿತವಾಯಿತು. ಮೇರಿಯು ಇಲ್ಲಿಯೇ ಸಮೀಪದಲ್ಲಿ ಇರುವಳು. ನಾನು ಈಗಲೆ ಅವಳನ್ನು ಕರೆಯಿಸುವೆನು'' ಎಂದು ಹೇಳಿ, ಬ್ಲೀಕನು ಸ್ಮಿತ್ಥನಿಗೆ ಸಂಜ್ಞೆ ಮಾಡಲು, ಸ್ಮಿತ್ಥನು ಮೇರಿಗೆ ಈ ಸಂಗತಿಯನ್ನು ತಿಳಿಸ ಹೋದನು. ಅಲ್ಪಾವಧಿಯಲ್ಲೇ ರಿಚರ್ಡನು ಮೇರಿಯೊಡನೆ ಬೇರೊಂದು ಕೋಣೆಯೊಳಗಿಂದ ಅಲ್ಲಿಗೆ ಬಂದನು. ತನ್ನ ತಂದೆಯು ಹೀಗೆ ಆಕಸ್ಮಿಕವಾಗಿ ಇಲ್ಲಿಗೇ ಬಂದಾನೆಂಬ ಕಲ್ಪನೆಯನ್ನು ಕೂಡ ತಾಳದ ಮೇರಿಗೆ ತಂದೆಯನ್ನು ಕಾಣುತ್ತಲೆ ದುಃಖವು ಒತ್ತರಿಸಿ ಬಂದಿತು. ಅದರಿಂದ ಅವಳು ಓಡುತ್ತ ಹೋಗಿ ತಂದೆಯ ಕಂಕುಳದಲ್ಲಿ ತನ್ನ ಮೋರೆಯನ್ನು ಸೇರಿಸಿ ಭೋ-ರೆಂದು ಅಳಹತ್ತಿದಳು.

ಆಗ ರಾಬರ್ಟ ವೆಭಾನನು ಸ್ನೇಹದಿಂದ ಮಗಳನ್ನು ಸಂತೈಸಿ: "ತಂಗೀ, ನಿನ್ನನ್ನು ನೋಡಿ ನನಗೆಷ್ಟು ಸಂತೋಷವಾಗಿದೆಯೆಂಬದನ್ನು ನಾನು ಬಾಯಿಂದ ಹೇಳಲಾರದವನಾಗಿದ್ದೇನೆ. ನಾನು ನಿನ್ನನ್ನು ಮತ್ತೆ ಕಂಡೇನೆಂಬ ಆಶೆಯೇ ಇರಲಿಲ್ಲ. ನಿನಗುಂಟಾಗಿದ್ದ ಸಂಕಟಗಳನ್ನೆಲ್ಲ ತಿಳಿದಿರುತ್ತೇನೆ. ನೀನು ಮನೆಯೊಳಗಿನ ನನ್ನ ಮಾತಿಗೆ ಸಿಟ್ಟಾಗಿ ಹೊರಟು ಬಂದ ಬಗ್ಗೆ ನನಗೆ ಬಹಳ ಕೆಡಕೆನಿಸಿತು. ಆ ವಿಷಯದಲ್ಲಿ ತಪ್ಪು ನನ್ನದೇ ಆಗಿತ್ತು. ನಾನು ನಿನ್ನ ವಿಷಯದಲ್ಲಿ ಬಹು ಕಠೋರವಾದ ಆಚರಣೆಯನ್ನಿಟ್ಟಿದ್ದೆನು. ತಂಗೀ, ನೀನು ನನ್ನ ಆ ಪಿಸುಣ ನುಡಿಗಳನ್ನು ಮರೆತು ಬಿಡವ್ವಾ. ನಡೆ, ನನ್ನೊಡನೆ ನಮ್ಮೂರಿಗೆ ನಡೆ. ತಂಗೀ, ನಿನ್ನ ಹೊರತು ನನಗೆ ನನ್ನ ಸಂಸಾರದಲ್ಲಿ ಮತ್ತಾರಿರುವರವ್ವಾ?'' ಎಂದೆನ್ನಲು,

ಮೇರಿಯು: ''ಅಪ್ಪಾ, ನಾನು ನಿಮ್ಮೊಡನೆಯೇ ಬರುತ್ತೇನೆ. ನಾನು ನಿಮಗೆ ಹೇಳದೆ-ಕೇಳದೆ ಮನೆಯಿಂದ ಹೊರಟು ಬಂದು ಬಹು ದೊಡ್ಡ ತಪ್ಪಿತಸ್ಥಳಾಗಿರುತ್ತೇನೆ; ಆ ನನ್ನ ಹಿರಿಯರ ಆಜ್ಞೋಲ್ಲಂಘನ ದೋಷಕ್ಕಾಗಿ ನನಗೆ

ಚೆನ್ನಾಗಿ ಶಿಕ್ಷೆಯಾಗಿದೆ; ಆದರೆ ಅಪ್ಪಾ, ನಾನು ನಿಮ್ಮೊಡನೆ ಊರಿಗೆ ಬಂದ ವಳು ಅಲ್ಲಿ ಹೆಚ್ಚು ದಿನಗಳ ವರೆಗೆ ನಿಲ್ಲಲಾರೆನು. ನೀವು ಈಗ ನನ್ನೊಡನೆ ಯಾ-ರನ್ನು ಕಂಡಿರೋ, ನಾನು ಅವರನ್ನೇ............'' ನಾಚಿಕೆಯಿಂದ ಮುಂದಿನ ಶಬ್ದಗಳು ಮೇರಿಯ ಬಾಯಿಂದ ಹೊರಡದಾದವು.

ಕೆಲ ಕ್ಷಣಗಳ ವರೆಗೆ ಸುಮ್ಮನೆ ನಿಂತುಕೊಂಡ ಬಳಿಕ ಮೇರಿಯು ತಂದೆ ಯನ್ನು ಕುರಿತು ಮತ್ತೆ: ''ಅಪ್ಪಾ, ನಾವೀರ್ವರೂ ಪರಸ್ಪರರನ್ನು ಹೆಚ್ಚಾಗಿ ಪ್ರೀತಿಸುತ್ತೇವೆ. ಕೆಲ ತಿಂಗಳುಗಳ ಹಿಂದೆ ಯಾವಾಗ ಈ ರಿಚರ್ಡರು ನಮ್ಮ ಅತಿಥಿಗಳಾಗಿದ್ದರೋ, ಆಗಿನಿಂದಲೇ ನಾನು ಇವರ ವಿಷಯಕ್ಕೆ ಪ್ರೇಮಬದ್ಧ ಳಾಗಿರುತ್ತೇನೆ. ನಾಳಿನ ಶರದೃತುವಿನಲ್ಲಿ ನಮ್ಮ ವಿವಾಹವಾಗುವದು ಗೊತ್ತಾ ಗಿದೆ. ಲಗ್ನ ಕಾರ್ಯವಾದ ಮೇಲೆ ನಾನು ಈ ಲಂಡನ್ನ ಪಟ್ಟಣದಲ್ಲಿಯೇ ಸ್ಥಿರವಾಗಿರಬೇಕಾಗುವದು.''

ರಾಬರ್ಟ ವೆಭಾನನಿಗೆ ಅದಾವ ಸಂಗತಿಯೂ ತಿಳಿದಿರಲಿಲ್ಲ. ಡ್ಯೂಕ ರಿಚರ್ಡನು ತನ್ನ ಮಗಳಿಗೆ ತಕ್ಕ ವರನೆಂಬ ವಿಷಯದಲ್ಲಿ ಆತನ ಇಬ್ಬಣವಿರಲಿಲ್ಲ. ಅದರಿಂದ ಮೇರಿಯ ನುಡಿಗಳನ್ನು ಕೇಳಿ ಅವನು ಅಸಂತುಷ್ಟನಾಗಲಿಲ್ಲ. ಅವನು ಕ್ಷಣಕಾಲ ಸುಮ್ಮನಿದ್ದು, ಬಳಿಕ ಮೇರಿಯ ಕೈಯನ್ನು ರಿಚರ್ಡನ ಕೈಯಲ್ಲಿ ತ್ತನು. ಆ ಮೇಲೆ ಮುಗುಳು ನಗೆಯಿಂದ: ''ತಮ್ಮಾ ರಿಚರ್ಡಾ, ಮೇರಿಯ ಹೊರತು ಈ ಸಂಸಾರದಲ್ಲಿ ನನಗೆ ಅನ್ಯರಾರೂ ಇರುವದಿಲ್ಲ. ಈಕೆಯನ್ನು ಇಲ್ಲಿಗೆ ಕಳಿಸಿಕೊಟ್ಟರೆ ನನ್ನ ಹೃದಯವೇ ವಿದೀರ್ಣವಾದೀತು; ನನ್ನ ಹಳ್ಳಿಯ ಆ ಮನೆಯು ಕತ್ತಲೆಗವಿದು ಹೋದೀತು. ಆದರೂ ನನ್ನೀ ಮೇರಿಗೆ ಯಾತರಿಂದ ಸುಖ-ಸಮಾಧಾನಗಳಾಗುವವೋ, ಹಾಗೆ ನಡೆಯುವದೇ ನನ್ನ ಕರ್ತವ್ಯವಾಗಿರು ತ್ತದೆ. ಡ್ಯೂಕ ರಿಚರ್ಡಾ, ಇಂದು ನಾನು ಇವಳನ್ನು ನಿನಗರ್ಪಿಸಿ ಬಿಟ್ಟಿದ್ದೇನೆ. ನೀವುಗಳಿಬ್ಬರೂ ಲಗ್ನವಾಗಿ ಸುಖದಿಂದಿರಿ. ನಿಮ್ಮಗಳಲ್ಲಿಯ ಪ್ರೇಮಬಂಧ ನವು ಅಸ್ಖಲಿತವಾಗಲೆಂಬದೇ ನನ್ನ ಅಂತಃಕರಣದಲ್ಲಿಯ ಬಯಕೆಯಾಗಿರುತ್ತದೆ.''

ವೆಭಾನನ ಮಾತು ಮುಗಿದ ಬಳಿಕ ರಾಬರ್ಟ ಬ್ಲೇಕನು: ''ವೆಭಾನರೇ, ಈ ಡ್ಯೂಕ ರಿಚರ್ಡನು ಬಹು ಒಳ್ಳೆಯ ಹುಡುಗನಿರುವನು. ಈತನು ನಿಮ್ಮ ಮಗಳನ್ನು ಆನಂದಗೊಳಿಸುವನೆಂಬ ವಿಷಯದಲ್ಲಿ ಸಂದೇಹವಿಲ್ಲ. ಇಂದು ನಾನು ಇವರೀರ್ವರಿಗೂ ನಿಮಂತ್ರಣವನ್ನಿತ್ತಿದ್ದೆನು. ಇದೇ ಕಾಲಕ್ಕೆ ಅನಾಯಾಸ ವಾಗಿ ನೀವು ಬಂದಿರುವದೂ ಬಹು ಸಂತೋಷದ ಮಾತಾಗಿದೆ. ನಾವೆಲ್ಲರೂ ಇಂದು ಇಲ್ಲಿಯೇ ಒಂದೇ ಮೇಜಿನ ಬಳಿಯಲ್ಲಿ ಕುಳಿತು ಊಟ ಮಾಡೋಣ. ಆ ಮೇಲೆ ನಿಮ್ಮ ಮೇರಿಯು ಅನುಭವಿಸಿದ ವಿಪತ್ತಿನ ಸಂಗತಿಯನ್ನು ಕೇಳಿ

ಕೊಳ್ಳುವಿರಂತೆ. ತವ್ಮಾ, ಸ್ಮಿತ್ಥಾ, ಅಡಿಗೆಯವಳಿಗೆ ಆಹಾರ್ಯ ಪದಾರ್ಥ ಗಳನ್ನೆಲ್ಲ ತರ ಹೇಳು.''

× × × ×

ತಕ್ಕ ಕಾಲಕ್ಕೆ ಸೆರೆಯಲ್ಲಿದ್ದ ಚೀನೀ ವಿದ್ರೋಹಿಗಳ ಮೇಲೆ ಕ್ರಿಮಿನಲ್ ಕೇಸಾಯಿತು. ಅವರೆಲ್ಲರ ಹಲವು ಅಪರಾಧಗಳು ಸಿದ್ಧವಾಗಲು, ಕಾನೂನಿನ ಮೇರೆಗೆ ಅವರೆಲ್ಲರಿಗೂ ಶಿಕ್ಷೆಯಾಯಿತು. ಕೆಲವರಿಗೆ ಗಲ್ಲಿನ ಶಿಕ್ಷೆಯಾದರೆ, ಕೆಲ ವರಿಗೆ ಆಜನ್ಮ ಕರಿನೀರಿನ ಶಿಕ್ಷೆಯಾಯಿತು. ಬೇರೆ ಕೆಲ ಸಾಮಾನ್ಯ ಅಪರಾಧಿ ಗಳಿಗೆ ೫ ವರ್ಷಗಳಿಂದ ೨೦ ವರ್ಷಗಳ ವರೆಗಿನ ಕಠಿಣಶಿಕ್ಷೆಯು ವಿಧಿಸಲ್ಪಟ್ಟಿತು. ಆ ವಿದ್ರೋಹಿಗಳ ಅಡ್ಡೆಗಳೆಲ್ಲ ಜಪ್ತಾದವು. ಅಲ್ಲಿಯ ವಸ್ತ-ಒಡವೆ, ಧನ-ಕನಕಗಳೆಲ್ಲ ಸರಕಾರದ ಪಾಲಾದವು; ಆದರೆ ಆ ವಿದ್ರೋಹಿಗಳ ದೇಶ-ವಿದೇಶ ಗಳಲ್ಲಿಯ ಸಮಿತಿಗಳು ವಿನಾಶಗೊಂಡವೋ-ಇಲ್ಲವೋ ಎಂಬದು ಮಾತ್ರ ತಿಳಿಯಲಿಲ್ಲ.

÷ ÷ ÷ ÷ ÷

ಕಮಲಾಲಯದೊಳಗಿನ ಮಲ್ಲಿಗೆಯ ಹೂವಿನ ತಂದೆಯಾದ ಲೀ ಕೋಯಾಂಗನಿಗೆ ೨೦ ವರ್ಷಗಳ ಸಶ್ರಮ ಶಿಕ್ಷೆಯಾಗಲು, ಮಲ್ಲಿಗೆಯ ಹೂವು ನಿರಾಶ್ರಿತಳಾದಳು. ಆಕೆಯ ಸಹಾಯದಿಂದಲೇ ತಮಗೆ ಮೇರೀ ವೆಭಾಸಳ ಪತ್ತೆ ಹತ್ತಿದ ಸಂಗತಿಯನ್ನು ಸ್ಮಿತ್ಥನು ಮರೆತಿರಲಿಲ್ಲ. ಅದರಿಂದ ಅವನು ಬ್ಲೇಕನಿಗೆ ಹೇಳಿ, ಆ ಮಲ್ಲಿಗೆಯ ಹೂವನ್ನು ಚೀನ ದೇಶದೊಳಗಿನ ಶಾಂಘಾಯ ಪಟ್ಟಣದಲ್ಲಿ ರುವ ಧನಾಢ್ಯನಾದ ಆಕೆಯ ಚಿಕ್ಕಪ್ಪನಲ್ಲಿಗೆ ಕಳಿಸುವ ಏರ್ಪಾಟು ಮಾಡಿದನು. ಸ್ಮಿತ್ಥನ ಆ ಉಪಕೃತಿಯ ಬಗ್ಗೆ ಮಲ್ಲಿಗೆಯ ಹೂವು ಕೃತಜ್ಞತೆಯನ್ನು ತೋರ್ಪ ಡಿಸಿದಳು.

× × × × ×

ಶರತ್‌ಋತುವಿನ ಪ್ರಾರಂಭದಲ್ಲಿಯೇ ರಾಬರ್ಟ ವೆಭಾಸನ ಆ ಹಳ್ಳಿಯಲ್ಲಿ ಮೇರಿ-ರಿಚರ್ಡರ ವಿವಾಹವು ಬಹು ವಿಜೃಂಭಣೆಯಿಂದ ನೆರವೇರಿತು. ಆ ಲಗ್ನ ಕ್ಕೆಂದು ರಾಬರ್ಟ ಬ್ಲೇಕನು ಸ್ಮಿತ್ಥನೊಡನೆ ಆ ಕೊಯಾಂಟಿಕ್ ಗ್ರಾಮಕ್ಕೆ ಹೋಗಿದ್ದನು. ಆ ನವದಂಪತಿಗಳು ಬ್ಲೇಕನಿಗೆ ಪೊಡಮೊಡಲು, ಅವನು ಅವರಿಗೆ ಅಂತಃಕರಣಪೂರ್ವಕವಾಗಿ ಆಶೀರ್ವದಿಸಿದನು.

‡ ‡ ‡ ‡ ‡

ರಿಚರ್ಡನು ಮೇರಿಯನ್ನು ಲಗ್ನವಾಗಿ ಸಂತಸಗೊಂಡುದೇನೋ ನಿಜ; ಆದರೆ ಪಿರಂಗಿಯಾದ ಉಷಡ ಚಂಡನ ಭೀಷಣವಾದ ಪ್ರತಿಹಿಂಸೆಯು ಹಾಗು ತನ್ನ ತಂದೆಯ ಶೋಚನೀಯವಾದ ದುರ್ಮರಣದ ನೆನಪಿನಿಂದ ಆತನ ಚಿರಜೀವನದಲ್ಲಿ ವಿಷಾಕ್ತವಾದ ಕಾದ ಕುಳದಿಂದ ಆಗಾಗ್ಗೆ ಬರೆ ಹಚ್ಚಿದಂತಾಗುತ್ತಿತ್ತೆಂಬದು ಸುಳ್ಳಲ್ಲ.



ಸಂಪೂರ್ಣ